ಮನೆ ಮಂದಿಗೆಲ್ಲ ಮುದ ನೀಡುವ ಮಾಸಿಕ

ಜುಲೈ ೧೯

# ಕಸ್ತೂರಿ

ರೂ. ೬-೦೦

## ಜಾಣನ ಕೈಗೆ ಗೋಣಿ ಸಿಕ್ಕರೆ ...





# ಕಸ್ತೂರಿ

ಕನ್ನಡ ಡೈಜೆಸ್ಟ್

ಲೋಕ ಶಿಕ್ಷಣ ಟ್ರಸ್ಟಿನ
ಹೆಮ್ಮೆಯ ಕಾಣಿಕೆ

ವ್ಯವಸ್ಥಾಪಕ ಸಂಪಾದಕ:
ಕೆ. ಶಾಮರಾವ್

ಸಂಪಾದಕ:
ಎನ್.ವಿ. ಜೋಶಿ

ಸಹಸಂಪಾದಕ:
ವೆಂಕಟನಾರಾಯಣ

ನಿರ್ವಹಣೆ:
ಗೋಪಾಲ ವಾಜಪೇಯಿ
ಶ್ರೀಕಾಂತ ಮಳಗಿ

ಕಲೆ:
ಪಿ.ಆರ್. ಪಾಟೀಲ
ಎಂ.ಎಸ್. ಶಶಿಧರ

ಮುಖಪುಟ:
ಗೋಣಿ ಬಟ್ಟೆಗಳಲ್ಲಿ
ಜಾಣೆಯರು:
ಕೃಪೆ: ಜೆಎಂಡಿಸಿ,
ಕಲಕತ್ತಾ

ಕೊನೆಯ ರಕ್ಷಾಪುಟ:
ಮೇಘಮೇಳ
('ಕಸ್ತೂರಿ'ಯ
ಸಂಗ್ರಹದಿಂದ)

ಕಸ್ತೂರಿ ಕಾರ್ಯಾಲಯ,
ಕೊಪ್ಪೀಕರ ರಸ್ತೆ
ಹುಬ್ಬಳ್ಳಿ-೫೮೦ ೦೨೦.

## ಚಿಂತನ

ಮನುಷ್ಯ ಸದಾ ಹೊಸದನ್ನು ಹಂಬಲಿಸುವ ಮನಸ್ಸುಳ್ಳವ. ನವನವೋನ್ಮೇಷಶಾಲಿ ಪ್ರತಿಭೆಯುಳ್ಳವರು ಜತೆಗಾರರ ಒಳಿತಿಗಾಗಿ ಬದುಕಿನ ಎಲ್ಲ ಅಂಗಗಳಲ್ಲೂ ಹೊಸತನವನ್ನು ತುಂಬುವ ತರಾತುರಿಯಲ್ಲಿರುತ್ತಾರೆ. ಹೊಟ್ಟೆ-ಬಟ್ಟೆಗಳ ವಿಷಯದಲ್ಲಾಗಲಿ, ಆರೋಗ್ಯದ ವಿಚಾರವಾಗಿಯಾಗಲಿ ಬರುವ ಹೊಸತನಗಳು ಒಮ್ಮೆಲೇ ಜನರ ಗಮನ ಸೆಳೆಯುತ್ತವೆ.

ಆದರೆ ಹೊಸತು ಏನಿದೆ ಜಗತ್ತಿನಲ್ಲಿ? ಎಲ್ಲವೂ ಹಳೆ ಬೇರಿನ ಮೇಲೆ ಬೆಳೆದ ಹೊಸ ಚಿಗುರೇ ಅಲ್ಲವೆ? ಅಂದ ಮಾತ್ರಕ್ಕೆ ಹೊಸತೆಲ್ಲವೂ ಹೊನ್ನು ಎಂದರ್ಥವೆ? ಊಹುಂ, ಖಂಡಿತಕ್ಕೂ ಅಲ್ಲ. ಹೊಳೆಯುವುದೆಲ್ಲವೂ ಹೇಗೆ ಚಿನ್ನವಲ್ಲವೊ ಹಾಗೆ ಹೊಸದೆಲ್ಲವೂ ಎಲ್ಲರಿಗೂ ಗ್ರಾಹ್ಯವಲ್ಲ.

ದಿರಿಸಿನ ವಿಷಯಕ್ಕೆ ಬರೋಣ. ಹಿಂದೆ ವನವಾಸಕ್ಕೆ ಹೋಗುತ್ತಿದ್ದವರು ನಾರು ಬಟ್ಟೆ ತೊಡುತ್ತಿದ್ದರೆಂದು ಓದಿ ಗೊತ್ತು. ಈಗ ಮತ್ತೆ ನಾವು ಹಳೆಗಾಲಕ್ಕೆ ತಿರುಗಿದ್ದೇವೆಯೆ? ಸೆಣಬು ಇದೀಗ ಸುಂದರ ಬಟ್ಟೆ ಹಾಗೂ ಮತ್ತೇನೇನೆಲ್ಲ ದೈನಂದಿನ ಉಪಯೋಗಿ ವಸ್ತುವಾಗಿ ನಿಂತಿದೆಯಲ್ಲ! 'ಈ ಹಗುರ ಬಟ್ಟೆಗಳು ಮನಸ್ಸನ್ನು ಹಗುರಗೊಳಿಸುತ್ತವೆ' ಎಂಬುದು ಅವನ್ನು ಧರಿಸಿದವರೆಲ್ಲರ ಅಭಿಪ್ರಾಯ.

ಗಮನಿಸಬೇಕಾದ ವಿಚಾರಗಳು ಬಹಳಷ್ಟಿವೆ. ಪ್ರಾಣಿಗಳಂಥ ಪ್ರಾಣಿಗಳು ತಮ್ಮ ಆರೋಗ್ಯ ರಕ್ಷಣೆಗಾಗಿ ಪ್ರಕೃತಿಯನ್ನೇ ನಂಬಿಕೊಂಡಿವೆ. ಆದರೆ ನಾವು? ಅತ್ಯಾಧುನಿಕ ಯಂತ್ರೋಪಕರಣ, ತಂತ್ರಜ್ಞಾನಗಳ ದಾಸರಾಗಿದ್ದೇವೆ. ಇಂಥವಕ್ಕೆ ನಮ್ಮನ್ನು ನಾವು ಒಡ್ಡಿಕೊಳ್ಳುವುದು ಎಷ್ಟರ ಮಟ್ಟಿಗೆ ಸರಿ?

'ಊಟ ಬಲ್ಲವನಿಗೆ ರೋಗವಿಲ್ಲ' ಎಂಬುದು ಅನುಭವಕ್ಕೆ ಬಂದರೂ ನಾವು ಕಡೆಗಣಿಸುತ್ತಲೇ ಬಂದಂಥ ಸಂಗತಿ. ಇದನ್ನು ಗೌರವಿಸಿದರೆ ನಾವು ಗುಣವಂತರಾಗುವುದು ದಿಟ.

-ವ್ಯವಸ್ಥಾಪಕ ಸಂಪಾದಕ



# ಸಹಚಿಂತನ

**ಸಂತತಿಯೊಂದರ ಅಂತ್ಯದ ಕಥೆ**

ಮೇ ತಿಂಗಳ 'ಪುಸ್ತಕ ವಿಭಾಗ'ದಲ್ಲಿ ಚಂದ್ರಕಾಂತ ಪೋಕಳೆಯವರು ಅನುವಾದಿಸಿದ ಜಿ.ಎ. ಕುಲಕರ್ಣಿಯವರ ನೀಳ್ಗತೆ 'ನಿರ್ವಂಶ' ಓದಿದ ನಂತರ ಶತಮಾನಗಳಿಂದ ಉಳಿದುಕೊಂಡು ಬಂದ ಒಂದು ಜನಾಂಗದ ಸಂಸ್ಕೃತಿ ಕಾಲನ ತುಳಿತಕ್ಕೆ ಸಿಕ್ಕು ವಿನಾಶದ ಅಂಚಿಗೆ ಸರಿಯುತ್ತಿದೆಯಲ್ಲ ಎಂಬ ಚಿಂತೆ ಕಾಡತೊಡಗಿತು. ಕಥೆಯಲ್ಲಿ ಬರುವ ದಾನಯ್ಯ ಕೇವಲ ಒಂದು ಪಾತ್ರವಾಗಿ ಉಳಿಯದೆ ಕೃಷ್ಣಗಾರುಡಿಗನ ಧ್ವನಿಯಾಗಿ ಹೊರಹೊಮ್ಮಿದ್ದಾನೆ.

-ಕಲ್ಲೇಶ್ ಕುಂಬಾರ್, ಹಾರೂಗೇರಿ

'ನಿರ್ವಂಶ' ಪುಸ್ತಕ ವಿಭಾಗದಲ್ಲಿ ಒಂದೇ ಚಿತ್ರವನ್ನು ಪುನರಾವರ್ತಿಸಿ ಅದೆಷ್ಟು ಪುಟಗಳನ್ನು ಹಾಳು ಮಾಡಿದ್ದೀರಿ! ಬದಲು ಅದೇ ಸ್ಥಳದಲ್ಲಿ ಹನಿಗವನಗಳನ್ನು, ಜಪಾನೀ ಹೈಕುಗಳನ್ನು ಪ್ರಕಟಿಸಿದ್ದರೆ ಎಷ್ಟು ಚೆನ್ನಾಗಿತ್ತು! ಕಥೆಗಳ ಟೈಟಲ್ ಚಿತ್ರವನ್ನೇ ಪದೆ ಪದೆ ಪ್ರಕಟಿಸುವ ಆಂಗ್ಲ ಪತ್ರಿಕೆಗಳನ್ನು ಅನುಕರಿಸದೆ 'ಕಸ್ತೂರಿ'ಯು ಸ್ವಂತಿಕೆಯನ್ನು ಉಳಿಸಿಕೊಳ್ಳಲಿ.

-ಆರ್.ಎಸ್. ಕುಲಕರ್ಣಿ, ರಾಮದುರ್ಗ

ದಾನಯ್ಯನ ಬಾಳಿನಲ್ಲಿ ಅಕಸ್ಮಾತ್ತಾಗಿ ಪ್ರವೇಶಿಸಿ, ಹುಚ್ಚು ಮುದುಕಿಯಾಗಿ ಕಾಡಿ, ಆತ ಕೊನೆಯುಸಿರು ಎಳೆಯುವಾಗಲೂ ಅವಳ ಭ್ರಮೆಯನ್ನು ತಲೆಗೇರಿಸಿಕೊಂಡಿದ್ದು ಒಂದು ವಿಲಕ್ಷಣ ವ್ಯಕ್ತಿತ್ವದ ಚಿತ್ರಣವೇ ಸರಿ. ಕೃಷ್ಣಗೊಲ್ಲರ ಬದುಕು, ರೀತಿ-ರಿವಾಜುಗಳನ್ನು ಇಂದಿನವರಿಗೆ ತಮ್ಮ ನೀಳ್ಗತೆಯ ಮೂಲಕ ಪರಿಚಯಿಸಿದ್ದಕ್ಕೆ ಮೂಲ ಲೇಖಕರಾದ ಕುಲಕರ್ಣಿಯವರಿಗೂ ಅದನ್ನು ಅನುವಾದಿಸಿದ ಚಂದ್ರಕಾಂತ ಪೋಕಳೆಯವರಿಗೂ ಧನ್ಯವಾದಗಳು.

ನ್ಯಾಮತ್ ಬಾಶಾ ಹುಣಶ್ಯಾಳ, ಹೊನ್ನಳ್ಳಿ.

**ಬಗೆಹರಿಯದ ಪ್ರಶ್ನೆ**

ಮೇ ಸಂಚಿಕೆಯಲ್ಲಿ ಪ್ರಕಟವಾದ 'ಮಹಾಭಾರತ ಯುದ್ಧದ ಕಾಲ' ಕುರಿತು ಒಂದು ಜಿಜ್ಞಾಸೆ. ಕಳೆದ ಮಾರ್ಚ್ ತಿಂಗಳ ಮೊದಲ ವಾರದ 'ಕರ್ಮವೀರ'ದಲ್ಲಿ ಆದ್ಯ ರಾಮಾಚಾರ್ಯರು ಮಹಾಭಾರತದಲ್ಲಿ ಅಂತರ್ಗತವಾದ ವ್ಯಾಸೋಕ್ತಿಗಳನ್ನು ಆಧರಿಸಿ ಜ್ಯೋತಿಷ ಶಾಸ್ತ್ರದ ನಿಖರವಾದ ಆಧಾರಗಳೊಂದಿಗೆ ಕುರುಕ್ಷೇತ್ರದ ಯುದ್ಧ ನಡೆದ ಕಾಲ ಕ್ರಿಸ್ತ ಪೂರ್ವ ೧೬-೧೦-೩೦೬೭ ಎಂದು ಸಾಧಿಸಿದ್ದಾರೆ. ಈಗ 'ಕಸ್ತೂರಿ'ಯಲ್ಲಿ ಡಾ.ಎ.ಎಚ್. ಶಿವಯೋಗಿಸ್ವಾಮಿಗಳು ಮಹಾಭಾರತ ಯುದ್ಧವು ಕ್ರಿಸ್ತಪೂರ್ವ ೧೬-೧೦-೫೫೬೭ರಂದು ನಡೆದಿತ್ತು ಎಂದು ಗ್ರಹಗಳ ಕಾಲಗತಿಯನ್ನಾಧರಿಸಿ ಸಾಧಿಸಿದ್ದಾರೆ.

ಇಬ್ಬರಿಗೂ ಜ್ಯೋತಿಶಾಸ್ತ್ರ ಗ್ರಹಗತಿ ಹಾಗೂ ವ್ಯಾಸೋಕ್ತಿಗಳೇ ಆಧಾರವಾಗಿರುವಾಗ ಸುಮಾರು ೨೫೦೦ ವರ್ಷಗಳ ವ್ಯತ್ಯಾಸ ಹೇಗೆ ಸಾಧ್ಯ? ಋತುಮಾನಗಳು ೨೦೦೦ ವರ್ಷಕ್ಕೆ ಒಂದು ತಿಂಗಳು ಹಿಂದೆ ಅಥವಾ ಮುಂದೆ ಚಲಿಸುತ್ತವೆ ಎನ್ನುವುದಕ್ಕೆ ವೈಜ್ಞಾನಿಕ ಕಾರಣಗಳನ್ನು ಕೊಡಲಿಲ್ಲ. ಬಹುಶಃ ನಾವು ಲೆಕ್ಕಕ್ಕೆ ಹಿಡಿದ ಲೀಪ್ ವರ್ಷದಲ್ಲಿ ಉಳಿದ ತಾಸು, ನಿಮಿಷ, ಸೆಕೆಂಡುಗಳನ್ನು ಮೂರು ವರ್ಷಕ್ಕೆ ಒಂದು ದಿನ ಹೆಚ್ಚಾಗಿ ಹಿಡಿದರೂ ಅನಂತ ಪ್ರವಾಹದ ಕಾಲ ನಿರ್ಣಯದಲ್ಲಿ ಇನ್ನೂ ಉಳಿದೇ ಬರುವ ಕ್ಷಣಗಳೆಲ್ಲ ಸೇರಿ ಒಂದು ತಿಂಗಳಾಗಬಹುದೇನೋ!

-ಪ್ರೊ. ಎಸ್.ಜಿ. ಕಾರಜೋಳ್ಳ, [redacted]ಖಂಡಿ

**ಇದೆಂಥಾ ಅನ್ಯಾಯ!**

ತಾವು ಇಂತಹ ಅನ್ಯಾಯ ಮಾಡಬಹುದೆ? ರಕ್ತಕೋಡಿಗೆ, ಜನ್ನಾ ಬಂಗಲೆ, ಗೂಢಚಾರಿಣಿಯೊಬ್ಬಳ ಪ್ರೇಮಪ್ರಕರಣ, ನೀಳ್ಗತೆ 'ನಿರ್ವಂಶ' ಇಂತಹ ಸೊಗಸಾದ ಕಥೆ-ಲೇಖನಗಳನ್ನು ಒಂದೇ ಸಂಚಿಕೆಯಲ್ಲಿ ಕಂಡಾಗ ವಿಧವಿಧವಾದ ಸಿಹಿತಿಂಡಿಗಳನ್ನು ಒಟ್ಟಿಗೇ ನೋಡಿ ಯಾವುದನ್ನು ತಿನ್ನಲಿ, ಯಾವುದನ್ನು ಬಿಡಲಿ ಎಂಬ ಮಗುವಿನ ಸ್ಥಿತಿಯಾಯಿತು ನಮ್ಮದು! ಅಂದಹಾಗೆ 'ನಾಸ್ಟಾಲ್ಜಿಯಾ' ಮರೆಯಾಗಿದೆಯಲ್ಲಾ, ಮತ್ತೆ ತರುವಿರಾ?

-ಸುಮತಿ ಕೃಷ್ಣರಾವ್, ತುಮಕೂರು

(ಹಳೆ ನೆನಪುಗಳು ಆಗಾಗ ಮರುಕಳಿಸುತ್ತಲೇ ಇರುತ್ತವೆಯಲ್ಲ! -ಸಂ)

**ಮಾನವೀಯತೆ ಸತ್ತಿದೆಯೆ?**

ಮೇ ಸಂಚಿಕೆಯ 'ನೆನಪು ನೆರಳಿನಲ್ಲಿ' ಪ್ರಕಟವಾದ ಬಸವರಾಜ ತಗ್ಗಿನಮಠ ಅವರ ಅನುಭವ ಕಥನ ಓದಿದೆ. ಹೆಣ ಮುಟ್ಟಿ ಅವರು ಅದನ್ನು ಇಳಿಸಿದ್ದು ಅವರ ದೊಡ್ಡ ಗುಣ. ಅದನ್ನು ಮುಟ್ಟಿ ಕೆಳಗಿಳಿಸಲು ಇತರರು ಹಿಂಜರಿಯುವಲ್ಲಿ ಅಂಧಶ್ರದ್ಧೆಯ ಛಾಯೆಯಿದೆ. ನಿಜವಾಗಿಯೆಂದರೆ ನಮ್ಮಲ್ಲಿನ ಬಹುಪಾಲು ಜನ ಮಾನವೀಯ ಮೌಲ್ಯಗಳನ್ನೇ ಕಳೆದುಕೊಂಡಿದ್ದಾರೆ.

-ಸುಮಿತ್ರಾ ದೇಶಪಾಂಡೆ, ಬೂದಿಹಾಳ

**ಯಾವುದು ಮೊದಲು?**

ಮೇ ಸಂಚಿಕೆಯ 'ಜ್ಞಾನನಿಧಿ'ಯಲ್ಲಿ ಕನ್ನಡದ ಪ್ರಥಮ ಹಾಸ್ಯಪತ್ರಿಕೆ 'ವಿಕಟ ಪ್ರತಾಪ' ಎಂದು ಅನಿತಾ ಶಶಿಕುಮಾರ್ ಬರೆದಿದ್ದಾರೆ. ಆದರೆ ನನಗೆ ಗೊತ್ತಿರುವ ಪ್ರಕಾರ ಸುಮಾರು ೬೦ ವರ್ಷಗಳಿಗೂ ಹಿಂದೆ -೩೦ರ ದಶಕದಲ್ಲಿ ಚಿಕ್ಕಬಳ್ಳಾಪುರದಿಂದ ದಿವಂಗತ ತಿ.ತಾ. ಶರ್ಮರ ಸಹೋದರ ತಿರುಮಲೆ ಗೋಪಾಲಾಚಾರ್ಯರು 'ವಿನೋದ ಪ್ರಪಂಚ' ಎಂಬ ಹಾಸ್ಯ ಮಾಸಪತ್ರಿಕೆಯನ್ನು ಹೊರಡಿಸುತ್ತಿದ್ದರು. ಒಂದು ವೇಳೆ 'ವಿಕಟ ಪ್ರತಾಪ'ವು ೧೯೩೦ಕ್ಕೂ ಹಿಂದೆಯೆ ಪ್ರಕಟವಾಗುತ್ತಿದ್ದರೆ ಅದೇ ಪ್ರಥಮ ಹಾಸ್ಯಪತ್ರಿಕೆಯೆಂದು ಒಪ್ಪಲು ನನ್ನ ಅಭ್ಯಂತರವೇನೂ ಇಲ್ಲ.

ವಿ.ಟಿ. ಶಂಕರನಾರಾಯಣರಾವ್, ಬೆಂಗಳೂರು.

**ಅಕ್ಕರೆಯ ತಂದೆ**

ಜೂನ್ ತಿಂಗಳಲ್ಲಿ ಪ್ರಕಟವಾದ ವೀರೇಂದ್ರ ಸಿಂಪಿಯವರ 'ಅಕ್ಕರೆಯ ತಂದೆಯ ಆ ನೋವಿನ ಯಾತ್ರೆ'ಯಿಂದ ಚಡಚಣದ ಶಿಕ್ಷಕ ಶಿಲ್ಪಿಯ ಬಗೆಗೆ ಅನನ್ಯ ಮಾಹಿತಿ ದೊರೆಯಿತು.

-ಬಿ.ಜಿ. ಗಾಣಿಗೇರ, ಮಂಗಳೂರು

**ಸರಿಯೆ?**

ಜೂನ್ ಸಂಚಿಕೆಯಲ್ಲಿ ಪ್ರಕಟವಾದ ಕೆ.ಎ. ರಹೀಮ್‌ರವರ 'ಪುರುಷರು ನಪುಂಸಕರಾಗುತ್ತಿದ್ದಾರೇನು?' ಎಂಬ ಕಿರು ಬರಹದಲ್ಲಿ ೧೯೩೮ರಲ್ಲಿ ಒಂದು ಮಿಲಿಲೀಟರ್ ವೀರ್ಯದಲ್ಲಿ ೧.೧೩ ಕೋಟಿ ವೀರ್ಯಾಣುಗಳಿದ್ದರೆ ೧೯೯೦ರಲ್ಲಿ ಅದೇ ಒಂದು ಮಿಲಿಲೀಟರ್ ವೀರ್ಯದಲ್ಲಿನ ವೀರ್ಯಾಣುಗಳ ಸಂಖ್ಯೆ ೬.೬ ಕೋಟಿಗೆ ಇಳಿದಿತ್ತು ಎಂದಿದೆ. ಯಾವುದು ಸರಿ?

-ಜಿ.ಬಿ. ಹರ್ಷವರ್ಧನ, ಇಟ್ಟಿಗೆ

(ಇಸವಿಗಳು ಸರಿಯಾಗಿದ್ದರೂ ಅಂಕಿಗಳು ತಿರುವುಮುರುವಾದ್ದರಿಂದ ಹೀಗಾಯಿತು. ಅದಕ್ಕಾಗಿ ವಿಷಾದಿಸುತ್ತೇವೆ. -ಸಂ.)

**ಮನೋರಿಯ ಮಹಾಸಮರ**

ವೈದ್ಯರ ಹೊಣೆಗೇಡಿತನವೇ ತನ್ನ ಮಗುವಿನ ಅಂಧತ್ವಕ್ಕೆ ಕಾರಣ ಎಂಬುದನ್ನು ನ್ಯಾಯಾಲಯಕ್ಕೆ ಮನವರಿಕೆಯಾಗುವಂತೆ ನಿರೂಪಿಸಿ, ಇಪ್ಪತ್ತೊಂದು ವರ್ಷಗಳಷ್ಟು ಕಾಲ ಹೋರಾಡಿ ನ್ಯಾಯವನ್ನು ಪಡೆದುಕೊಂಡ ಈ ಸತ್ಯಕಥೆ ನಿಜಕ್ಕೂ ಅಸಾಧಾರಣವಾದದ್ದು.

-ರೂಪಾ ಮರಿಗೇರಿ, ಬೆಳಗಾವಿ

(ಆರನೇ ಪುಟಕ್ಕೆ)

# ಅಂತರಂಗ











## ಆರೋಗ್ಯದಂಗಳ

## ಸ್ವಾಸ್ಥ್ಯ ಸಲಹೆಗಳು



## ಬೆಳಕಿಂಡಿ

* ಮುಳುಗದಿರು, ಜೀವನದ ತೆರೆಯ ಮೇಲೀಜುತಿರು ।
ಒಳಿತನಾಗಿಸು, ಕೊಡುತ ಕೊಳುತ ಸಂತಸವ ॥

ಕಳವಳಂಬಡದೆ ನಡೆ ಕಡೆಯ ಕರೆ ಬಂದಂದು ।
ಮಿಳಿತವಿರು ವಿಶ್ವದಲಿ ಮಂಕುತಿಮ್ಮ ॥

-ಡಿ.ವಿ.ಜಿ.

* ಸ್ವರ್ಗಕ್ಕಿರುವ ಹಾದಿ ಒಂದೇ ಒಂದು. ಆದರೆ ನರಕಕ್ಕಿರುವಂಥವು ಸಾವಿರಾರು.

-ಯಹೂದಿ ಗಾದೆ

* ಆಳ ಕಡಿಮೆಯಾದಂತೆಲ್ಲ ಉದ್ದದಲ್ಲಿ ಜಾಸ್ತಿಯಾಗುವ ರಬ್ಬರಿನಂತಹದುಕ್ಕೆ ಭಾಷಣ ಎಂದು ಹೆಸರು.

-ಬೀಚಿ

* ಶಿಕ್ಷಣದ ಉದ್ದೇಶ ವೇಳೆಯ ಸದುಪಯೋಗ.

-ಅರಿಸ್ಟಾಟಲ್

* ಏನನ್ನೂ ಕಳೆದುಕೊಳ್ಳದೆ ಏನನ್ನೂ ಪಡೆದುಕೊಳ್ಳಲಾರೆ.

-ರಶಿಯದ ಗಾದೆ

## ಸ್ಥಿರ ಶೀರ್ಷಿಕೆಗಳು

(ಮೂರನೇ ಪುಟದಿಂದ)

## ನಾರು ಹುಣ್ಣು

ಜೂನ್ ಸಂಚಿಕೆಯಲ್ಲಿ ಡಾ. ಸ.ಜ. ನಾಗಲೋಟಿಮಠರು ನಾರುಹುಣ್ಣಿನ ಬಗ್ಗೆ ತಮಗೆ ಬಂದ ಅನುಭವಗಳನ್ನು ಚಿತ್ರಸಹಿತವಾಗಿ ಜನಸಾಮಾನ್ಯರಿಗೆ ಅರ್ಥವಾಗುವಹಾಗೆ ವಿವರಿಸಿದ್ದಾರೆ. ಅವರಿಂದ ಇಂತಹ ಇನ್ನೂ ಹೆಚ್ಚಿನ ವೈದ್ಯಕೀಯ ಲೇಖನಗಳನ್ನು ನಿರೀಕ್ಷಿಸುತ್ತೇನೆ.

-ದೀಪಿಕಾ ಅಣ್ಣಿಗೇರಿ, ಬೆಳಗಾವಿ

## ವಿಚಿತ್ರ ಗಣಿತ ಸಮಸ್ಯೆಗಳು

ಮೇ ಸಂಚಿಕೆಯಲ್ಲಿ ನಾನು ಬರೆದ, ಮೇಲೆ ಸೂಚಿಸಿದ ಶಿರೋನಾಮೆಯ, ಲೇಖನವನ್ನು ಬಹು ಚೆನ್ನಾಗಿ ಪ್ರಕಟಿಸಿದ್ದೀರಿ. ಆದರೆ ಲೇಖನದ ಕೊನೆಯಲ್ಲಿ ಫಾರ್ಮಾಟನ ಸಮಸ್ಯೆಯಲ್ಲಿ $x_n + y_n = z_n$ ಎಂದು ಪ್ರಕಟವಾಗಿದೆ. ವಾಸ್ತವರಾಗಿ ಅದು $x^n + y^n = z^n$ ಎಂದಾಗಬೇಕಿತ್ತು. ಅಲ್ಲದೆ ಈತ ಈ ಸಮೀಕರಣವನ್ನು ಮಾತ್ರ ರಚಿಸಿದ್ದು ಪರಿಹಾರ ಅಥವಾ ಅದರ ಸಿದ್ಧಾಂತವನ್ನಲ್ಲ. ಅದನ್ನು ೩೦೦ ವರ್ಷಗಳಾದರೂ ಈ ತನಕ ಸೈದ್ಧಾಂತಿಕವಾಗಿ ಸಾಧಿಸಲು ನಮಗಾಗಿಲ್ಲ ಎಂದು ಪ್ರಕಟವಾಗಬೇಕಿತ್ತು.

-ದೇವಿಪ್ರಸಾದ, ಕಟೀಲು

## ಪ್ರಮೇಯ ಸಾಧಿತವಾಗಿದೆ

ಮೇ ತಿಂಗಳ ಕಸ್ತೂರಿಯ ವಿದ್ಯಾರ್ಥಿ ಅಂಕಣ 'ಜ್ಞಾನನಿಧಿ'ಯಲ್ಲಿ ಪ್ರಕಟವಾದ "ವಿಚಿತ್ರವಾದ ಗಣಿತ ಸಮಸ್ಯೆಗಳು" ಕುತೂಹಲ ಕೆರಳಿಸುವಂತಹ ಲೇಖನ. ದ್ವಿಧಾಭಾವ ಮತ್ತು ತಿಣುಕಿಸುವ ಸಮಸ್ಯೆಗಳನ್ನು ನಮ್ಮ ಮುಂದಿಟ್ಟು ತಲೆಗೊಂದಿಷ್ಟು ಕೆಲಸ ಕೊಟ್ಟಿತು. ಸದರಿ ಲೇಖನದಲ್ಲಿ ಬಳಸಿರುವ ಕೆಲವು ಹೆಸರುಗಳು ಮೂಲ ಉಚ್ಚಾರಕ್ಕಿಂತ ಭಿನ್ನವಾಗಿವೆ. ಫಾರ್ಮಾಟ್ ಎಂದಿರುವುದು "ಫಾರ್ಮಾ" ಎಂದಾಗಬೇಕು. (ಹಿಂದೊಮ್ಮೆ ತಮ್ಮ ಪತ್ರಿಕೆಯಲ್ಲಿಯೇ ಕಾರ್ಲ್‌ಯೂಂಗನ ಹೆಸರು ಕಾರ್ಲ್‌ಜಂಗ್ ಎಂದು ಪ್ರಕಟವಾಗಿತ್ತು.)

ಫಾರ್ಮಾನ ಕೊನೆಯ ಪ್ರಮೇಯವು ಇತ್ತೀಚಿನವರೆಗೂ ಸಾಧಿಸಲು ಅಶಕ್ಯವೆಂಬ ಭಾವನೆಯೇ ಎಲ್ಲರಲ್ಲಿತ್ತು. ಆದರೆ ಅದನ್ನು ಇದೇ ದಶಕದಲ್ಲಿ ಅಂದರೆ ೨೩-೬-೧೯೯೩ರಂದು ನ್ಯೂಜರ್ಸಿಯ ಪ್ರಿನ್ಸ್‌ಟನ್ ವಿಶ್ವವಿದ್ಯಾಲಯದಲ್ಲಿ ಗಣಿತಜ್ಞನಾಗಿ ಕಾರ್ಯನಿರ್ವಹಿಸುತ್ತಿರುವ ೪೦ ವರ್ಷದ ಆಂಡ್ರ್ಯೂವಿಲ್ಸ್ ಕೇಂಬ್ರಿಡ್ಜ್ ವಿಶ್ವವಿದ್ಯಾಲಯದಲ್ಲಿ ವಿಶೇಷ ಉಪನ್ಯಾಸ ಸರಣಿಯ ಕೊನೆಯಲ್ಲಿ ಫಾರ್ಮಾನ ಕೊನೆಯ ಪ್ರಮೇಯವನ್ನು ಸಾಧಿಸಿದ್ದಾಗಿ ಪ್ರಕಟಿಸಿದ. ವಿಶ್ವದ ವಿಖ್ಯಾತ ಗಣಿತಜ್ಞರುಗಳು ಆ ಪರಿಹಾರವನ್ನು ಪರೀಕ್ಷಿಸಿ ಸದರಿ ಪರಿಹಾರ ಸೂಕ್ತ ಹಾಗೂ ಪರಿಪೂರ್ಣವೆಂದು ಸಿದ್ಧಪಡಿಸಿದ್ದಾರೆ. ಸುಮಾರು ೩೫೦ ವರ್ಷಗಳಿಗೂ ಹೆಚ್ಚು ಕಾಲ ಸಾಧಿಸಲಸಾಧ್ಯವೆಂದು ತಿಳಿದಿದ್ದ ಫಾರ್ಮಾನ ಪ್ರಮೇಯ ಸಾಧಿತವಾಗಿದೆ. ಅಲ್ಲದೆ ಫಾರ್ಮಾನ ಪ್ರಮೇಯ ಹೀಗೆ ಇರಬೇಕು: $x^n + y^x = z^n$.

ಫಾರ್ಮಾನ ಕೊನೆಯ ಪ್ರಮೇಯವನ್ನು ಸಾಧಿಸಿ ತೋರಿಸಿದ್ದಕ್ಕಾಗಿ ಆಂಡ್ರ್ಯೂವಿಲ್ಸ್‌ರನ್ನು ಪ್ರಪಂಚದಾದ್ಯಂತ ಅಭಿನಂದಿಸಲಾಯಿತು. ಬೃಹತ್ ಪ್ರಮಾಣದ ನಗದು ಬಹುಮಾನ ಕೂಡ ದೊರೆಯಿತು. ೧೬೩೭ರಿಂದ ೧೯೯೩ರವರೆಗೆ ವಿಶ್ವದ ಗಣಿತಜ್ಞರನ್ನು ಕಾಡುತ್ತಿದ್ದ ಫಾರ್ಮಾನ ಪ್ರಮೇಯ ಇದೀಗ ಸಾಧಿತವಾಗಿರುವುದರ ಬಗ್ಗೆ ವಿವರಗಳನ್ನು ಗಣಿತ ಪತ್ರಿಕೆಗಳಲ್ಲಿ, ಅಂತಾರಾಷ್ಟ್ರೀಯ ಜರ್ನಲ್‌ಗಳಲ್ಲಿ ಕಾಣಬಹುದು. ೧೯೯೪ರ ಮನೋರಮಾ ಇಯರ್ ಬುಕ್‌ನ ಪುಟ ೧೬೦ರಲ್ಲಿ ಫಾರ್ಮಾ ಹಾಗೂ ಆಂಡ್ರ್ಯೂವಿಲ್ಸ್ ಇಬ್ಬರ ಛಾಯಾಚಿತ್ರಗಳು ಹಾಗೂ ವಿವರ ಪ್ರಕಟವಾಗಿವೆ.

-ಚೇದ್ರೆ ಎನ್. ಮಂಜುನಾಥ, ಚಿತ್ರದುರ್ಗ



# ಕಸ್ತೂರಿ

ವರ್ಷ: ೪೦ ಜುಲೈ ೧೯೯೬ ಸಂಚಿಕೆ ೧೧


## ಧರ್ಮೋಪನಿಷತ್ತು

ನಿಷ್ಕ್ರಿಯತೆ ಧರ್ಮವಲ್ಲ, ಕ್ರಿಯಾತ್ಮಕತೆಯೆ ಧರ್ಮ. ಅದು ಪುರುಷಾರ್ಥಗಳಿಂದ ಉಪಾರ್ಜಿತ. ಕ್ರಿಯೆಯಿಂದ ನಿಷ್ಪನ್ನಗೊಳ್ಳುವಂಥದು. ಆದ್ದರಿಂದಲೇ ಜ್ಞಾನಿಗಳು ಪ್ರೇರಣೆಯನ್ನು ಧರ್ಮದ ಲಕ್ಷಣವೆಂದು ವರ್ಣಿಸಿದ್ದಾರೆ. ಐಹಿಕ ಮತ್ತು ಪಾರಲೌಕಿಕ ಸುಖ-ಸಿದ್ಧಿಯ ಸಾಧನವೆಂದು ಹೇಳಿದ್ದಾರೆ. ಒಂದು ವೇಳೆ ಧರ್ಮ ಅಕ್ರಿಯಾರೂಪವಾಗಿದ್ದಾದರೆ ತೋಳ ಮತ್ತು ಕುರಿಗಳು ಎಂದೂ ಅಸತ್ಯ ಭಾಷಣ ಮಾಡುತ್ತಿರಲಿಲ್ಲ,

ಮುಗ್ಧ ಪ್ರಾಣಿಗಳು ಮನುಷ್ಯನ ಹೆಜ್ಜೆಯ ಸದ್ದನ್ನು ಕೇಳುತ್ತಲೇ ದೂರ ಓಡಿ ಹೋಗುತ್ತವೆ. ಯಾವುದೇ ರೀತಿಯ ಹಿಂಸೆಗೂ ತೊಡಗುವುದಿಲ್ಲ. ಆದರೆ ಅವುಗಳನ್ನು ಎಂದಾದರೂ ಪರಮದಯಾಳುವೆಂದು ಯಾರಾದರೂ ಕರೆದುದುಂಟೆ? ಯಾವನೇ ಕುರುಡ, ಕಿವುಡ, ಮೂಕ ಮತ್ತು ವಿಕಲ ಶರೀರಿ ಮನುಷ್ಯ ವನದಲ್ಲಿ ಬದುಕಿರುತ್ತ ಯಾವುದೇ ಅಶುಭವನ್ನು ಚಿಂತಿಸುವುದಾಗಲಿ, ನೋಡುವುದಾಗಲಿ, ಮಾಡುವುದಾಗಲಿ, ಕೇಳುವುದಾಗಲಿ ಮಾಡದೇ ಇದ್ದರೂ ಯಾರಾದರೂ ಆತನನ್ನು ಮುನಿ ಎಂದು ಗೌರವಿಸಿದ್ದುಂಟೆ? ಉನ್ಮತ್ತ ಇಲ್ಲವೆ ಮೂರ್ಚಿತ ವ್ಯಕ್ತಿ ಸಂಕಲ್ಪ-ವಿಕಲ್ಪ ಶೂನ್ಯನೇ ಆಗಿರುತ್ತಾನೆ. ಗಾಢ ನಿದ್ರೆಯಲ್ಲಿ ಯಾವುದೇ ಅಶುಭ ಕ್ರಿಯೆ ಅಸಂಭವ. ಆದರೂ ಅದು ಪುಣ್ಯೋಪಾರ್ಜನ ಸಮಯವೆಂದು ಯಾರಾದರೂ ಭಾವಿಸಿದ್ದುಂಟೆ?

ಅಶುಭ, ಆಚಾರ-ವಿಚಾರಗಳನ್ನು ಶುಭ ಆಚಾರ-ವಿಚಾರಗಳೆಂಬ ಪೆಟ್ಟುಕೊಟ್ಟು ಹೊರಗೋಡಿಸುವುದು ಮತ್ತು ಅವೆಂದೂ ತಿರುಗಿ ತಮ್ಮೆಡೆ ಸುಳಿಯದಂತೆ ಮಾಡುವುದು ಶುಭ ಸಂಪತ್ತಿಸಂಪಾದನೆಯ ಸರ್ವೋತ್ತಮ ಸಾಧನ.

ಈ ಸಾಧನ ಕ್ರಿಯಾಜನ್ಯವಾದದ್ದು. ಇದೇ ಧರ್ಮ.

-ಸ್ವಾಮಿ ಸತ್ಯಾನಂದ

ವಸ್ತ್ರ - ವಿನ್ಯಾಸ

# ಜಾಣನ ಕೈಗೆ ಗೋಣಿ ಸಿಕ್ಕರೆ...

'ಚಿನ್ನದ ಎಳೆ' ಎಂದೇ ಗೌರವಿಸಲ್ಪಡುವ ಸಣಬಿಗೆ ಈಗ ಶುಕ್ರದೆಸೆ. ಅದನ್ನು ನಂಬಿದವರಿಗೂ ಅಷ್ಟೇ. ಸಣಬಿನೊಂದಿಗೆ ಇನ್ನಿತರ ನೂಲುಗಳ ಮಿಶ್ರಣದಿಂದ, ವಸ್ತುಗಳ ಬೆರಕೆಯಿಂದ ಎಂಥ ಅದ್ಭುತ ವಸ್ತುಗಳು ಹುಟ್ಟಿಕೊಳ್ಳುವವೆನ್ನುತ್ತೀರಿ!

- ವೃಷಭೇಂದ್ರಯ್ಯ

ಕನ್ನಡದಲ್ಲಿ ಒಂದು ಗಾದೆಯಿದೆ - "ಗೋಣಿ ತಾಟಿನ ಮೇಲೆ ಹೆಣಿಕೆ ಹಾಕೋದುಂಟೆ?" ಅಂತ. ಅಂದರೆ ಕನಿಷ್ಟತಮ ಉದ್ದೇಶಗಳಿಗಾಗಿ ಮಾತ್ರ ಬಳಸಲ್ಪಡುವ ಗೋಣಿತಾಟು (ತಟ್ಟು) ಕಸೂತಿ ಯಂಥ ಕುಸುರಿ ಕೆಲಸಗಳಿಗೆ ತಕ್ಕುದಲ್ಲ, ಹೆಣಿಕೆ ಹಾಕುವುದೂ ತರವಲ್ಲ ಎಂಬುದು ಇದರ ತಾತ್ಪರ್ಯ.

ಎಂದಿನಿಂದಲೂ ಗೋಣಿ ನಮಗೆ, ಕರ್ನಾಟಕ ದವರಿಗೆ, ಕೃಷಿ ಉತ್ಪನ್ನಗಳನ್ನು ತುಂಬಿಡಲು ಬಳ ಸುವ ಚೀಲವಾಗಿ ಮಾತ್ರ ಗೊತ್ತು. ಆದರೆ ಮೂಲವಸ್ತುವಾದ ಸಣಬು ತುಂಬ ಗಟ್ಟಿ ಹಾಗೂ



ಈ ನಿಲುವಂಗಿ ಸಣಬಿನಿಂದಲೆ ಮಾಡಿದ್ದು!

ತಾಳಿಕೆಯ ಗುಣವುಳ್ಳ ನಾರು ಎಂಬುದನ್ನು ಅರಿತು ಅದನ್ನು ಮುಪ್ಪುರಿಗೊಳಿಸಿ ಸುತಳಿ(ದಾರ)ವನ್ನಾಗಿಸಿ, ಗೋಣಿಚೀಲವನ್ನಾಗಿ ಮಾಡಿಟ್ಟುಕೊಟ್ಟವರು ಬ್ರಿಟಿಷರು ಎಂಬುದು ಅಚ್ಚರಿಯ ಸಂಗತಿಯೆನಿಸೀತು. ಈ ರೀತಿಯ ಅದರ ಪ್ರಯೋಜನದ ಪರಿಚಯವಾದ ಮೇಲೆ ೧೯ನೆಯ ಶತಮಾನದಿಂದೀಚೆಗೆ, ಜಗತ್ತಿನ ಬಹುತೇಕ ದೇಶದವರು ಸಣಬು ಹಾಗೂ ಸಣಬು ನಾರಿನಿಂದ ಹೆಣೆಯಲ್ಪಟ್ಟ ಚೀಲಗಳನ್ನು ಹೆಚ್ಚು ಹೆಚ್ಚಾಗಿ ಪ್ರೀತಿಸತೊಡಗಿದರು.

ಇಂಥ ಚೀಲಗಳ ಮೇಲೆ ಮಸಿಯಿಂದ, ಬಣ್ಣಗಳಿಂದ ಹೆಸರು, ವಿಳಾಸಗಳನ್ನು ಬರೆಯಬಹುದು ಎಂದು ಗೊತ್ತಾದದ್ದೇ ಸಣಬಿನ ನಾರನ್ನು ಬೇರೆ ಬೇರೆ ಬಣ್ಣಗಳಲ್ಲಿ ಅದ್ದಿಡಲು ಪ್ರೇರಣೆಯಾಯಿತು. ಹತ್ತಿಯ ನಂತರದ ಸ್ಥಾನವನ್ನು ನೈಸರ್ಗಿಕ ನಾರುಗಳಲ್ಲಿ ಸಣಬಿಗೇ ನೀಡಲಾಯಿತು.

ಸಣಬು ದಕ್ಷಿಣ ಏಶಿಯಾ ಹಾಗೂ ನೈಋತ್ಯ ಏಶಿಯಾದ ರಾಷ್ಟ್ರಗಳಲ್ಲಿ ಸಾಂಪ್ರದಾಯಿಕ ರೀತಿಯಲ್ಲಿ ಬೆಳೆಸಲ್ಪಡುವಂಥದು. ಭಾರತ, ಬಂಗ್ಲಾದೇಶ, ಚೀನಗಳು ಕ್ರಮವಾಗಿ ಜಗತ್ತಿನ ಒಟ್ಟು ಸಣಬು ಬೆಳೆಯ ಶೇಕಡಾ ೬೦ ಹಾಗೂ ೯೫ರಷ್ಟನ್ನು ಒದಗಿಸುತ್ತವೆ. ಥೈಲ್ಯಾಂಡ್, ನೇಪಾಳಗಳಲ್ಲೂ ಇದರ ಕೃಷಿಯುಂಟು.

ಗೋಣಿಚೀಲ ಅಂದಕೂಡಲೇ ನಮಗೆ ಇನ್ನೂ ಒಂದೆರಡು ದೃಶ್ಯಗಳು ಕಣ್ಣಿಗೆ ಕಟ್ಟುತ್ತವೆ. ಕೊಡೆಗಳು ಕೊಳ್ಳಲು ಅಸಾಧ್ಯವಾದ ವಸ್ತುಗಳು ಎಂದು ಶ್ರೀಸಾಮಾನ್ಯ ಭಾವಿಸಿಕೊಂಡಿದ್ದ ದಿನಗಳಲ್ಲಿ ಧೋಧೋ ಮಳೆಯಿಂದ ಅವನನ್ನು ರಕ್ಷಿಸುತ್ತಿದ್ದುದೇ ಈ ಗೋಣಿಚೀಲಗಳ ಹೊದ್ದಿಕೆ. ಬಿರು ಬಿಸಿಲಿನಿಂದ ಬವಳಿ ಬಂದು ಬೀಳದಿರುವಂತೆ ಆತನ ತಲೆಯನ್ನು ಕಾಪಾಡುತ್ತಿದ್ದುದೂ ಈ ಗೋಣಿಚೀಲವೆ.

ಹೋಗಲಿ, ಹಳ್ಳಿಗಾಡುಗಳ ಎಷ್ಟೋ ಮನೆಗಳಲ್ಲಿ ಅಪ್ರಯೋಜನಕನನ್ನು 'ಗೋಣಿ ಪಾಟಿಗೇ ತಕ್ಕವ' ಎಂದು ಜರೆಯುವುದನ್ನೂ ಕೇಳುತ್ತೇವೆ. ಭಿಕಾರಿಗಳಿಗೂ, ಹುಚ್ಚರಾಗಿ ಬೀದಿ ಬೀದಿ ಅಲೆಯುವವರಿಗೂ ಹರಕು ಗೋಣಿ ಚೀಲವೇ ಹಾಸಿಗೆ ಹೊದ್ದಿಕೆ; ಅಷ್ಟೇ ಏಕೆ ತೊಡಲು ಬಟ್ಟೆ ಕೂಡ. ಹೊರಗಿನಿಂದ ಬಂದವರು ಕಾಲೊರೆಸಿಕೊಳ್ಳಲು ಇರಲಿ ಎಂದು ಮ್ಯಾಟ್‌ನಂತೆ ಗೋಣಿ ಚೀಲವನ್ನೇ



ಈ ನೀರೆ ತೊಟ್ಟದ್ದು
ಜೂಟ್ ಬಟ್ಟೆಗಳು !
ಜತೆಗಿರುವಂಥ
ವಸ್ತುಗಳು ಜೂಟಿನವೆ.

ಕೆಲಮನೆಗಳಲ್ಲಿ ಉಪಯೋಗಿಸುವುದೂ ಉಂಟು.

ದೈನಂದಿನ ಬದುಕಿನಲ್ಲಿ ಒಮ್ಮೊಮ್ಮೆ ಇಂಥ ನಿಕೃಷ್ಟ ವಸ್ತುವಿಗೂ ಎಲ್ಲಿಲ್ಲದ ಮಹತ್ವ ಬರುತ್ತದೆಂಬುದಕ್ಕೆ ನೀವು ಚೀಲವನ್ನು ಕಟ್ಟಲೊ ಅಥವಾ ಇನ್ನಾವುದಕ್ಕೋ ಒಂದು ಮೊಳ ಹುರಿ (ಸಣಬಿನ ದಾರ) ಹುಡುಕಿಕೊಂಡು ಅವರಿವರ ಮನೆಗೊ ಇಲ್ಲವೆ ಸಮೀಪದ ಜೀನಸಿ ಅಂಗಡಿಗೊ ಅಲೆದಾಡಿದ್ದೇ ಉದಾಹರಣೆ.

ಮನೆಯ ಶುಭ ಸಮಾರಂಭಕ್ಕೆ ಬಾಗಿಲನ್ನು

ತಳಿರು-ತೋರಣಗಳಿಂದ ಸಿಂಗರಿಸಲೂ ಸಣಬಿನ ದಾರ ಬೇಕು. ಮರಣದಂಥ ಸಂದರ್ಭದಲ್ಲಿ ಸಿದಿಗೆ ಬಿಗಿಯಲೂ ಸಣಬೇ ಆಗಬೇಕು.

** **

ಇತ್ತೀಚೆಗೆ ಕಲಕತ್ತೆಯಲ್ಲಿ ಸುತ್ತುತ್ತಿದ್ದೆ.

ಮಿತ್ರನೊಬ್ಬ ಆಕಸ್ಮಿಕವಾಗಿ ಸಿಕ್ಕ. ಜತೆಗೆ ಆತನ ಹದಿನೇಳರ ಮಗಳು ಕಾಜೋಲ್. ಆಕೆ ತೊಟ್ಟ ಬಟ್ಟೆ ಮತ್ತೆ ಮತ್ತೆ ದಿಟ್ಟಿಸುವಷ್ಟು ಗಮನ ಸೆಳೆಯಿತು.

"ಚಟರ್ಜಿ, ಏ ಡ್ರೆಸ್ ಮೆಟೀರಿಯಲ್ ಕ್ಯಾ ಹೈ?" ಕೇಳಿದೆ.

"ಜೂಟ್".

"ಝೂಟ್" ನಂಬಲಾಗದೆ ಪ್ರತಿಕ್ರಿಯಿಸಿದೆ.

"ಸಚ್ ಕೆಹ ರಹಾ ಹೂಂ ಭಾಯಿ. ಏ ಜೂಟ್ ಸೆ ಬನಾ ಹುವಾ ಹೈ. ಕ್ಯೊಂ? ಯಕೀನ್ ನಹಿ ಆ ರಹಾ ಹೈ ಕ್ಯಾ?" ಎಂದಾತ ತಾನು ಬಗಲಿಗೇರಿಸಿದ್ದ ಚೀಲವನ್ನು ತೋರಿಸಿ ಅದೂ ಜೂಟಿನಿಂದಲೇ ಮಾಡಿದ್ದೆಂದ. ನನ್ನ ಸಂಶಯವನ್ನು ಪರಿಹರಿಸುವ ಪುರಾವೆಯೆಂಬುದಕ್ಕೆ ಅವೆಲ್ಲವನ್ನೂ ಖರೀದಿಸಿದ ಬಗೆಗಿನ ರಸೀತಿಯನ್ನು ತೋರಿಸಿದ.

'ಸೋನಾಲಿ'.

ಭಾರತ ಸರಕಾರದ ಜವಳಿ ಸಚಿವಾಲಯದ ಅಧೀನದಲ್ಲಿರುವ 'ಜೂಟ್ ಮ್ಯಾನ್ಯುಫ್ಯಾಕ್ಚರರ್ಸ್ ಡೆವಲಪ್‌ಮೆಂಟ್ ಕೌನ್ಸಿಲ್' -ಜೆಎಂಡಿಸಿ (ಸಣಬು ಉತ್ಪಾದಕರ ಅಭಿವೃದ್ಧಿ ಸಂಸ್ಥೆ) ನಡೆಸುತ್ತಿರುವ ಈ ಹೆಸರಿನ ಶೋ ರೂಮುಗಳು ದಿಲ್ಲಿ, ಹೈದರಾಬಾದ್, ಮುಂಬಯಿ, ಮದ್ರಾಸ್, ಭುವನೇಶ್ವರ ಮತ್ತು ಕಲಕತ್ತಾಗಳಲ್ಲಿವೆ. ಇಲ್ಲಿ ಹೊಕ್ಕರೆ ಅವು ತೆರೆದಿಡುವ ಸಣಬಿನ ಸೊಗಸನ್ನು ಕಂಡು ಬೆರಗಾಗುತ್ತೀರಿ.

'ಚಿನ್ನದ ಎಳೆ' ಎಂದೆನಿಸಿಕೊಳ್ಳುವ ಸಣಬಿನ ವಿರಾಟ್‌ರೂಪ ದರ್ಶನವೇ ನಿಮಗಿಲ್ಲಿ ಆಗುತ್ತದೆ. ಎಷ್ಟೆಲ್ಲ ಅವತಾರಗಳು! ಏನೆಲ್ಲ ರೂಪಾಂತರಗಳು! ಕೇವಲ ಸಣಬಿನ ಎಳೆಯಿಂದಲೇ ಹೆಣೆದ ಗೊಂಬೆಗಳಿಂದ ಹಿಡಿದು, ಆಧುನಿಕ ಕಾಲದ ರಂಭೆಯರು ತೊಡುವಂಥ ವಿಭಿನ್ನ ವಿನ್ಯಾಸದ ಅಂಗಿ, ನಿಲುವಂಗಿಗಳವರೆಗೆ... ಬೂಟು-ಚಪ್ಪಲಿಗಳಿಂದ ಮೊದಲ್ಗೊಂಡು ಸೂಟ್‌ಕೇಸ್ - ಬ್ರೀಫ್‌ಕೇಸುಗಳವರೆಗೆ ಎಲ್ಲವೂ ಜೂಟಿನವೆ! ಕಾಗದ, ದಪ್ಪ ಕಾಗದಗಳ ತಯಾರಿಕೆಗೂ ಜೂಟ್ ಮೂಲವಸ್ತು.

ಈ ಸಂಚಿಕೆಯ ಮುಖಪುಟದ ಸುಂದರಿಯರು ತೊಟ್ಟಿರುವುದು ಸಣಬಿನಿಂದ ಸಿದ್ಧಪಡಿಸಿದ ದಿರಿಸುಗಳು. ಜೆಎಂಡಿಸಿಯ ಒಂದು ಜಾಹೀರಾತು ಅದು. ಆ ಚಿತ್ರವನ್ನೂ ಈ ಲೇಖನದೊಂದಿಗಿನ ಇತರ ಚಿತ್ರಗಳನ್ನೂ ಅವಲೋಕಿಸಿದರೆ ನಿಮಗೆ ಥಟ್ಟನೆ 'ಸಣಬೆ ನಿನ್ನಯ ಗುಣವ ಎಷ್ಟೆಂದು ಹೊಗಳಲಿ' ಎಂದು ನೀವೇ ಕಟ್ಟಿದ ಹಾಡನ್ನು ಗುನುಗುಡುವಂತಾದೀತು.

ಜೂಟನ್ನು ಜಲಕ್ಕೆ ಹೋಲಿಸಬೇಕು. ಹಾಲಿನೊಂದಿಗೆ ಬೆರೆತು ಹಾಲಾಗಿ, ಮಜ್ಜಿಗೆಯೊಂದಿಗೆ ಸೇರಿ ಅದೇ ಆಗಿ, ಕೊನೆಗೆ ಸಾರು, ಪಾನಕ, ಔಷಧಗಳೊಂದಿಗೂ ಮಿಳಿತಗೊಂಡು ನಿಲ್ಲುವ ಹಾಗೆ ಜೂಟ್ ಕೂಡ. ಅದನ್ನು ಹತ್ತಿ, ಉಣ್ಣೆ, ರೇಶ್ಮೆ ರೇಯಾನ್ ಹೀಗೆ ಬೇರೆ ಬೇರೆ ನೂಲುಗಳೊಂದಿಗೆ ಮಿಶ್ರಗೊಳಿಸಬಹುದು. ಜೂಟ್ ಎಳೆಯ ಪ್ರಮಾಣವೇ ಪ್ರಮುಖವಾಗಿ ಉಳಿದೆಲ್ಲವನ್ನೂ ತಕ್ಕಮಟ್ಟಿಗೆ ಕೂಡಿಸುವುದು ತಾಂತ್ರಿಕ ನೈಪುಣ್ಯದ ಫಲ. ಹೀಗೆ ಕೂಡಿಸಿದ ಮೇಲೆ ಏನೆಲ್ಲ ಆಗಿ ಸಣಬು ರಾರಾಜಿಸುತ್ತದೆ ಅಂತೀರಿ.

ಸಣಬಿನ ಸರ್ವತ್ರ ಪ್ರಯೋಜನವನ್ನು ಪಡೆಯುವ ಕುರಿತಂತೆ ಹಗಲಿರುಳು ಸಂಶೋಧನೆಗಳು, ಚಿಂತನ-ಮಂಥನಗಳು, ಕಮ್ಮಟಗಳು ನಡೆಯುತ್ತಲೇ ಇವೆ.

ಜೂಟನ್ನು ಉರುವಲು ವಸ್ತುವನ್ನಾಗಿಯೂ, ಸನ್‌ಮೈಕಾದಂಥ ಘನವಸ್ತುವನ್ನಾಗಿಯೂ ಮಾಡುವಲ್ಲಿ ತಂತ್ರಜ್ಞಾನ ಮುನ್ನಡೆ ಸಾಧಿಸಿದೆ. ಸಣಬನ್ನು ಬಳಸಿಕೊಂಡು ತೊಲೆ, ಕಂಬಗಳಂಥವನ್ನು ತಯಾರಿಸುವವರೆಗೂ ಮುಂದುವರಿಯಲಾಗಿದೆ. ಇಂಥ ತೊಲೆ, ಕಂಬ, ಕಟ್ಟಿಗೆಯ ಹಲಗೆಗಳು ನೈಸರ್ಗಿಕವಾಗಿ ಸಿಕ್ಕುವ ಇಮಾರತು ಕಟ್ಟಿಗೆಗಿಂತ ಗಟ್ಟಿ. ಹೀಗಾಗಿ ಜೂಟ್ ಕಾಡು ಕಡಿಯುವ ಕಾಯಕಕ್ಕೆ ಕೊಕ್ ಕೊಟ್ಟು ಅರಣ್ಯ ಸಂರಕ್ಷಣೆಗೆ ತನ್ನದೆ ಆದ ವಿಶಿಷ್ಟ ಕೊಡುಗೆಯನ್ನೀಯುತ್ತಿದೆ.

ಸಣಬಿನ ಈ ರೂಪಾಂತರಣ ಕಾರ್ಯದ ಹಿಂದೆ ಅನೇಕ ಜಾಣ ತಲೆಗಳ ಅವಿರತ ಪರಿಶ್ರಮವಿದೆ. ಕಾಣಿಕೆ ವಸ್ತುವಿನಿಂದ ಪ್ರಾರಂಭಿಸಿ, ಅಲಂಕರಣ ವಸ್ತುಗಳವರೆಗಿನ ರೂಪಾಂತರ ಮೊದಲ ಹೆಜ್ಜೆ. ಪಶ್ಚಿಮ ಬಂಗಾಲದ 'ಕುರಿತೋದದೆಯುಂ



ಗಜವದನನನ್ನು ಸಣಬಿನಿಂದ ಹೆಣೆಯುವುದು ಪ.ಬಂಗಾಲದ ಸಾಂಪ್ರದಾಯಿಕ ಕಲೆಗಳಲ್ಲೊಂದು. ಅಲ್ಲಿ ನಾನಾ ವರ್ಣಗಳಲ್ಲಿ ಅದ್ದಿದ ಸಣಬನ್ನು ಇದಕ್ಕಾಗಿ ಬಳಸುವುದೂ ಉಂಟು. ನೋಡಿದರೆ ಎದ್ದು ಬರುವನೇನೋ ಮುದ್ದು ಮುಖದ ಗಣಪ ಎಂದೆನಿಸದೇ ಇರದು.

ಕುಶಲ ಕಲಾಪರಿಣತ ಮತಿ'ಗಳನ್ನು ಕಂಡು, ಅವರ ಪಾರಂಪರಿಕ ಶೈಲಿಗೊಂದಿಷ್ಟು ನಾವೀನ್ಯದ ಬಣ್ಣ ಕೊಟ್ಟವರೇ ಈ ಜಾಣರು. ಹೊಸ ವಿನ್ಯಾಸ, ಹೊಸ ವಸ್ತುಗಳ ತಯಾರಿಕೆಯತ್ತ ಆ ಜನವೆಲ್ಲ ಲಕ್ಷ್ಯ ಹರಿಸಿ ದುಡಿದು, ತಾವು ಸೃಜಿಸಿದ ವಸ್ತುಗಳಿಗೆ ವಿಶ್ವಮಾನ್ಯತೆ ದೊರೆಯುವಂತಾದುದರಿಂದ ಹೊಸ ಹುರುಪು-ಭ'ರವಸೆಗಳನ್ನು ಪಡೆಯುವಂತಾದದ್ದೇನು ಕಡಿಮೆ ಮಾತೆ? ಅವರು ಮಾಡಿದ್ದೆಲ್ಲ ನಾಡಿನೊಳಗಿನವರ ಮನೆಯ ಮಾಡಿನಲ್ಲಷ್ಟೇ ಅಲ್ಲ, ವಿದೇಶಿಗರ ವಿಶಾಲ ಶೋಕೇಸುಗಳ ಶೋಭೆಯೂ ಆಯಿತು. ಅಲ್ಲಿಂದ ಶುರುವಾಯಿತು ಇಂಥ ವಸ್ತುಗಳ ರಫ್ತು. ಇಂದು ಭಾರತದ ಜೂಟಿನಿಂದ ಮಾಡಿದ ಅಸಂಖ್ಯಾತ



ಬೇರೆ ಬೇರೆಯಾದ
ಬಣ್ಣಗಳಲ್ಲಿ ಅದ್ದಿದ
ಜೂಟ್ ಮಿಶ್ರಿತ ನೂಲು
ಮತ್ತು ಬಟ್ಟೆಗಳು

ಈ ಕೆಳಗಿನ ಎರಡು
ಚಿತ್ರಗಳಲ್ಲಿ ಮೊದಲಿನದು
ಮೂಲಿಕೆ ಬಣ್ಣದ ಅಚ್ಚಿನ
ಬಟ್ಟೆಗಳು. ಎರಡನೆಯದು
ಡೈ ಮಾಡಿದ ಬಟ್ಟೆಗಳು





ಬಗೆಯ ವಸ್ತುಗಳಿಗೆ ವಿದೇಶದ ಮಾರುಕಟ್ಟೆಗಳಲ್ಲಿ ಲಲನೆಯರು ಮುಗಿಬೀಳುತ್ತಿದ್ದಾರೆ, ಗಂಡಸರು ದಾಂಗುಡಿಯಿಡುತ್ತಿದ್ದಾರೆ, ಹುಡುಗ-ಹುಡುಗಿಯರು ಹಪಹಪಿಸುತ್ತಿದ್ದಾರೆ.

ಭಾರತದಲ್ಲೀಗ ಸರಿಸುಮಾರು ೫೦೦ ವಿಕೇಂದ್ರೀಕೃತ ಘಟಕಗಳಲ್ಲಿ ವರ್ಷಕ್ಕೆ ನೂರು ಕೋಟಿ ಬೆಲೆಯ ಜೂಟ್ ವಸ್ತುಗಳು ನಿರ್ಮಾಣವಾಗುತ್ತಿವೆ. ಹೊಸ ಹೊಸ ಉದ್ಯಮಶೀಲರು ಈ ಕ್ಷೇತ್ರಕ್ಕೆ ಲಗ್ಗೆ ಹಾಕುತ್ತಿದ್ದಾರೆ. ಇವರಿಗೆಲ್ಲ ಜೆಎಂಡಿಸಿ ಹಾಗೂ ಎನ್‌ಸಿಜೆಡಿ (ನ್ಯಾಶನಲ್ ಸೆಂಟರ್ ಫಾರ್ ಜೂಟ್ ಡೈವರ್ಸಿಫಿಕೇಶನ್)ಗಳು ಮಾರ್ಗದರ್ಶನ ಮಾಡುತ್ತಲೇ ಬಂದಿವೆ. ಜತೆಗೆ ತಾಂತ್ರಿಕ, ಆರ್ಥಿಕ ನೆರವನ್ನೂ ಮಾರಾಟ ಮಾಡುವ ಕುರಿತಾದ ಸಲಹೆಗಳನ್ನೂ ಈ ಸಂಸ್ಥೆಗಳು ನೀಡುತ್ತಿವೆ.

ಕಲಕತ್ತಾದಲ್ಲಿರುವ ಜೆಡಿಎಂಸಿಯ ಕಚೇರಿಯಲ್ಲಿ ಕೆಲಸದ ಅವಧಿಯಲ್ಲಿ ಕುಶಲಕರ್ಮಿಗಳ ದಂಡೇ ಕಾಣುತ್ತದೆ. ಇವರಲ್ಲಿ ಕೆಲವರು ಸ್ವತಃ ಕುಶಲಕರ್ಮಿ ಹಾಗೂ ಉದ್ಯಮ ನಡೆಸುವವರಾಗಿದ್ದರೆ ಇನ್ನು ಕೆಲವರು ಕೇವಲ ಉದ್ಯಮ ನಡೆಸುತ್ತ ತಾವು



ಸಣಬಿನೊಂದಿಗೆ ಇನ್ನಿತರ ಪದಾರ್ಥಗಳ ಸೇರ್ಪಡೆ ಇಂಥ ಸೂಟ್‌ಕೇಸುಗಳು ಬ್ರೀಫ್‌ಕೇಸುಗಳನ್ನು ಸೃಷ್ಟಿಸುತ್ತರೆ.





ಸೆಣಬಿನ ಗೊಂಬೆಗಳು

ಸಂಬಳವನ್ನಿತ್ತು ಇಟ್ಟುಕೊಂಡಿರುವ ಕುಶಲಕರ್ಮಿಗಳು ತಯಾರಿಸಿದ ವಸ್ತುಗಳನ್ನು ತಂದವರಾಗಿರುತ್ತಾರೆ. ಈ ಸಂಸ್ಥೆಯ ತಜ್ಞಸಮಿತಿ ಅವರು ತಂದುದವುಗಳ ಕುರಿತು ಕೂಲಂಕಷ ಚರ್ಚೆ, ವಿಮರ್ಶೆ, ಸಲಹೆ-ಸೂಚನೆಗಳ ಮೂಲಕ ಅವರಿಂದ ಇನ್ನೂ ಒಳ್ಳೆಯದು ಹೊರಬರಲು ಕಾರಣರಾಗುತ್ತಾರೆ.

ಕಳೆದ ವರ್ಷದಲ್ಲಿ ಜಪಾನ್, ಯುನೈಟೆಡ್ ಕಿಂಗ್‌ಡಮ್, ಆಸ್ಟ್ರೇಲಿಯಾ, ಯುನೈಟೆಡ್ ಸ್ಟೇಟ್ಸ್ ಆಫ್ ಅಮೇರಿಕಾ, ಫ್ರಾನ್ಸ್, ಇಟಲಿ, ಜರ್ಮನಿ, ಸೌದಿ ಅರೇಬಿಯಾ, ಕ್ಯಾನಡಾ ಮತ್ತು ಸ್ಪೇನ್‌ಗಳು ಭಾರತದ ಜೂಟ್ ವಸ್ತುಗಳನ್ನು ಆಮದು ಮಾಡಿಕೊಂಡ ದೇಶಗಳಲ್ಲಿ ಪ್ರಮುಖವಾದವುಗಳು. ಇವೆಲ್ಲ ಜೂಟಿನಿಂದಾದ ಅಲಂಕರಣ ವಸ್ತುಗಳು, ನೆಲಹಾಸು, ಕಾಣಿಕೆ ವಸ್ತುಗಳು, ಚೀಲಗಳು, ಭಿತ್ತಿ ಅಲಂಕರಣ ಸಾಮಗ್ರಿಗಳನ್ನು ತರಿಸಿಕೊಂಡರೆ ರಶಿಯ ಪಾದರಕ್ಷೆಗಳನ್ನೂ, ದುಬೈ-ಸಿಂಗಾಪುರಗಳು ಚೀಲಗಳನ್ನೂ ಆಯಾತ ಮಾಡಿಕೊಂಡವು. ಜೂಟಿನಿಂದಲೇ ತಯಾರಿಸಿದ ಎಷ್ಟೋ ದೈನಂದಿನ ಬಳಕೆಯ ವಸ್ತುಗಳು, ಫೈಲ್‌ಗಳು, ಆಮಂತ್ರಣ ಹಾಗೂ ಶುಭಾಶಯ ಪತ್ರಗಳು, ಲ್ಯಾಮಿನೇಷನ್ ಮಾಡಿದ ಕ್ಲಿಪ್ ಸಹಿತದ ಕಾರ್ಡ್‌ಬೋರ್ಡ್‌ಗಳು, ಮನೆ ಅಥವಾ ಕೋಣೆಯಲ್ಲಿಡುವ ಚಿತ್ತಾರ ಕೆತ್ತಿದ ಅಡ್ಡಿಕೆಗಳು (partition boards) ಮೊದಲಾದವುಗಳಿಗಾಗಿ ಭಾರತಕ್ಕೆ ಬೇಡಿಕೆ ಸಲ್ಲಿಸುವ ದೇಶಗಳಿಗೂ ಕೊರತೆಯಿಲ್ಲ.

ಜೂಟ್‌ನಿಂದ ತಯಾರಿಸಿದ ಬಟ್ಟೆಗಳು ತುಂಬ





ಬಗಲ ಚೀಲಗಳು



ಈ ಮನೆಯ ನೆಲಹಾಸು, ಕಿಟಕಿ ಪರದೆ, ಗೋಡೆಯಲಂಕರಿಸಿದ ಕಲೆ, ಸೋಫಾ ಕುರ್ಚಿ ಕವರು ಮುಂತಾದುವೆಲ್ಲ ಸಣಬಿನವೆ.

ಹಗುರ. ತೊಡಲು ಅನುಕೂಲ. ಧರಿಸಿದರೆ ಅದು ನೀಡುವ ಆನಂದವೆ ಅನಿರ್ವಚನೀಯ. ಯಾವುದೇ ವಿನ್ಯಾಸಕ್ಕೂ ಹೊಲಿಗೆಗೂ ಒಗ್ಗುವಂಥ ಗುಣ ಇದರದು. ಕೈಮಗ್ಗದಲ್ಲಿ ತಯಾರಿಸಿದ ಜೂಟ್ ಬಟ್ಟೆಗಳ ಸೊಗಸು ಒಂದು ತೆರನಾದರೆ ಪಾವರ್ ಲೂಮ್‌ಗಳಲ್ಲಿ, ದೊಡ್ಡ ದೊಡ್ಡ ಬಟ್ಟೆ ಗಿರಣಿಗಳಲ್ಲಿ ರೂಪಿಸಿದಂಥವುಗಳ ಸೊಬಗೇ ಇನ್ನೊಂದು ಬಗೆಯದು. ಈ ರೀತಿಯ ಬಟ್ಟೆಗಳಲ್ಲಿಯೂ ಎರಡು



ಸಣಬಿನಿಂದ ಮಾಡಿದ ಪಾದರಕ್ಷೆಗಳು

ವಿಧ. ಬಟ್ಟೆ ತಯಾರಾದ ಮೇಲೆ ಬಣ್ಣ ಅದ್ದಿದಂಥವು ಹಾಗೂ ಮೂಲಿಕೆಗಳಿಂದ ತಯಾರಿಸಿದ ಬಣ್ಣಗಳನ್ನು ಬಳಸಿ ವೈವಿಧ್ಯಮಯ ಚಿತ್ತಾರಗಳನ್ನು ಮುದ್ರಿಸಿದಂಥವು.

ನಮ್ಮ ದೇಶದಲ್ಲೀಗ ಕಾರ್ಯ ನಿರ್ವಹಿಸುತ್ತಿರುವ ಸೆಣಬಿನ ಗಿರಣಿಗಳು ಒಟ್ಟು ೭೩. ಈ ಪೈಕಿ ೫೯ ಗಿರಣಿಗಳು ಪ. ಬಂಗಾಲವೊಂದರಲ್ಲೇ ಇವೆ. ಆಂಧ್ರದಲ್ಲಿ ೪, ಉತ್ತರ ಪ್ರದೇಶ-ಬಿಹಾರಗಳಲ್ಲಿ ತಲಾ ಮೂರು; ಅಸ್ಸಾಂ, ಒರಿಸ್ಸಾ, ಮಧ್ಯಪ್ರದೇಶ ಮತ್ತು ತ್ರಿಪುರಾಗಳಲ್ಲಿ ತಲಾ ಒಂದೊಂದು.

ಭೂಸಮತೆಯನ್ನು ನಿಲ್ಲಿಸುವ ದಿಶೆಯಲ್ಲಿಯೂ ಜೂಟ್ ನೆರವಿಗೆ ಬರುತ್ತಲಿದೆ ಎಂಬುದು ಇನ್ನೊಂದು ಹೆಮ್ಮೆಯ ವಿಷಯ. ಪ್ರವಾಹ, ಸಮುದ್ರದ ಒತ್ತು, ಹಳ್ಳಗಳ ಹರಿಗಡಿಕೆಯಿಂದಾಗುವ ನೆಲಗೊರೆತವನ್ನು ತಡೆಗಟ್ಟಲು ಗೋಣಿಚೀಲಗಳನ್ನು ಬಳಸುವ ಪದ್ಧತಿ ಹಾಗೂ ಅದಕ್ಕಾಗಿಯೇ ವಿಶಿಷ್ಟವಾದ ಗೋಣಿಯನ್ನು ಹೆಣೆಯುವ ರೀತಿ ಅಮೆರಿಕದಲ್ಲಿ ೩೫ ವರ್ಷಗಳಷ್ಟು ಹಿಂದೆಯೆ ರೂಢಿಗೆ ಬಂತು. ಭಾರತದಲ್ಲಿ ಇಂಥ ಗೋಣಿಯ ತಯಾರಿಕೆಗೂ ಸಾಕಷ್ಟು ಒತ್ತು ಕೊಡಲಾಗಿದೆ.

ಹಿಂಜಿದ ಜೂಟನ್ನು ಮಗ್ಗಕ್ಕೆ ಕಳಿಸದೇ ನೇರವಾಗಿ ತಯಾರಿಸುವ ಕೆಲವಸ್ತುಗಳು ಮುಖ್ಯವಾಗಿ ವೈದ್ಯಕೀಯ ಉಪಯೋಗಕ್ಕೆ ಬಳಸಲ್ಪಡುತ್ತಿವೆ. ಸೋಸುವಿಕೆ, ಇನ್‌ಸುಲೇಶನ್, ನೆಲಹಾಸು ಹಾಗೂ ಆಧುನಿಕ ಕೃಷಿ ಫಾರ್ಮುಗಳಲ್ಲಿ ಮೇಲು ಹೊದಿಕೆಯಂತೆಯೂ ಜೂಟಿನ ಪ್ರಯೋಜನವಾಗುತ್ತಿದೆ.

ವಿದೇಶಗಳು ಭಾರತದಿಂದ ತರಿಸಿಕೊಳ್ಳುವ ಸೆಣಬಿನ ವಸ್ತುಗಳಲ್ಲಿ ಕಾರ್ಪೆಟ್ ಹಾಗೂ ರಗ್ಗುಗಳಿಗೂ ಮಹತ್ವದ ಸ್ಥಾನವಿದೆ. ಕಾತಿ (ತೆಂಗಿನ ನಾರು)ಯಿಂದ ತಯಾರಿಸಿದ ಕಾರ್ಪೆಟ್‌ಗಳಿಗಿಂತ ಸೆಣಬಿನಿಂದ ರೂಪಿಸಿದಂಥವುಗಳು ಮೃದು ಹಾಗೂ ಸುಲಭವಾಗಿ ಸ್ಥಳಾಂತರಿಸಬಲ್ಲಂಥವುಗಳು.

"ಈಗ ಸೆಣಬಿನ ಸೊಗಸು ಸವಿಯುವ ಕಾಲ. ಅದರ ದಿರಿಸು ಧರಿಸಿ ಸಂತಸಪಡುವ ಸಮಯ. ಜಗತ್ತು ಆ ಸಂತಸವನ್ನು ಅನುಭವಿಸುತ್ತಲಿದೆ. ನೀವು ಅದರೊಂದಿಗಿರಬೇಕು..." ಎಂಬ ಈ ಉತ್ಪಾದಕರ ಮಾತು ಎಂಥವರನ್ನೂ ಅವುಗಳೆಡೆ ಸೆಳೆಯುತ್ತದೆ.

ಅಂದಹಾಗೆ "ಗೋಣಿ ತಾಟಿನ ಮೇಲೆ ಹೆಣಕೆ ಹಾಕೋದುಂಟೆ?" ಎಂಬ ಆ ಗಾದೆಯೀಗ ಅರ್ಥ ಕಳೆದುಕೊಂಡಿದೆ. ಈಗ ಏನಿದ್ದರೂ "ಜಾಣನ ಕೈಗೆ ಗೋಣಿ ಸಿಕ್ಕರೆ..." ಎಂಬ ಮಾತಿಗೇ ಮಹತ್ವ.



# ಅದೃಷ್ಟದ ಮನೆ

'ದೆವ್ವದ ಮನೆ' ಅನ್ನುವುದನ್ನು ಕೇಳಿದ್ದೇವೆ. ಆ ಮನೆಯಲ್ಲಿ ಹಿಂದೆ ಕೊಲೆಯೋ, ದುರ್ಮರಣವೋ ಸಂಭವಿಸಿತು, ದುರ್ಮರಣಕ್ಕೆ ಒಳಗಾದವನು ದೆವ್ವವಾಗಿ, ಆ ಮನೆಯಲ್ಲಿ ವಾಸಮಾಡುವವರನ್ನು ಕಾಡುತ್ತಿದ್ದಾನೆ ಅನ್ನುವ ಪ್ರತೀತಿ ಎಲ್ಲಾ ಕಡೆ ಹರಡುತ್ತದೆ. ಮನೆಯಲ್ಲಿರುವವರನ್ನು ಬಿಡಿಸುವುದಕ್ಕೋ, ಅಥವಾ ಮನೆಯನ್ನು ಸುಲಭವಾಗಿ ಲಪಟಾಯಿಸುವುದಕ್ಕೊ ಕೆಲವರು ಹೂಡುವ ತಂತ್ರ ಎಂದು ಕೆಲವರು ಹೇಳುವುದುಂಟು.

'ದೆವ್ವದ ಮನೆ' ಇರುವಂತೆ ಅದೃಷ್ಟದ ಮನೆಗಳೂ ಉಂಟು. ದೆಹಲಿಯ ಫಿರೋಜ್ ಶಾ ರಸ್ತೆಯಲ್ಲಿರುವ ೧೧ನೇ ನಂಬರ್ ಮನೆ ಅದೃಷ್ಟ ತರುವ ಮನೆ ಎಂದು ಐವತ್ತರ ದಶಕದಲ್ಲಿ ಜನರಲ್ಲಿ ಅದರಲ್ಲೂ ರಾಜಕಾರಣಿಗಳಲ್ಲಿ ನಂಬಿಕೆ ಬಂದಿತ್ತು. ಕಾರಣ ಅದರಲ್ಲಿ ವಾಸವಾಗಿದ್ದ ಭೀಮ್‌ಸೇನ್ ಸಾಚಾರ್ ಪಂಜಾಬಿನ ಮುಖ್ಯಮಂತ್ರಿಯಾದರು. ನಂತರ ಆ ಗೃಹದಲ್ಲಿ ವಾಸಿಸಿದವರು ಗೋಪಾಲಸ್ವಾಮಿ ಅಯ್ಯಂಗಾರ್. ಅವರು ಕೇಂದ್ರದಲ್ಲಿ ಮಂತ್ರಿಯಾದರು. ಗೋಪಾಲಸ್ವಾಮಿ ಅಯ್ಯಂಗಾರ್ ಆ ಮನೆ ಖಾಲಿಮಾಡಿದ ಮೇಲೆ ಅಲ್ಲಿದ್ದವರು ಸುಬ್ರಹ್ಮಣ್ಯಂ ಮತ್ತು ಅಳಗೇಶನ್. ಅವರೂ ಮುಂದೆ ಮಂತ್ರಿಗಳಾದರು. ಸ್ವಾಭಾವಿಕವಾಗಿಯೇ ಎಲ್ಲ ಲೋಕಸಭಾ ಸದಸ್ಯರಿಗೂ ಅಂದು ಆ ಮನೆಯ ಮೇಲೆಯೇ ಕಣ್ಣು. ಆ ಗೃಹದಲ್ಲಿ ವಾಸಮಾಡಿದರೆ ಮಂತ್ರಿಪದವಿ ಖಚಿತ ಅನ್ನುವ ನಂಬಿಕೆ.

-ಎಚ್.ಆರ್.ಸಿ. ರಾವ್

ಸದಿಚ್ಛೆಯ ದ್ಯೋತಕವಾದ
ಅದು
ಕೋಟ್ಯಂತರ ವ್ಯವಹಾರವಾಗಿ
ಬೆಳೆದಿದೆ

# ಏನಿದ್ದು ಶುಭಾಶಯ ಪತ್ರಗಳು!

• ಧನಂಜಯಕುಮಾರ

ಅದು ಜನ್ಮದಿನದ್ದೇ ಇರಲಿ, ಪರೀಕ್ಷೆ ಪಾಸಾದದ್ದೇ ಇರಲಿ, ಹಬ್ಬ-ಹುಣ್ಣಿಮೆಗಳದ್ದೇ ಇರಲಿ. ಪುತ್ರೋತ್ಸವವಾದದ್ದೇ ಇರಲಿ ಅಥವಾ ಇನ್ನಾವುದೇ ಶುಭಸಂದರ್ಭವೇ ಆಗಿರಲಿ. ಸಂತೋಷವನ್ನು ಹಂಚಿಕೊಳ್ಳಲು ಶುಭಾಶಯಪತ್ರಗಳನ್ನು ಕಳಿಸುವ ಪದ್ಧತಿಯಿಂದು ಜಗತ್ತಿನ ತುಂಬಾ ಪಸರಿಸಿದೆ.

ಹೀಗೆ ಗ್ರೀಟಿಂಗ್ಸ್ ಕಳಿಸುವ ಪದ್ಧತಿ ಹಳೆಯದಾದಷ್ಟೇ ರೋಚಕವೂ ಆಗಿದೆ. ಬ್ರಿಟಿಶ್ ವಿಶ್ವಕೋಶದ ಪ್ರಕಾರ ೧೯೩೭ರಲ್ಲೊಂದೇ ಇಂಗ್ಲೆಂಡಿನ ಜನ ಎರಡುನೂರು ಕೋಟಿ ರೂಪಾಯಿಗಳಷ್ಟು ಮೌಲ್ಯದ ಐನೂರು ಕೋಟಿ ಶುಭಾಶಯ ಪತ್ರಗಳನ್ನು ಮಿತ್ರರಿಗೋ ನೆಂಟರಿಷ್ಟರಿಗೋ ಕಳಿಸಿದ್ದರು. ಜನರ ಈ 'ಖಯಾಲಿ'ಯಿಂದಾಗಿ ಅಮೆರಿಕದ ಅಂಚೆ ಇಲಾಖೆಗೆ ಆ ವರ್ಷ ನ೨ಱೈವತ್ತು ಕೋಟಿಗಳಷ್ಟು ಹೆಚ್ಚಿನ ಆದಾಯ ಬಂತು. ಅಂಚೆ ಚೀಟಿಗಳು ಕಡಿಮೆ ಬಿದ್ದದ್ದರಿಂದ ಸರಕಾರ ಆ ವರ್ಷ ಹೆಚ್ಚು ಹೆಚ್ಚು ಅಂಚೆ ಚೀಟಿಗಳನ್ನು ಮುದ್ರಿಸಬೇಕಾಯಿತು.

ಶುಭಾಶಯ ಪತ್ರಗಳನ್ನು ಕಳಿಸುವ ಪದ್ಧತಿಯನ್ನು ಪ್ರಾರಂಭಿಸಿದಾತ ಇಂಗ್ಲೆಂಡಿನ ಪ್ರಖ್ಯಾತ ಕಾದಂಬರಿಕಾರ ಚಾರ್ಲ್ಸ್ ಡಿಕೆನ್ಸ್ ಎನ್ನುವುದು ಅನೇಕರಿಗೆ ಗೊತ್ತಿರಲಿಕ್ಕಿಲ್ಲ. ಮೊದಮೊದಲು ಕ್ರಿಸ್‌ಮಸ್ಸಿನ ಪ್ರಾರಂಭದಲ್ಲೋ, ಹೊಸ ವರ್ಷದ ಸಂದರ್ಭದಲ್ಲೋ ತನಗೆ ಪ್ರಿಯರಾದವರಿಗೆ ಶುಭಕೋರಿ ಕಾರ್ಡುಗಳನ್ನು ಡಿಕೆನ್ಸ್ ಬರೆಯುತ್ತಿದ್ದ. ಆ ಕುರಿತು ಆತ ತನ್ನ ಕಾದಂಬರಿಗಳಲ್ಲೂ ಪ್ರಸ್ತಾಪಿಸತೊಡಗಿದಾಗ ಮನೆಯ ಮಕ್ಕಳು ಡಿಕೆನ್ಸ್ ಕಳಿಸಿದ ಕಾರ್ಡಿಗೆ ಪ್ರತಿಯಾಗಿ ತಾವೂ ಕಾರ್ಡ್ ಕಳಿಸುವಂತೆ ತಂದೆ-ತಾಯಿಗಳಿಗೆ ದುಂಬಾಲು ಬೀಳತೊಡಗಿದರು. ಶುಭಾಶಯ ಪತ್ರಗಳನ್ನು ಕಳಿಸುವ ಪದ್ಧತಿ ಬೆಳೆದುಕೊಂಡು ಬಂದ ಬಗೆ ಹೀಗೆ. ೧೮೪೨ ರಲ್ಲಿ ಸರ್ ರೋಜರ್ ಡಿ ಕಾವಲಿ ಹೊಸ ವರ್ಷದ ಸಂದರ್ಭದಲ್ಲಿ ಕಳಿಸಿದ ಸಚಿತ್ರ ಶುಭಾಶಯ ಪತ್ರವೇ ಈಗ ಲಭ್ಯವಿರುವುಗಳಲ್ಲಿ ಅತ್ಯಂತ ಹಳೆಯದು. ಬ್ರಿಟಿಶ್ ಮ್ಯೂಜಿಯಮ್ಮಿನಲ್ಲಿ ಅದನ್ನು ಸುರಕ್ಷಿತವಾಗಿಡಲಾಗಿದೆ.

ಆದರೆ ಇದೇ ಎಲ್ಲಕ್ಕಿಂತ ಹಳೆಯ ಶುಭಾಶಯ

ಪತ್ರವಲ್ಲ. ಇದಕ್ಕಿಂತ ಎಷ್ಟೋ ವರ್ಷ ಮೊದಲೆ ಸ್ತ್ರೀ-ಪುರುಷರೆಲ್ಲರೂ ಸೇರಿ ಸಾರಾಯಿ ಸೇವಿಸುವ ದೃಶ್ಯವಿರುವ ಹೊಸ ವರ್ಷದ ಸಾವಿರ ಶುಭಾಶಯ ಪತ್ರಗಳನ್ನು ಜೆ.ಸಿ. ಹಾರ್ಸ್‌ಲಿ ಎಂಬಾತ ಮುದ್ರಿತ ಷಿಲಿಂಗಿಗೆ ಒಂದರಂತೆ ಮಾರಿದಾಗ 'ಪ್ಯುರಿಟನ್' ಎಂಬಾತ ಈ ಪತ್ರ ಪಾನಮತ್ತತೆಯನ್ನು ಪ್ರಚೋದಿಸುವುದೆಂದು ಹುಯಿಲನ್ನೆಬ್ಬಿಸಿದ್ದ. ಆದರೆ ಹಾರ್ಸ್‌ಲಿ ಮುದ್ರಿಸಿದ ಆ ಸಾವಿರ ಕಾರ್ಡುಗಳ ಪೈಕಿ ಒಂದೂ ನೋಡಲು ಲಭ್ಯವಿಲ್ಲ.

ಡಿಕೆನ್ಸನ ಕಾಲದಿಂದಲೂ ಶುಭಾಶಯ ಪತ್ರಗಳ ಜನಪ್ರಿಯತೆ ಬೆಳೆಯುತ್ತಲೇ ಇದೆ. ಸಂಯುಕ್ತ ರಾಷ್ಟ್ರ ಸಂಘವು ತನ್ನ ಬಾಲ ಕಲ್ಯಾಣ ನಿಧಿಗಾಗಿಯೆಂದೇ ಹೊರಡಿಸಿದ್ದ ೧೫,೬೮,೫೪೮ ಶುಭಾಶಯ ಪತ್ರಗಳು ೧೯೭೭ ರಲ್ಲಿ ನಮ್ಮ ದೇಶದಲ್ಲಿ ಮಾರಾಟವಾಗಿ ಹೋದವು. ಖಾಸಗಿ ಸಂಸ್ಥೆಗಳು ಹೊರಡಿಸಿದ ಗ್ರೀಟಿಂಗ್ಸ್ ಕಾರ್ಡುಗಳನ್ನು ಲೆಕ್ಕಕ್ಕೆ ತೆಗೆದುಕೊಂಡರೆ ಆ ವರ್ಷ ಮಾರಲ್ಪಟ್ಟ ಕಾರ್ಡುಗಳ ಸಂಖ್ಯೆ ಇದಕ್ಕಿಂತ ಎಷ್ಟೋ ಪಟ್ಟು ಹೆಚ್ಚಾಗಿರಬೇಕು.

ರುಮಾಲಿನ ಮೇಲೆ ಶುಭಾಶಯಗಳನ್ನು ಬರೆದು, ಅದರ ಸುತ್ತ ಚಿತ್ತಾರವನ್ನು ಬಿಡಿಸಿ ಕಳಿಸುವ ಪರಂಪರೆ ಪ್ರಾಚೀನ ಭಾರತದಲ್ಲಿತ್ತು. ಬರುಬರುತ್ತ ಬಟ್ಟೆಯ ಅಥವಾ ಚರ್ಮದ ಮೇಲೆ ಕಲಾತ್ಮಕವಾದ ಚಿತ್ರಗಳನ್ನು ಬಿಡಿಸುವ ಪದ್ಧತಿ ಪ್ರಾರಂಭವಾಗಿ ಕಾಲಾಂತರದಲ್ಲಿ ಬಟ್ಟೆ ಅಥವಾ ಚರ್ಮದ ಬದಲು ದಪ್ಪ ಕಾಗದದ ಮೇಲೆ ಶುಭ ಸಂದೇಶಗಳನ್ನು ಕಳಿಸುವ ಪರಂಪರೆ ರೂಪುಗೊಂಡಿತು. ಅದೇ ಈಗ ಪ್ರಪಂಚದಾದ್ಯಂತ ರೂಢಿಯಲ್ಲಿದೆ.

ಆದರೆ ಶುಭ ಸಂದೇಶಗಳನ್ನು ಕಳಿಸಲು ಕಾಗದವೇ ಆಗಬೇಕೆಂದಿಲ್ಲ. ನಮ್ಮಲ್ಲಿ 'ಸೌಭಾಗ್ಯವತಿಭವ' ಎಂದು ಹಿರಿಯರು ಆಶೀರ್ವದಿಸುವ ತೆರನಾಗಿ ಸುಗಂಧದ್ರವ್ಯದ ಬಾಟಲಿಯ ಮೇಲೆ 'ಸೌಭಾಗ್ಯವೆಲ್ಲ ನಿಮಗಿರಲಿ' ಎಂದು ಬರೆದು ಕಳಿಸುವ ಪದ್ಧತಿ ಇಂದಿಗೂ ಈಜಿಪ್ಟಿನಲ್ಲಿ ಬಳಕೆಯಲ್ಲಿದೆ. ರೋಮ್ ಸಾಮ್ರಾಜ್ಯ ಉಚ್ಛ್ರಾಯದಲ್ಲಿದ್ದಾಗ ಬಂಗಾರದ ರೇಕುಗಳುಳ್ಳ ಕಲಾಕೃತಿಗಳನ್ನು ಪ್ರೇಮಿಗಳು ತಮ್ಮತಮ್ಮಲ್ಲಿ ವಿನಿಮಯ ಮಾಡಿಕೊಳ್ಳುತ್ತಿದ್ದರು. ವಿಕ್ಟೋರಿಯಾ ರಾಣಿಯಂತೂ ತನಗಾಗಿ ವಿಶೇಷವಾಗಿ ನಿರ್ಮಿಸಿದ ಗ್ರೀಟಿಂಗ್ ಕಾರ್ಡುಗಳನ್ನು ಗಣ್ಯರಿಗೆ ಕಳಿಸುತ್ತಿದ್ದಳು. ಅವುಗಳನ್ನು ಉಳಿದವರು ಅನುಕರಿಸುವಹಾಗಿರಲಿಲ್ಲ.

ಬೃಹದಾಕಾರದ ಗ್ರೀಟಿಂಗ್ ಕಾರ್ಡುಗಳನ್ನು ನಿರ್ಮಿಸುವಲ್ಲಿ ಅಮೇರಿಕನ್ನರದೇ ಒಂದು ಕೈ ಮುಂದೆ. ೧೯೬೭ ರಲ್ಲಿ ಅಮೇರಿಕಾದ ಉಪ ರಾಷ್ಟ್ರಪತಿ ಹಾಗೂ ರಾಜ್ಯಪಾಲರ ಸಂದೇಶಗಳನ್ನೊಳಗೊಂಡ ಜನರ ಹಸ್ತಾಕ್ಷರವನ್ನುಳ್ಳ ಒಂದು ಲಕ್ಷ ಏಳು. ಕಿಲೋಮೀಟರಿನಷ್ಟು ಉದದ್ದವಾದ ಶುಭಾಶಯ ಪತ್ರವನ್ನು ವಿಯೆಟ್‌ನಾಮಿನಲ್ಲಿ ಸೆಣಸಾಡುತ್ತಿದ್ದ ಅಮೇರಿಕನ್ ಸೈನಿಕರಿಗೆ ಕಳಿಸಿಕೊಡಲಾಗಿತ್ತು. ಅದು ಎರಡು ಟನ್ನುಗಳಷ್ಟು ಭಾರವಾಗಿತ್ತು. ೧೯೮೯ ರಲ್ಲಿಯೂ ಹೊಸ ವರ್ಷದ ಸಂದರ್ಭದಲ್ಲಿ ಅಮೇರಿಕಾದ ಹದಿಮೂರು ರಾಜ್ಯಗಳ ಗವರ್ನರರು ಹಾಗೂ ಉಪರಾಷ್ಟ್ರಪತಿಯ ಸ್ಥಾನಕ್ಕೆ ಸ್ಪರ್ಧಿಸಿದ್ದ ಮೈಕೇಲ್ ಡುಕಾಕಿಹಿತವಾಗಿ ಇಪ್ಪತ್ತು ಸಾವಿರ ಜನರು ಹದಿನೈದು ಮೀಟರು ಉದ್ದ ಹಾಗೂ ಒಂದು ಮೀಟರು ಅಗಲವಾದ ಶುಭಾಶಯ ಪತ್ರವನ್ನು ರಷ್ಯನ್ ಜನತೆ ಕಳಿಸಿಕೊಟ್ಟಿದ್ದರು. ಸಚಿತ್ರವಾದ ಈ ಕಾರ್ಡನ್ನು ಶುಭಾಶಯ ಪತ್ರಗಳನ್ನು ತಯಾರಿಸುವುದನ್ನೇ ಉದ್ಯೋಗವನ್ನಾಗಿ ಮಾಡಿಕೊಂಡವನೊಬ್ಬ ಸ್ವಂತದ ಖಯಾಲಿಯಿಂದ ರೂಪಿಸಿದ್ದ.

ಗ್ರೀಟಿಂಗ್ ಕಾರ್ಡುಗಳು ಒಂದು ರೀತಿಯಲ್ಲಿ ಅದೃಷ್ಟ ಲಕ್ಷ್ಮಿಯಿದ್ದ ಹಾಗೆ. ಜರ್ಮನಿಯ ಹಾಲ್ನಿಜರ್ ಎಂಬಾತನಿಗೆ ತನ್ನ ಮಿತ್ರನಿಗೆ ಕಾರ್ಡು ಕಳಿಸುವ ಇಚ್ಛೆಯಿದ್ದರೂ ಅದಕ್ಕಾಗಿ ಹೆಚ್ಚು ದುಡ್ಡು ಖರ್ಚು ಮಾಡಲು ಮನಸ್ಸು ಹಿಂದೇಟು ಹಾಕುತ್ತಿತ್ತು. ಮನೆಯಲ್ಲಿ ಬಹಳ ಕಾಲದಿಂದ ಹಳೆಯ ಚಿತ್ರವೊಂದು ಧೂಳು ತಿನ್ನುತ್ತಾ ಬಿದ್ದುಕೊಂಡಿದ್ದದ್ದು ಆತನ ಲಕ್ಷ್ಯಕ್ಕೆ ಬಂತು. ಅದನ್ನಾತ ಹುಡುಕಿ ತೆಗೆದು, ಧೂಳನ್ನು ಕೊಡವಿ,

ಕಾಗದಕ್ಕೆ ಅಂಟಿಸಿ ಕೆಳಗೆ ಶುಭಸಂದೇಶದ ಒಂದೆರಡು ವಾಕ್ಯಗಳನ್ನು ಬರೆದು ಕಳಿಸಿದ. ಆ ಗ್ರೀಟಿಂಗ್ ಕಾರ್ಡ್ ಪಡೆದವನಿಗೆ ಅಂತಹುದೇ ಚಿತ್ರವನ್ನು ಹಿಂದೆಲ್ಲಿಯೋ ನೋಡಿದ ನೆನಪು. ಅದನ್ನಾತ ಕಲಾ ತಜ್ಞರಿಗೆ ತೋರಿಸಿದಾಗ, ಕಾರ್ಡಿಗೆ ಅಂಟಿಸಿದ ಚಿತ್ರ ರೆಂಬ್ರಾಂಟ್ ತೆಗೆದದ್ದೆಂದೂ ಮಾರುಕಟ್ಟೆಯಲ್ಲಿ ಅದಕ್ಕಿಂದು ಎಷ್ಟೋ ಲಕ್ಷ ರೂಪಾಯಿಗಳಾಗುವದೆಂದೂ ಹೇಳಿದರು. ಇಂತಹ ಸುದ್ದಿ ಹಬ್ಬುವುದಕ್ಕೇನು ತಡ? ಸುದ್ದಿ ತಿಳಿದವನೇ ಹಾಲ್ನಿಜರ್ ಆತನ ಬಳಿ ಬಂದು, ಕಾರ್ಡು ತನ್ನದಾದುದರಿಂದ ಹಿಂದಿರುಗಿಸಬೇಕೆಂದು ಹೇಳಿದ. "ಒಮ್ಮೆ ಕೊಟ್ಟ ಮೇಲೆ ಮುಗಿದು ಹೋಯಿತು. ನಿನಗೆ ಅದನ್ನು ಹಿಂದಕ್ಕೆ ಕೇಳುವ ಅಧಿಕಾರವೇ ಇಲ್ಲ. ಇಷ್ಟಕ್ಕೂ ಆ ಗ್ರೀಟಿಂಗ್ ಕಾರ್ಡನ್ನು ನೀನು ಸಾಲವೆಂದು ಕೊಟ್ಟಿದ್ದೆಯಾ? ಹೋಗು ಯಾರಾದರೂ ಇದನ್ನು ಕೇಳಿದರೆ ನಿನ್ನ ತಲೆ ಕೆಟ್ಟಿದೆಯೆಂದೇ ತಿಳಿದುಕೊಂಡಾರು" ಅಂದ ಆ ಮಿತ್ರ. ಹಾಲ್ನಿಜರ್ ಮೊಕದ್ದಮೆ ಹೂಡಿದ. ಕೋರ್ಟಿನಲ್ಲಿ ನಿರ್ಣಯ ಏನು ಬರುತ್ತದೆಂಬುದು ಎಲ್ಲರಿಗೂ ಗೊತ್ತೇ ಇತ್ತು. ಇದನ್ನು ಮಾರಿದ ಹಾಲ್ನಿಜರ್‌ನ ಮಿತ್ರ ಹಾಲ್ನಿಜರ್‌ನಿಗಿಂತಲೂ ಶ್ರೀಮಂತನೇ ಆದ. ಲಕ್ಷ್ಮಿಯ ಕೃಪಾಟಾಕ್ಷ ಯಾವಾಗ, ಯಾರ ಮೇಲೆ ಹಗೆ ಬೀಳುತ್ತದೆನ್ನುವುದನ್ನು ಬಲ್ಲವರಿಲ್ಲ.

ಇಂದು ನಮ್ಮ ದೇಶದಲ್ಲಿಯೂ ಗ್ರೀಟಿಂಗ್ ಕಾರ್ಡುಗಳದ್ದು ಕೋಟ್ಯಂತರ ರೂಪಾಯಿಗಳ ವ್ಯವಹಾರ. ಕೆಲವು ಕಾಗದ ಕಾರ್ಖಾನೆಗಳಲ್ಲಂತೂ ಕಾರ್ಡಿನ ಉತ್ಪಾದನೆಗೇ ಸಿಂಹಪಾಲು. ಹಿಂದಿನ ಕಾಲದಲ್ಲಿ ರಾಜಮಹಾರಾಜರು ಕಲಾವಿದರಿಗೆ ಆಶ್ರಯದಾತರಾಗಿದ್ದರೆ ಹೊಸ ಹೊಸ ವಿನ್ಯಾಸದ ಕಾರ್ಡುಗಳನ್ನು ನಿರ್ಮಿಕೊಡುತ್ತಾರೆಂಬ ಕಾರಣದಿಂದ ಇಂದು ಶುಭಾಶಯ ಪತ್ರಗಳನ್ನು ತಯಾರಿಸುವ ಸಂಸ್ಥೆಗಳು ನೂರಾರು ಕಲಾವಿದರಿಗೆ ಜೀವನಾಧಾರವಾಗಿವೆ. ಕೆಲವು ವಾಣಿಜ್ಯ ಸಂಸ್ಥೆಗಳು ತಮ್ಮ ಗ್ರಾಹಕರಿಗೆ ಕಳಿಸಲೆಂದೇ ಪ್ರತಿ ವರ್ಷ ಲಕ್ಷಾಂತರ ಗ್ರೀಟಿಂಗ್ ಕಾರ್ಡುಗಳ ಆರ್ಡರನ್ನು ಈ ಸಂಸ್ಥೆಗಳಿಗೆ ನೀಡುತ್ತವೆ. ಪ್ರತಿ ವರ್ಷವೂ ಹೊಸ ಹೊಸ ವಿನ್ಯಾಸದ ಕಾರ್ಡುಗಳೇ ಬೇಕು ಅವುಗಳಿಗೆ. ಹೀಗಾಗಿ ಹೊಸ ಹೊಸ ಕಲ್ಪನೆಗಳ ಜಾಡಿನಲ್ಲೆ ಆ ಸಂಸ್ಥೆಗೆ ದುಡಿಯುವ ಕಲಾವಿದರ ಮನಸ್ಸು ಸಾಗಿರುತ್ತದೆ. ಕಲಾವಿದರ ಮನಸ್ಸಿಗೂ ಹೊಟ್ಟೆಗೂ ಆಹಾರ ದೊರಕಿಸುವ ಕೆಲಸ ಆ ವಾಣಿಜ್ಯ ಸಂಸ್ಥೆಗಳದ್ದು.

ಸಣ್ಣ ಊರಿಗೇ ಹೋಗಿ, ದೊಡ್ಡ ನಗರಕ್ಕೇ ಹೋಗಿ, ಪೇಟೆಗೇ ಹೋಗಿ ಅಥವಾ ಸ್ಕೂಲಿನ ಆವರಣದೊಳಕ್ಕೇ ಹೋಗಿ, ಗ್ರೀಟಿಂಗ್ ಕಾರ್ಡುಗಳು ಮಾರಲ್ಪಡದ ಸ್ಥಳವೇ ಇಲ್ಲ. ಚಿಕ್ಕ ಕೊಂಪೆಯಿಂದ ಹಿಡಿದು ಪಂಚತಾರಾ ಹೋಟೆಲುಗಳ ಆರ್ಕೇಡುಗಳವರೆಗೂ ಅವುಗಳ ಸಾಮ್ರಾಜ್ಯ ವಿಸ್ತರಿಸಿದೆ. ಎಷ್ಟೋ ಕಡೆ ಅಭಿರುಚಿಯಿದ್ದವರಿಗೆ ಶಾಲೆಗಳಲ್ಲಿಯೂ ಗ್ರೀಟಿಂಗ್ ಕಾರ್ಡುಗಳನ್ನು ತಯಾರಿಸುವುದನ್ನು ಹೇಳಿಕೊಡಲಾಗುತ್ತದೆ. ಬಾಲಕರಲ್ಲಿ ನಿಹಿತವಾದ ಸೃಜನಾತ್ಮಕತೆಯನ್ನು ಗುರುತಿಸಿ, ಕೆಲವೊಮ್ಮೆ ಗ್ರೀಟಿಂಗ್ ಕಾರ್ಡು ತಯಾರಿಸುವ ಸಂಸ್ಥೆಗಳು ಅವರು ರಚಿಸಿದ ಚಿತ್ರಗಳನ್ನೇ ಕೊಂಡು ಕೊಳ್ಳುವುದುಂಟು. ಯಾರಿಗೆ ಗೊತ್ತು? ಮುಂದಿನ ಸಲ ನೀವು ಪೇಟೆಯಲ್ಲಿ ಗ್ರೀಟಿಂಗ್ ಕಾರ್ಡ್ ಕೊಂಡಾಗ ಅದರ ಮೇಲಿನ ಚಿತ್ರ ನಿಮ್ಮ ಮಕ್ಕಳೇ ಬಿಡಿದ್ದಾಗಿರಬಹುದು. ಅಥವಾ ಪಕ್ಕದ ಮನೆಯ ಮಕ್ಕಳೇ ತೆಗೆದದ್ದಾಗಿರಬಹುದು. ಇಷ್ಟಕ್ಕೂ ಹಿರಿಯರಾದ ನಿಮಗೆ ಒಂದು ರೀತಿಯಲ್ಲಿ ಎಲ್ಲ ಮಕ್ಕಳೂ ನಿಮ್ಮ ಮಕ್ಕಳೇ ಅಲ್ಲವೆ?

●

# ಕ್ಷ-ಕಿರಣಗಳು ಎಷ್ಟು ಸುರಕ್ಷಿತ ?

**ಅಂಗಾಂಶಗಳು ಎಕ್ಸ್-ರೇಗಳಿಗೆ ಪದೇಪದೆ ಒಳಗಾಗುವುದರಿಂದ ಗಂಭೀರಜೈವಿಕ ಬದಲಾವಣೆಗಳು ಉಂಟಾಗುತ್ತವೆ. ಈ ರೀತಿ ಹಾನಿಗೊಳಗಾದ ಜೀವಕೋಶಗಳಿಂದ ಜನಿಸಿದ ವ್ಯಕ್ತಿಗಳು ವಂಶಪಾರಂಪರಿಕವಾಗಿ ರೂಪಗೆಟ್ಟ ವಂಶವಾಹಿಯನ್ನು ಮುಂದಿನ ಜನಾಂಗಕ್ಕೆ ಒಯ್ಯಬಹುದು.**

● ಡಾ. ಎಚ್. ಎಸ್. ಮೋಹನ್

ನಿಮಗೆ ಕೆಮ್ಮು-ಜ್ವರ ಬಂದಿದೆ, ಕಫ ಕಟ್ಟಿದೆ. ಸಾಮಾನ್ಯ ಔಷಧಿಗಳು ಪ್ರಯೋಜನವಾಗಲಿಲ್ಲ ಎಂದು ತಜ್ಞ ವೈದ್ಯರಲ್ಲಿ ಹೋಗಿದ್ದೀರಿ. ಅವರು ವಿವರವಾಗಿ ಪರೀಕ್ಷಿಸಿ, ರಕ್ತ-ಮೂತ್ರಗಳ ಪರೀಕ್ಷೆ ಆಗಬೇಕಾದ ಅಗತ್ಯ ತಿಳಿಸುತ್ತಾರೆ. ಆಗ ನೀವು "ಡಾಕ್ಟ್ರೆ ಇವುಗಳ ಜೊತೆ ಬೇಕಾದರೆ ಒಂದು ಎಕ್ಸ್-ರೇನೂ ಮಾಡಿಸಿ ನೋಡಿಬಿಡಿ, ಏನಿದ್ದರೂ ಗೊತ್ತಾಗುತ್ತಲ್ಲ" ಎನ್ನಲೂಬಹುದು.

ಹೀಗೆ ಎಕ್ಸ್-ರೇ ಅಥವಾ ಕ್ಷ-ಕಿರಣ ಪರೀಕ್ಷೆ ಆಧುನಿಕ ವೈದ್ಯವಿಜ್ಞಾನದಲ್ಲಿ ರೋಗನಿದಾನದ ಒಂದು ಅವಿಭಾಜ್ಯ ಅಂಗವಾಗಿದೆ. ಉಳಿದ ವಿಧಾನಗಳಿಂದ ಪತ್ತೆಯಾಗದ, ದೇಹದೊಳಗಿನ ರೋಗಗಳನ್ನು ನಿಖರವಾಗಿ ಮತ್ತು ಶೀಘ್ರವಾಗಿ ಪತ್ತೆ ಹಚ್ಚಲು ಕ್ಷ-ಕಿರಣಗಳನ್ನು ವಿವಿಧ ಆಸ್ಪತ್ರೆಗಳಲ್ಲಿ, ನರ್ಸಿಂಗ್ ಹೋಂಗಳಲ್ಲಿ ವೈದ್ಯರು ಉಪಯೋಗಿಸುತ್ತಿದ್ದಾರೆ. ಕೆಲವು ಬಾರಿ ಗರ್ಭದಲ್ಲಿ ಬೆಳೆಯುತ್ತಿರುವ ಮಗುವಿನ ಬೆಳವಣಿಗೆಯನ್ನು ನೋಡಲೂ ಇದನ್ನು ಉಪಯೋಗಿಸುತ್ತಾರೆ.

ಎಷ್ಟೋ ಸಂದರ್ಭಗಳಲ್ಲಿ (ಉದಾ:. ಮೂಳೆ ಮುರಿತ) ಇದು ಅತ್ಯಂತ ಉಪಯುಕ್ತ ಮತ್ತು ಅತಿ ಅವಶ್ಯಕ ಕೂಡ. ಆದರೆ ವಿಷಾದದ ಸಂಗತಿ ಎಂದರೆ ಎಷ್ಟೋ ವೇಳೆ ಅವುಗಳ ಉಪಯೋಗ ಇರಲಿ ಅಥವಾ ಇಲ್ಲದೆ ಇರಲಿ, ಎಕ್ಸ್-ರೇ ಚಿತ್ರಗಳನ್ನು ತೆಗೆಯಲಾಗುತ್ತಿದೆ. ಹೆಚ್ಚಿನ ಸಂದರ್ಭಗಳಲ್ಲಿ ಸಾಮಾನ್ಯ ಜನರಿಗೆ ಕ್ಷ-ಕಿರಣಗಳ ಅಪಾಯದ ಬಗ್ಗೆ ಸರಿಯಾಗಿ ಗೊತ್ತಿರುವುದಿಲ್ಲ ಮತ್ತು ವೈದ್ಯರುಗಳು ಕೂಡ ಕ್ಷ-ಕಿರಣಗಳ ಕೆಟ್ಟ ಪರಿಣಾಮಗಳನ್ನು ಗಮನದಲ್ಲಿಟ್ಟುಕೊಂಡು ಎಕ್ಸ್-ರೇ ಅಗತ್ಯವೇ ಅಥವಾ ಇಲ್ಲವೇ ಎಂಬುದನ್ನು ಸರಿಯಾಗಿ ವಿವರಿಸುವುದೂ ಇಲ್ಲ.

ಈಗೀಗ ಸಣ್ಣ ಸಣ್ಣ ಆಸ್ಪತ್ರೆ ಮತ್ತು ಶುಶ್ರೂಷಾಲಯಗಳಲ್ಲಿ ಅತಿ ಸಾಮಾನ್ಯ ಕಾರಣಗಳಿಗೂ ತಾಯಿಯ ಗರ್ಭದಲ್ಲಿರುವ ಶಿಶುವಿನ ಎಕ್ಸ್-ರೇ ತೆಗೆಯುವ ಸಂಪ್ರದಾಯ ಹೆಚ್ಚಾಗುತ್ತಿದೆ. ಈ ರೀತಿ ಎಕ್ಸ್-ರೇ ತೆಗೆಯುವುದು ಗರ್ಭಿಣಿಯರಲ್ಲಿ ಒಮ್ಮೆಯಲ್ಲ ಹಲವು ಬಾರಿ ಪುನರಾವರ್ತನೆ ಆಗುತ್ತದೆ. ಕೆಲವು ವೈದ್ಯರುಗಳು

ಮಗುವಿಗೆ ಮಾಮೂಲಾಗಿ ಶೀತ ಉಂಟಾದಾಗಲಾಗಲಿ, ಜ್ವರಬಂದಾಗಲಾಗಲಿ ಎದೆಯ ಭಾಗದ 'ಸ್ಕೀನ್' ಮಾಡಿಸಬೇಕು ಎಂಬ ಅಭಿಪ್ರಾಯವನ್ನು ಕೊಡುತ್ತಾರೆ. ಇಂತಹ ಸಂದರ್ಭಗಳಲ್ಲಿ ಬೆಳೆಯುತ್ತಿರುವ ಮಗುವಿಗೆ ಈ ಅನಗತ್ಯ ಎಕ್ಸ್-ರೇ ಎಷ್ಟು ಅಪಾಯವನ್ನು ಉಂಟು ಮಾಡಬಲ್ಲದು ಎಂಬುದನ್ನು ಅವರು ಯೋಚಿಸುವುದೇ ಇಲ್ಲ. ಇಲ್ಲಿ ಉದ್ಭವಿಸುವ ಸಮಸ್ಯೆ ಎಂದರೆ ಅವರು ಕಾರ್ಯನಿರ್ವಹಿಸುತ್ತಿರುವ ಆಸ್ಪತ್ರೆಯಲ್ಲಿ ತಾವೊಬ್ಬರೇ ವೈದ್ಯರಾಗಿರಬಹುದು ಅಥವಾ ಅವರು ಖಾಸಗಿ ದವಾಖಾನೆಯನ್ನೂ ನಡೆಸುತ್ತಿರಬಹುದು. ಅಲ್ಲದೆ ಅವರಿಗೆ ಎಕ್ಸ್-ರೇ ತಂತ್ರಜ್ಞಾನ ಅಥವಾ ಸುರಕ್ಷತೆಯ ಬಗ್ಗೆ ಸೂಕ್ತವಾದ ತರಬೇತಿ ಅಥವಾ ಪರಿಣತಿ ಇರಲಿಕ್ಕೂ ಇಲ್ಲ.

## ಅಪಾಯಕರ ಅಜ್ಞಾನ

ಈ ತರಹದ ಆಸ್ಪತ್ರೆಗಳಲ್ಲಿ ಕೆಲಸ ಮಾಡುವ ಎಷ್ಟೋ ಜನ ತಂತ್ರಜ್ಞರು ಎಕ್ಸ್-ರೇ ಯಂತ್ರವನ್ನು ನಿರ್ವಹಿಸುವಲ್ಲಿ ಸೂಕ್ತ ತರಬೇತಿ ಪಡೆದಿರುವುದಿಲ್ಲ. ಅಲ್ಲದೆ ಇವರಿಗೆ ಕ್ಷ-ಕಿರಣದ ಅಪಾಯದ ಬಗ್ಗೆ ಅಗತ್ಯ ಜ್ಞಾನ, ಮಾಹಿತಿ ಇರುವುದಿಲ್ಲ. ಈ ಎಲ್ಲ ಕಾರಣಗಳಿಂದ ಅವರು ಕ್ಷ-ಕಿರಣಗಳಿಗೆ ತಮ್ಮನ್ನು ಅಗತ್ಯಕ್ಕಿಂತ ಜಾಸ್ತಿ ಒಡ್ಡಿಕೊಳ್ಳುತ್ತಾರಲ್ಲದೆ ಅದರಿಂದ ರಕ್ಷಿಸಿಕೊಳ್ಳುವ ಬಗ್ಗೆ ಅಗತ್ಯದ ಮುಂಜಾಗ್ರತೆಯ ಕ್ರಮಗಳನ್ನು ಕೈಗೊಳ್ಳುವುದಿಲ್ಲ. ಪರಿಣಾಮವಾಗಿ ಇಂಥವರು ಸುಲಭವಾಗಿ ಅತೀ ಹೆಚ್ಚಿನ ಪ್ರಮಾಣದ ಕ್ಷ-ಕಿರಣಗಳಿಗೆ ಒಳಗಾಗುತ್ತಾರೆ. ಈ ತರಹದ ಉದಾಹರಣೆಗಳು ಸಣ್ಣ ಪಟ್ಟಣಗಳಲ್ಲಿ ಎಕ್ಸ್-ರೇ ಯಂತ್ರ ಇರುವ ಆರೋಗ್ಯ ಕೇಂದ್ರಗಳಲ್ಲಿ ಹೆಚ್ಚು ಕಾಣಸಿಗುತ್ತವೆ.

ಎಕ್ಸ್‌ರೇ ಯಂತ್ರಗಳೊಂದಿಗೆ ಕೆಲಸ ಮಾಡುವ ಮಹಿಳಾ ತಂತ್ರಜ್ಞರು ಗರ್ಭಿಣಿಯರಾಗಿದ್ದರೆ ಪ್ರಾಥಮಿಕ ಹಂತದಲ್ಲಿರುವ ಗರ್ಭಸ್ಥ ಶಿಶುವು ಕ್ಷ-ಕಿರಣಕ್ಕೆ ಒಳಗಾಗುವ ಸಂಭವವಿದೆ. ಅದು ಅವರಿಗೆ ತಾನು ಗರ್ಭಿಣಿ ಎಂಬ ಅಂಶ ಸರಿಯಾಗಿ ಗೊತ್ತಿಲ್ಲದೆ ಸೂಕ್ತ ಮುನ್ನೆಚ್ಚರಿಕೆ ತೆಗೆದುಕೊಳ್ಳದಿರುವುದರಿಂದ ಆಗಿರಬಹುದು ಅಥವಾ ಗರ್ಭಸ್ಥ ಶಿಶುವಿನ ಮೇಲೆ ಕ್ಷ-ಕಿರಣಗಳಿಂದ ದುಷ್ಪರಿಣಾಮಗಳು ಉಂಟಾಗುತ್ತವೆ ಎಂಬ ಅಂಶ ಗೊತ್ತಿಲ್ಲದೆ, ಸೂಕ್ತ ಕ್ರಮಗಳನ್ನು ಕೈಗೊಳ್ಳದಿರುವುದರಿಂದಲೂ ಆಗಿರಬಹುದು.

ಇನ್ನೊಂದು ಗಮನಿಸಬೇಕಾದ ಅಂಶವೆಂದರೆ ರೋಗಿಯ ಸಂಬಂಧಿಕರು, ಸ್ನೇಹಿತರು ಮತ್ತಿತರರು ಎಕ್ಸ್-ರೇ ತೆಗೆಸುವಾಗ ರೋಗಿಯ ಜೊತೆಗೆ ಇದ್ದು, ಅವರೂ ಕ್ಷ-ಕಿರಣಗಳಿಗೆ ಒಳಗಾಗುವ ಅನಗತ್ಯವಾಗಿ ಸಂಭವವಿರುತ್ತದೆ ಎನ್ನುವುದು.

ಗರ್ಭಸ್ಥ ಶಿಶುವು ಮೊದಲ ಆರು ವಾರಗಳಲ್ಲಿ, ಕ್ಷ-ಕಿರಣಗಳ ದುಷ್ಪರಿಣಾಮಗಳಿಗೆ ಬಹಳ ಬೇಗ ಒಳಗಾಗುತ್ತದೆ. ಎಷ್ಟೋ ಮಹಿಳೆಯರಿಗೆ ತಾವು ಗರ್ಭ ಧರಿಸಿದ್ದೇವೆ ಎಂಬ ವಿಷಯವೇ ಗೊತ್ತಿರುವುದಿಲ್ಲ. ಆದ್ದರಿಂದ ಸೂಕ್ತ ರಕ್ಷಣಾ ಕ್ರಮಗಳನ್ನು ತೆಗೆದುಕೊಳ್ಳುವ ಆಸ್ಪತ್ರೆಗಳಲ್ಲಿ ಸಹ ತಾಯಿಯಾಗಲಿರುವ ಮಹಿಳೆಯ ಅಜ್ಞಾನದಿಂದ ಗರ್ಭಸ್ಥ ಮಗು ಅನಗತ್ಯವಾಗಿ ಕ್ಷ-ಕಿರಣಗಳಿಗೆ ಒಳಗಾಗುವ ಸಂಭವವಿದೆ.

## ದುಷ್ಪರಿಣಾಮಗಳು

ಗರ್ಭಸ್ಥ ಶಿಶು ಮೇಲಿಂದ ಮೇಲೆ ಎಕ್ಸ್-ರೇಗೆ ಒಳಗಾಗುವುದರಿಂದ ಗರ್ಭಪಾತವಾಗಬಹುದು. ಬೆಳವಣಿಗೆಯ ಹಂತದಲ್ಲಿ ವಿವಿಧ ಬಗೆಯ ಊನಗಳು ಉಂಟಾಗಬಹುದು. ಮಗು ವಿವಿಧ ಸೋಂಕು ರೋಗಗಳಿಗೆ ಒಳಗಾಗಬಹುದು ಮತ್ತು ಅದಕ್ಕೆ ಲ್ಯೂಕೀಮಿಯಾ (ರಕ್ತದ ಕ್ಯಾನ್ಸರ್) ಆಗಬಹುದು ಅಥವಾ ಬೇರೆ ರೀತಿಯ ಕ್ಯಾನ್ಸರ್ ಆಗಬಹುದು. ಗರ್ಭ ಧರಿಸಿದ ನಂತರದ ೭ ರಿಂದ ೩೬ನೆಯ ದಿನಗಳು ಕ್ಷ-ಕಿರಣದ ದುಷ್ಪರಿಣಾಮಗಳಿಗೆ ಪರ್ವಕಾಲ ಎನ್ನಲಾಗಿದೆ. ಗರ್ಭಸ್ಥ ಶಿಶು ಒಂದು ರ್‍ಯಾಡ್‌ದಷ್ಟು ಪ್ರಮಾಣದಲ್ಲಿ ಕಿರಣಗಳಿಗೆ ಒಳಗಾದರೆ, ೧೦ ವರ್ಷಗಳೊಳಗೆ ಅದಕ್ಕೆ ಲ್ಯೂಕೀಮಿಯಾ ಬರುವ ಸಾಧ್ಯತೆ ಬಹಳ.

ಎದೆ-ಶ್ವಾಸಕೋಶದ ಭಾಗದ ಎಕ್ಸ್-ರೇಯಿಂದ ೧೦೦ ರಿಂದ ೧೫೦ ಮಿಲಿ ರ್‍ಯಾಡ್ ಕ್ಷ-ಕಿರಣಗಳೂ, ಕಿಬ್ಬೊಟ್ಟೆಯ ಭಾಗದ ಎಕ್ಸ್-ರೇಯಿಂದ ೫೦೦-೬೦೦ ಮಿಲಿ ರ್‍ಯಾಡ್ ಕ್ಷ-ಕಿರಣಗಳೂ ರೋಗಿಯ ದೇಹವನ್ನು ಪ್ರವೇಶಿಸುತ್ತವೆ ಎನ್ನುವುದೊಂದು ವೈದ್ಯಕೀಯ ವಲಯದಲ್ಲಿನ ಲೆಕ್ಕಾಚಾರ. (೧೦೦೦ ಮಿಲಿ ರ್‍ಯಾಡ್ =೧ ರ್‍ಯಾಡ್)

ಎರಡನೇ ಮಹಾಯುದ್ಧದಲ್ಲಿ ಅಮೆರಿಕವು ಜಪಾನಿನ ಹಿರೋಷಿಮಾ, ನಾಗಾಸಾಕಿಗಳ ಮೇಲೆ ಅಣುಬಾಂಬನ್ನು ಹಾಕಿದಾಗ ತಕ್ಷಣ ಸಾಯದೆ ಉಳಿದ ನಾಗರಿಕರಲ್ಲಿ ಹೆಚ್ಚಿನವರು ಬಾಂಬಿನ ಸ್ಫೋಟದಿಂದ ಉಂಟಾದ ಕ್ಷ-ಕಿರಣದ ದುಷ್ಪರಿಣಾಮದಿಂದ ವಿವಿಧ ಕ್ಯಾನ್ಸರುಗಳಿಗೆ-ಅದರಲ್ಲೂ ಮುಖ್ಯವಾಗಿ ಲ್ಯೂಕೀಮಿಯಾ, ಥೈರ್ಯಾಡ್ ಗ್ರಂಥಿಯ ಕ್ಯಾನ್ಸರ್, ಹೆಂಗಸರ ಸ್ತನದ ಕ್ಯಾನ್ಸರ್, ಶ್ವಾಸಕೋಶದ ಕ್ಯಾನ್ಸರುಗಳಿಗೆ-ತುತ್ತಾಗಿ ಮರಣ ಹೊಂದಿದರು. ಅಷ್ಟಲ್ಲದೆ ಅಳಿದುಳಿದವರ ಮಕ್ಕಳು, ಮೊಮ್ಮಕ್ಕಳು ಸಹ ವಿವಿಧ ಊನಗಳು, ಕಾಯಿಲೆಗಳಿಗೆ ತುತ್ತಾದವು. ಕ್ಷ-ಕಿರಣಗಳ ಸಂಪರ್ಕದಲ್ಲಿ ಸತತವಾಗಿ ಬರುವ ಉದ್ಯೋಗದಲ್ಲಿ ತೊಡಗಿದವರೂ ವಿಭಿನ್ನ ಕ್ಯಾನ್ಸರ್ ಕಾಯಿಲೆಗಳಿಗೆ ತುತ್ತಾಗುತ್ತಾರೆ. ಉದಾ: ಗಡಿಯಾರದ ಉದ್ದಿಮೆಯಲ್ಲಿ ರೇಡಿಯಂ ಡಯಲ್‌ಗೆ ಬಣ್ಣ ಬಳಿಯುವ ಕೆಲಸ ಮಾಡುವವರು ವಿವಿಧ ಮೂಳೆಗಳ ಕ್ಯಾನ್ಸರ್‌ಗೂ, ಯುರೇನಿಯಂ ಗಣಿಗಳಲ್ಲಿ ಕೆಲಸ ಮಾಡುವವರು ಶ್ವಾಸಕೋಶದ ಕ್ಯಾನ್ಸರ್‌ಗೂ, ಎಕ್ಸ್-ರೇ ಜೊತೆಗೆ ಕೆಲಸ ಮಾಡುವ ವೈದ್ಯರು, ತಂತ್ರಜ್ಞರು ರಕ್ತದ ಮತ್ತು ಚರ್ಮದ ಕ್ಯಾನ್ಸರ್‌ಗೂ ತುತ್ತಾಗುವ ಸಂಭವ ಹೆಚ್ಚು. ವೈದ್ಯಕೀಯ ಕಾರಣಗಳಿಂದ ಕ್ಷ-ಕಿರಣಕ್ಕೆ ಒಳಗಾಗುವ ರೋಗಿಗಳು ರಕ್ತ, ಸ್ತನ, ಶ್ವಾಸಕೋಶ, ಮೂಳೆ, ಥೈರ್ಯಾಡ್ ಮತ್ತು ಯಕೃತ್ತಿನ ಕ್ಯಾನ್ಸರ್‌ಗೆ ಒಳಗಾಗುವ ಸಾಧ್ಯತೆ ಜಾಸ್ತಿ. ಅಲ್ಲದೆ ಅದರಿಂದಾಗಿ ಕಣ್ಣಿಗೆ ಪೊರೆ ಬಂದು ದೃಷ್ಟಿ ಪತನವಾಗಲೂಬಹುದು.

## ವಂಶವಾಹಿಗೂ ವಿಕಿರಣ

ಮೇಲಿನ ಎಲ್ಲಾ ಅಂಶಗಳನ್ನು ಗಮನಿಸಿದಾಗ ಬರಿ ವೈದ್ಯ ಹೇಳಿದ್ದಾನೆನ್ನುವುದಕ್ಕಾಗಲಿ ಅಥವಾ ರೋಗಿ ಇಷ್ಟಪಡುತ್ತಾನೆ ಎಂಬ ಕಾರಣದಿಂದಾಗಲಿ. ಖಂಡಿತವಾಗಿಯೂ ಎಕ್ಸ್-ರೇ ತೆಗೆಯಬಾರದು. ಪ್ರತಿಯೊಂದು ಸಣ್ಣ ಕ್ಷ-ಕಿರಣದ ಪ್ರಮಾಣದಲ್ಲೂ ನಾವು ರೋಗಿಯಲ್ಲಿ ಅದೂ ವಿಶೇಷವಾಗಿ ಚಿಕ್ಕ ಮಕ್ಕಳಲ್ಲಿ- ಕ್ಯಾನ್ಸರ್ ಉಂಟಾಗುವ ಸಾಧ್ಯತೆಯನ್ನು ಹೆಚ್ಚು ಮಾಡುತ್ತಿದ್ದೇವೆಂಬುದನ್ನು ಮರೆಯಕೂಡದು. ಇಂತಹ ಅಮೂಲ್ಯ ತಂತ್ರವನ್ನು ಸೂಕ್ತ ತರಬೇತಿ ಪಡೆದ ತಂತ್ರಜ್ಞರಿಲ್ಲದೆಯೋ



''ಹಾಗಾದರೆ ದೊಡ್ಡ ಪ್ರಮಾಣದ ಕುಡಿತ ಹೃದಯಾಘಾತವನ್ನು ಸಂಪೂರ್ಣ ತಡೆಯುತ್ತದೆ ಅಲ್ವ ಡಾಯರೆ?''

ಅನಗತ್ಯವಾಗಿಯೋ ಉಪಯೋಗಿಸುವುದು ಹಾಗೂ ಸಾಕಷ್ಟು ರಕ್ಷಣಾ ಕ್ರಮಗಳನ್ನು ತೆಗೆದುಕೊಳ್ಳದೆ ಇರುವುದು ಅಪಾಯಗಳನ್ನು ಹೆಚ್ಚು ಮಾಡುವುದಲ್ಲದೆ ಜನಾಂಗದ ತಳಿಯ ಗಂಡಾಂತರವನ್ನು ವೃದ್ಧಿಸಿದಂತೆ ಆಗುತ್ತದೆ. ಏಕೆಂದರೆ ಅಂಗಾಂಶಗಳು ಎಕ್ಸ್-ರೇಗಳಿಗೆ ಬಹಳ ಸಲ ಒಳಗಾಗುವುದರಿಂದ ಗಂಭೀರ ಜೈವಿಕ ಬದಲಾವಣೆಗಳು ಉಂಟಾಗುತ್ತವೆ. ಈ ರೀತಿ ಹಾನಿಗೊಳಗಾದ ಜೀವಕೋಶಗಳಿಂದ ಜನಿಸಿದ ವ್ಯಕ್ತಿಗಳು ವಂಶಪಾರಂಪರಿಕವಾಗಿ ರೂಪಗೆಟ್ಟ ವಂಶವಾಹಿಯನ್ನು ಮುಂದಿನ ಜನಾಂಗಕ್ಕೆ ಒಯ್ಯಬಹುದು.

ಅಯನೀಕೃತ ವಿಕಿರಣದ ಮಾನವ ನಿರ್ಮಿತ ಮೂಲಗಳ ಪೈಕಿ ವೈದ್ಯಕೀಯ ಎಕ್ಸ್-ರೇ ಘಟಕಗಳು ಜನಸಮುದಾಯಕ್ಕೆ ಸುಸ್ಥಿತಿಯಲ್ಲಿರುವ ಅಣು ರಿಯಾಕ್ಟರುಗಳಿಂದ ಹೊರ ಸೂಸುವ ವಿಕಿರಣಕ್ಕಿಂತ ಹೆಚ್ಚಿನ ವಿಕಿರಣ ಹರಡುತ್ತವೆಯೆಂಬುದು ವಿದೇಶಗಳಲ್ಲಿ ನಡೆಸಿದ ಅಧ್ಯಯನಗಳಿಂದ ಸಾಬೀತಾಗಿದೆ. ಇಂಗ್ಲೆಂಡಿನಲ್ಲಿ ನಡೆಸಿದ ಅಧ್ಯಯನವೊಂದರಲ್ಲಿ ವಿಕಿರಣ ಅಪಾಯದಲ್ಲಿ ಶೇಕಡಾ ೧೧.೫ ವೈದ್ಯಕೀಯ ಎಕ್ಸ್-ರೇಗಳ ವಿಕಿರಣವಾಗಿದೆಯಾದರೆ ಭದ್ರ ರಿಯಾಕ್ಟರುಗಳಿಂದ ಹೊರಸೂಸುವ ವಿಕಿರಣ ಕೇವಲ ಶೇಕಡಾ ೦.೫ರಷ್ಟು ಆಗಿದೆಯೆಂದು ಗೊತ್ತಾಗಿದೆ. ಭಾರತದಲ್ಲಿ ೩೫,೦೦೦ಕ್ಕಿಂತ ಹೆಚ್ಚು ಎಕ್ಸ್-ರೇ ಯಂತ್ರಗಳು ಕಾರ್ಯನಿರ್ವಹಿಸುತ್ತಿವೆಯಾದರೂ ಇವುಗಳಿಂದ ಸಾರ್ವಜನಿಕರಿಗೆ ಉಂಟಾಗುತ್ತಿರುವ ಅಪಾಯದ ಪ್ರಮಾಣ ಎಷ್ಟು ಎನ್ನುವುದು ಇನ್ನೂ ಗೊತ್ತಾಗಿಲ್ಲ.

ಗರ್ಭಿಣಿಯರ ಎಕ್ಸ್-ರೇ ತೆಗೆಯುವುದನ್ನು ಆದಷ್ಟು ತಪ್ಪಿಸಬೇಕು ನಿಜ. ಆದರೆ ತಾಯಿಯ ಜೀವವೇ ಅಪಾಯಕ್ಕೊಳಗಾದಾಗ ಎಕ್ಸ್-ರೇ ತೆಗೆಯುವುದು ಅನಿವಾರ್ಯವೇ ಆಗುತ್ತದೆ. ಹಾಗೆಯೇ ಅನಗತ್ಯವಾಗಿ ಮತ್ತೆ ಮತ್ತೆ ಗರ್ಭಿಣಿಯ ಎಕ್ಸ್-ರೇ ತೆಗೆಯುವುದಾಗಲಿ ಚಿಕ್ಕ ಮಕ್ಕಳನ್ನು ಅನವಶ್ಯಕವಾಗಿ 'ಸ್ಕ್ರೀನಿಂಗ್'ಗೆ ಒಳಪಡಿಸುವುದಾಗಲಿ ಖಂಡಿತ ಸಲ್ಲದು. ಗೊತ್ತಿಲ್ಲದೇ ಗರ್ಭಿಣಿಯರ ಎಕ್ಸ್-ರೇ ತೆಗೆಯುವ ಕ್ರಮವನ್ನು ತಪ್ಪಿಸಲು ಯಾವುದೇ ಸ್ತ್ರೀಯ ಕಿಬ್ಬೊಟ್ಟೆಯ ಭಾಗದ ಎಕ್ಸ್-ರೇಯನ್ನು ಅವಳ ಋತುಮತಿಯಾಗಿ ಮೊದಲ ೧೦ ದಿನಗಳಲ್ಲಿ ಮಾತ್ರ ತೆಗೆಯಬೇಕು.

ಈ ದಿಸೆಯಲ್ಲಿ ಸರಕಾರವೂ ಸೂಕ್ತ ಕ್ರಮ ಕೈಗೊಂಡು ಎಕ್ಸ್-ರೇ ಉಪಕರಣ ಮಿತಿಯಲ್ಲಿ ಬಳಸಲ್ಪಡುವ ಹಾಗೆ ನೋಡಿಕೊಳ್ಳಬೇಕು. ಆಸ್ಪತ್ರೆಗಳಲ್ಲಿ ಕ್ಷ-ಕಿರಣಗಳು ಯಾವುದೇ ವಿಧದಿಂದ ಅನವಶ್ಯಕವಾಗಿ ಸೋರುವುದನ್ನು ನಿಲ್ಲಿಸಲು ಸೂಕ್ತ ತರಬೇತಿ ಪಡೆದ ತಂತ್ರಜ್ಞರನ್ನು ನಿಯಮಿಸುವುದು ಮತ್ತು ಅಗತ್ಯ ರಕ್ಷಣಾ ಕ್ರಮಗಳನ್ನು ಕಾಲಕಾಲಕ್ಕೆ ತೆಗೆದುಕೊಳ್ಳುವುದು ತೀರಾ ಅವಶ್ಯ.

## ನಗೆಯ ಮಹಿಮೆ

**ಸು**ಪ್ರಸಿದ್ಧ ಅಮೆರಿಕನ್ ಪತ್ರಕರ್ತ ನಾರ್ಮನ್ ಕಜಿನ್ಸ್‌ರಿಗೆ ಆಂಕಿಲೋಸಿಂಗ್ ಸ್ಪಾಂಡಿಲೈಟಿಸ್ ಎಂಬ ಸೆಟೆ ರೋಗ ಉಲ್ಬಣಿಸಿ ಆಸ್ಪತ್ರೆಗೆ ದಾಖಲಾದರು. ಕಿರುಬೆರಳನ್ನು ಕೂಡ ಅಲುಗಾಡಿಸಲಾಗದ ಅವರ ಸ್ಥಿತಿಯನ್ನು ಕಂಡು ಕಜಿನ್ಸರ ಆಯಸ್ಸು ಕೆಲವೇ ತಿಂಗಳು ಎಂದು ವೈದ್ಯರು ಸಾರಿದ್ದೂ ಆಯಿತು. ಒಂದು ದಿನ ತಮ್ಮನ್ನು ನೋಡಲು ಬಂದ ಅಭಿಮಾನಿಯೊಬ್ಬರು ಹಾರಿಸಿದ ಸಾಫ್ಟಪಟಾಕಿಯಿಂದಾಗಿ ಕಜಿನ್ಸ್ ಜೋರಾಗಿ ನಕ್ಕದ್ದೇ ಕಾರಣವಾಗಿ ಸೆಟೆದುಕೊಂಡ ಅವರ ಬೆರಳುಗಳು ಸಡಿಲಗೊಂಡವು. ಅನಂತರ ಜೋಕುಹೇಳುವುದು, ಹಾಸ್ಯ ಚಿತ್ರಗಳನ್ನು ನೋಡುವುದು, ಹಾಸ್ಯ ಸಾಹಿತ್ಯ ಓದುವುದು ಇತ್ಯಾದಿಗಳಲ್ಲಿ ತೊಡಗಿದ ಅವರು ಸ್ವಲ್ಪವೇ ಕಾಲದಲ್ಲಿ ಪೂರ್ಣ ಹುಷಾರಾಗಿ ಮನೆಗೆ ಮರಳಿದರು.

ಕೆ. ವೆಂಕಣ್ಣಾಚಾರ್

ಮಾತು - ಮಾಣಿಕ್ಯ

೩೧

# ವಾಯು: ಪ್ರಾಣಿಗಳ ಪ್ರಾಣ

ಅಲ್ಲ ಸಲ್ಲದ ಅರ್ಥರಹಿತವಾದ, ಮುಂತಾದುವಕ್ಕೆ ಕೈಹಾಕುವವನನ್ನು ಕುರಿತು' ಗಾಳಿ ಗುದ್ದಿ ಮೈ-ಕೈ ನೋಯಿಸಿಕೊಳ್ಳುವವ ಈತ' ಎಂದು ಬಣ್ಣಿಸುವ ವಾಡಿಕೆ. ಜಗಳಾಟದಲ್ಲಿ ಮಕ್ಕಳು ಒಬ್ಬರನ್ನೊಬ್ಬರು ಬೆನ್ನ ಮೇಲೆ ಗುದ್ದುತ್ತಾರಲ್ಲ! ಹಾಗೇನಾದರೂ ಗುದ್ದಿಸಿಕೊಳ್ಳಲು ಗಾಳಿಗೆ ಬೆನ್ನುಂಟೆ? ಗಾಳಿಯದು ಕಣ್ಣಿಗೆ ಕಾಣದ ರೂಪು. ಹಾಗೆಂದರೆ 'ಅದು ಇಲ್ಲ' ಎನ್ನಬಹುದೆ? ಗಾಳಿ ಇದೆಯೆಂದೇ ಮರದ ಎಲೆಗಳು ಅಲುಗುತ್ತವೆ; ಬಳ್ಳಿಗಳು ಉಯ್ಯಾಲೆಯಂತೆ ತೂಗುತ್ತವೆ. ಹೂವು-ಕಾಯಿ-ಹಣ್ಣು ಕಳಚಿ ಕೆಳಕ್ಕೆ ಬೀಳುತ್ತವೆ; ನೆಲದ ಮೇಲೆ ಬಿದ್ದ ಕಸ-ಕಡ್ಡಿ, ಕಾಗದ ತುಂಡು ಒಂದೆಡೆಯಿಂದ ಇನ್ನೊಂದೆಡೆಗೆ ಭರದಿಂದ ಸಾಗುತ್ತವೆ-ಕಾಣದ ಗಾಳಿ, ಕಾಣದ ಕೈಯೊಳಗೆ ಕಾಣದ ಕಸಬರಿಗೆಯನ್ನು ಹಿಡಿದುಕೊಂಡು ಗುಡಿಸುತ್ತಿದೆಯೋ ಎನ್ನುವಂತೆ! ಮಳೆಗಾಗಿ ಕಾಯುತ್ತಿರುವ ಕೃಷಿಕನ ಸೀಮೆಯತ್ತ ದೂರದ ಮೋಡವನ್ನು ಸೆಳೆದೊಯ್ದು ಮಳೆ ಸುರಿಸಿ ಸಂತಸ ಬೀರುತ್ತದೆ. ಅದೇ ಗಾಳಿ ತಲೆಯ ಮೇಲೆ ಕವಿದ ಕರಿಯ ಮೋಡವನ್ನು ಬೇರೆ ಇನ್ನೆಲ್ಲಿಯೋ ಸಾಗಿಸಿ ಅದೇ ರೈತನ ಹಿಡಿ ಶಾಪಕ್ಕೆ ಗುರಿಯಾಗುತ್ತದೆ.

ಗಾಳಿ ಚಲನಶೀಲ. ನಿಂತಲ್ಲಿ ನಿಲ್ಲುವ ಜಾಯಮಾನ ಅದರದಲ್ಲ. ಹಾಗೇನಾದರೂ ನಿಂತಿತೋ, ಮಾನವನಿಗೆ ಕಸಿವಿಸಿ. ಬೀಸಣಿಕೆಯ ಮೂಲಕ ಕೃತ್ರಿಮ ಗಾಳಿಯನ್ನಾದರೂ ಬರಮಾಡಿಕೊಳ್ಳುತ್ತಾನೆ. ಚಲಿಸುವ ಗಾಳಿ ಇದ್ದರೇನೇ ಆತನಿಗೆ ಸೊಗಸು. ಅವನಿಗಷ್ಟೇ ಅಲ್ಲ, ಪಶು-ಪಕ್ಷಿ ಸಂಕುಲಕ್ಕೆ, ಸಸ್ಯ ಸಮುದಾಯಕ್ಕೆ, ಸಮಸ್ತ ಜೀವ ಕೋಟಿಗೆ ಕೂಡ.

ಗಾಳಿ ಬಹುರೂಪಿ. ಸೂಸು ಗಾಳಿಗೆ ಸರ್ವತ್ರ ಸ್ವಾಗತ. ಚಳಿಗಾಳಿಗೆ ಮೈಕೈ ಕೊರೆತ; ನೆಲದಲ್ಲಿ ಬಿರುಕು ಬಿಟ್ಟರೂ ಅಚ್ಚರಿಪಡಬೇಕಾಗಿಲ್ಲ. ಬಿರುಗಾಳಿ ಅರ್ಥಾತ್ ಚಂಡಮಾರುತ ಬೀಸಿದರಂತೂ ಮುಗಿದೆ ಹೋಯಿತು. ಅದು ಭಾರೀ ಅನರ್ಥಕಾರಿ. ಕಡಲು ಅಲ್ಲೋಲ ಕಲ್ಲೋಲ. ಕರಾವಳಿಯೆಲ್ಲ ಜಲಮಯ. ದೋಣಿ ಬಂಡೆಗಲ್ಲಿಗೆ ಅಪ್ಪಳಿಸಿ ನುಚ್ಚುನೂರು, ಪಯಣಿಗರೆಲ್ಲ ನೀರುಪಾಲು. ಹೆಮ್ಮರಗಳು ಉರುಳುವುವು. ವಿದ್ಯುತ್ ಕಂಬಗಳು ನೆಲಕಚ್ಚುವವು. ಇಂತಹ ಗಾಳಿಯ ದಾಳಿಯ ಎದುರು ಯಾರು ತಾನೆ ನಿಲ್ಲಬಲ್ಲರು? ಗಾಳಿಗೆ ಗೂಳಿಯ ಬಲವುಂಟೆಂದರೆ ತಪ್ಪಾಗದು. ಋಗ್ವೇದದಲ್ಲಿ ಇಂದ್ರಾದಿ ದೇವತೆಗಳನ್ನು ಹಲವು ಬಾರಿ 'ವೃಷಭ' (ಹೋರಿ) ಎಂದೇ ಬಣ್ಣಿಸಲಾಗಿದೆ. ಮರುತ್ ಅರ್ಥಾತ್ ವಾತ ಇಂತಹ ವರ್ಗಕ್ಕೆ ಸೇರಿದುದು. ಎಂತಲೆ ಅದರದು ಅತುಲ ಪರಾಕ್ರಮ. ನಾವು ನೆಲೆಸಿರುವ ಭೂಮಿಯನ್ನೆಲ್ಲ ಆವರಿಸಿರುವ ವಾಯುಮಂಡಲವು ಗಾಳಿಯ ರೂಪು ತಳೆದು ಹತ್ತು-ಹಲವು ತೆರನಾದ ಕಾರ್ಯಗಳನ್ನು ಎಸಗುವುದು.

ವಾಯುವಾದರೋ ವಿಶ್ವಕರ್ತನ ಅಷ್ಟ ಶರೀರಗಳಲ್ಲಿ ಒಂದೆನಿಸಿದೆ. 'ಯಯಾ ಪ್ರಾಣಿನಃ ಪ್ರಾಣವಂತಃ', ಎಂದು ಕಾಳಿದಾಸ ವಿವರಿಸುವಂತೆ ಯಾವುದರ ನೆರವಿನಿಂದ ಪ್ರಾಣವನ್ನು ಪಡೆದುಕೊಂಡು ಜೀವಿಗಳು ಪ್ರಾಣಿಗಳೆಂದೆನಿಸಿಕೊಂಡವೋ ಅದುವೆ ವಾಯು. ಎಂತಲೆ ಅದು ನಮ್ಮ ಪ್ರಾಣದ ಪ್ರಾಣ.

'ವಾಯು' ಎಂಬ ಪದವೇ ಅರುಹುವಂತೆ ಅದು ಗಮನಶೀಲ. 'ವಾತಿ ಗಚ್ಛತಿ ಇತಿ ವಾಯುಃ'. ಆದರ ಇನ್ನೊಂದು ಹೆಸರಾದ 'ಸದಾಗತಿ' ಎಂಬುದು ತುಂಬ ಅರ್ಥಪೂರ್ಣ. 'ಅನಿಲ' ಎಂಬುದು ವಾಯುವಿನ ಇನ್ನೊಂದು ಪರ್ಯಾಯ ಪದ. 'ಅನತಿ ಅನೇನ ಜೀವತಿ' ಎಂಬ 'ಅನ್' ಧಾತುವಿಗೆ 'ಲ್ಇಚ್' ಎಂಬ ಪ್ರತ್ಯಯ ಸೇರಿ ಉಂಟಾದ ಪದ ಇದು. ಏನಿದ್ದರೂ ವಾಯುವು ಚಲನ, ಗಮನ, ಜೀವನ ಇವೆಲ್ಲವುಗಳ ಸಂಕೇತ ಎನಿಸಿಕೊಂಡಿದೆ.

ನಮ್ಮ ದೇಹದಲ್ಲಿ ವಾಯು ಇರುವನಕ ಬದುಕಿನ ಆಟ-ಚೆಲ್ಲಾಟ, ಎಲ್ಲವೂ ಮೋಜು-ಮಾಟ. ವಾಯುವಿನಿಂದಲೆ ನಮ್ಮ ಆಯುಷ್ಯ. ಅದಕ್ಕೇನಾದರೂ ಅಪಾಯ ಸಂಭವಿಸಿತೋ 'ಭಜಗೋವಿಂದಂ' ಬಣ್ಣಿಸುವಂತೆ 'ಗತವತಿ ವಾಯೌ ದೇಹಾ ಪಾಯೇ, ಭಾರ್ಯಾಬಿಭ್ಯತಿ ತಸ್ಮಿನ್ ಕಾಯೇ?', ತನ್ನ ಗಂಡನ ಕಳೇವರನ್ನು ಕಂಡು ಮುದ್ದು ಮಡದಿ ಕೂಡ ಮುದುಡಿಕೊಳ್ಳುತ್ತಾಳೆ. ಇದುವರೆಗೆ ಶರೀರದೊಳಗೆ ಸಂಚರಿಸುತ್ತಿರುವ ಪ್ರಾಣವಾಯು ಹೊರಗಣ ಪ್ರಪಂಚದಲ್ಲೆಲ್ಲ ನೆಲೆಸಿರುವ ಅನಿಲದಲ್ಲಿ ಒಂದಾಗುತ್ತದೆ. ಮರಣೋನ್ಮುಖನಾದವನ ಅಂತಿಮ ಆಶಯವು ಈಶೋಪನಿಷತ್ತಿನ 'ವಾಯುರನಿಲನುಮ್ಮತಂ...' ಎಂಬ ಮಂತ್ರದಲ್ಲಿ ಅಡಕವಾಗಿದೆ. ತನ್ನೊಳಗಣ ವಾಯು ಹೊರಗಣ ಅನಿಲದಲ್ಲಿ ಸೇರಿಕೊಂಡು ಅಮೃತತ್ವವನ್ನು (ಮೋಕ್ಷ) ಪಡೆಯಲೆಂಬುದು ಆತನ ಕೋರಿಕೆ.

ಪರಮಾತ್ಮನಂತೆ ಆತನ ತನುವೆನಿಸಿದ ವಾಯುವೂ ಅಮೃತ. ಅದಕ್ಕೆ ಸಾವಿಲ್ಲ. ದೇಹವಾದರೋ ನಶ್ವರ; ಬೂದಿಯಾಗಿ ಕೊನೆಗೊಳ್ಳುವಂಥದು. 'ಅಥೇದಂ ಭಸ್ಮಾಂತ ಶರೀರಂ' ಎನ್ನುತ್ತದೆ. ಈಶೋಪನಿಷತ್ತು. ಶರೀರ ಸುಡುತ್ತದೆ. ಸುಡುವ ಕ್ರಿಯೆಯಲ್ಲಿ ತೊಡಗಿದ ಅಗ್ನಿಗೆ ವಾಯು ಸಹಾಯ ನೀಡುತ್ತದೆ. ಆದರೆ ತಾನು ಸುಡುವುದಿಲ್ಲ. ಅನಿಲ ಇದ್ದರೇನೆ ಅನಲ ಸುಡಲು ಸಾಧ್ಯ. ಇವೆರಡರ ನಿಕಟ ಸಂಬಂಧದಿಂದಾಗಿಯೆ 'ಅನಲಾನಿಲಸಂಯೋಗ' (ಬೆಂಕಿ-ಗಾಳಿಗಳ ಕೂಟ) ಎಂಬ ಪದಪ್ರಯೋಗ ರೂಢಿಯಲ್ಲಿ ಬಂದುದು. ಬೆಂಕಿ-ಗಾಳಿ ಕೂಡಿದರೆ ಊರ ಹೊರಗಣ ಹುಲ್ಲು ಬಣವೆಗಳೆಲ್ಲ ಹೋಳಿ! ಹಣತೆಯಲ್ಲಿನ ದೀಪ ಬೆಳಗುವುದು ಕೂಡ ವಾಯುವಿನ ಕೃಪೆಯಿಂದಾಗಿಯೆ. ನಿರ್ವಾತ ಪ್ರದೇಶದಲ್ಲಿ ಹಣತೆ ಬೆಳಗದು ಎಂಬುದು ಎಷ್ಟು ನಿಜವೋ ವೇಗದಿಂದ ಬೀಸುವ ಗಾಳಿಯ ಎದುರು ಅದೇ ದೀಪ ನಂದಿಹೋಗುವುದು ಅಷ್ಟೇ ನಿಜವಾದ ಸಂಗತಿ. ವಾಯುವಿನ ಮಹಿಮೆಯೆ ವಿಚಿತ್ರ!

ತನ್ನ ಅಣ್ಣ ತಮ್ಮಂದಿರಾದ ನೀರು, ಬೆಂಕಿಗಳಂತೆ ಗಾಳಿಯದೂ ಸರ್ವತ್ರ ಸಮಾನ ದೃಷ್ಟಿ. ಈ ಅನಿಲಮಹಾಶಯನಿಗೆ ಸುಗಂಧ- ದುರ್ಗಂಧಗಳೆಂಬ ಭೇದ-ಭಾವವಿಲ್ಲ. ಕಂಡ ಕಂಡ ವಾಸನೆಯನ್ನು ಹೊತ್ತುಕೊಂಡು ಹೋಗಿ ಅದನ್ನು ಎಲ್ಲೆಡೆ ಹರಡುವ ಹವ್ಯಾಸ ಇದರದು. ಗಂಧವೆಂಬುದು ಮೂಲತಃ ಪೃಥಿವಿಯ ಗುಣ ವಿಶೇಷ. ಆದರೆ ಅದನ್ನು ಇತರರಿಗೆ ಪರಿಚಯಿಸುವ ಕಾರ್ಯ ವಾಯುವಿನದು. ಕಮಲದ ಕಂಪು, ಸಂಪಿಗೆಯ ಸೊಂಪು, ಮಲ್ಲಿಗೆಯ ನರುಗಂಪು ಆಗಿರಲಿ, ಕೊಳೆತ ಹಣ್ಣು ಹಂಪಲುಗಳ ಇಲ್ಲವೇ ಚರಂಡಿಯ ದುರ್ವಾಸನೆಯಾಗಲಿ ಎಲ್ಲವನ್ನು ಸಮಾನಭಾವದಿಂದ ತನ್ನ ಹರವಾದ ಹೆಗಲ ಮೇಲೆ ಇರಿಸಿಕೊಂಡು ಸಾಗುವ ಉದಾರ ಹೃದಯಿ ಈ ವಾಯು ಮಹಾರಾಯ! ಇದರಿಂದಾಗಿಯೆ 'ಗಂಧವಾಹ' ಎಂಬ ಇನ್ನೊಂದು ಅನ್ವರ್ಥಕ ಪರ್ಯಾಯ ಪದ ಇದಕ್ಕೆ ಅನ್ವಯ. ಇದರ ಈ ಉದಾರ ಸ್ವಭಾವವನ್ನು ಗಮನಿಸಿಯೊ ಏನೋ ಎನ್ನುವಂತೆ ತಮ್ಮ ತಲೆ ಕಾಲಿಲ್ಲದ ವದಂತಿಗಳನ್ನು ಜನ ಗಾಳಿಯಲ್ಲಿ ತೂರಿ ಬಿಟ್ಟು ಅವನ್ನು ಗಾಳಿ ಸುದ್ದಿಯನ್ನಾಗಿಸುತ್ತಾರೆ. ಆರಕ್ಷಕರು ಗಲಭೆಯನ್ನು ನಿಯಂತ್ರಿಸಲು ಗಾಳಿಯಲ್ಲಿ ಗುಂಡು ಹಾರಿಸಿ ಪ್ರಾಣಾಪಾಯವನ್ನು ತಪ್ಪಿಸಲು ಹವಣಿಸುತ್ತಾರೆ. ಮನಸ್ಸಿನಲ್ಲಿ ಮಂಡಿಗೆ ಮಾಡುವ ಕನಸುಗಳಿಗೂ ಗಾಳಿಗೋಪುರ ನಿಲ್ಲಿಸಲು ವಾಯುವು ಇಂಬು ಮಾಡಿಕೊಡುತ್ತದಲ್ಲವೆ?

● ಶ್ರೀನಿವಾಸ ತೋಪಖಾನೆ

# ಸ್ಮೃತಿಗಳು

## ಅವುಗಳೊಂದಿಗೆ ಆಡುವುದು ಎಂಥ ಅನುಭೂತಿ !

– ಡಾ. ಎಂ.ಬಿ. ಬಂಕಾಪುರ

ಜೀವನದ ಆರನೆಯ ದಶಕದ ಆದಿಯಲ್ಲಿ ದ್ದೇನೆ. ಶಿಕ್ಷಣವಾಯಿತು, ಉದ್ಯೋಗವಾಯಿತು, ಂಡತಿ ಬಂದಳು, ಮಕ್ಕಳಾದವು, ಮನೆಯಾ ಯಿತು, ಮಠದ ನೆನಪಾಗುತ್ತಿದೆ. ಒಂಟಿ ಜೀವನದ ನುಭವವಾಗುತ್ತಿದೆ. 'ನಾವು ಸೋತಿದ್ದೇವೆ, ನು ಮಾತ್ರ ಅದರ ಸುಳಿವಿಲ್ಲದೆ ಹಗ್ಗವಿಲ್ಲದ ಜೋರಿಯಂತೆ ಸ್ಪಂದಿಸುತ್ತಿರುವೆ. ನೆನಪಿನ ಸುರು ಗಳು ನಿನ್ನನ್ನು ಎಚ್ಚರಿಸುತ್ತಿದ್ದರೂ ನಿನ್ನ ಗಮನವು ತ್ಯದ ಕಡೆ ವಾಲುತ್ತಿಲ್ಲ ಎಂದು,' ದೇಹದ ಅಂಗ ಗಳು ತಮ್ಮ ತಮ್ಮ ಪರಿಚಯ ಮಾಡಿಕೊಡುತ್ತಿವೆ. ಹಾಗೆಂದು ನನಗೂ ಅನ್ನಿಸುತ್ತಿದೆ. ಆದರೂ ಸ್ಥಿತ ಪ್ರಜ್ಞತೆ. ಯಾಕಪ್ಪಾ ಈ ನೆನಪುಗಳು ಸುತ್ತಿ ಸುತ್ತಿ ನನ್ನನ್ನು ಹಿಂಸೆಗೊಳಿಸುತ್ತಿವೆ ಎಂಬ ಭಾವ ನನ್ನನ್ನು ಡುತ್ತಿದೆ. ಈ ಜೀವನದ ಸಿಂಹಾವಲೋಕನ ಂದು ಶಾಪವೇನೋ ಎಂದೂ ಅನಿಸುತ್ತಿದೆ. ನು ಮಾಡುವುದು? ನೆನಪು ಮಾಡಿಕೊಳ್ಳುವು ದನ್ನೇ ಬಿಡಬಯಸುತ್ತೇನೆ. ಆದರೆ ಅದು ಕೂಡ ನನ್ನ ಕೈಯಲ್ಲಿಲ್ಲ. ಎಂಥ ಕಟು ಅನುಭವ! ಪರ್ಯಾಯವಾಗಿ ವಿಚಾರಿಸಿದಾಗ, ಇದು ನನ್ನ ದೊಂದೇ ಸಮಸ್ಯೆಯಲ್ಲ, ಎಲ್ಲರ ಜೀವನದಲ್ಲಿಯೂ ಇದು ಹಾಸುಹೊಕ್ಕಾಗಿದೆ. ಆದರೆ ಒಬ್ಬರ ನೆನಪು, ಅನುಭವ ಒಂದೇ ತರಹದ್ದಿರಲಾರದು. ಮತ್ತೆ ಸ್ವಂತದ ನೆನಪಿನ ತಾಕಲಾಟ. 'ಮಿದುಳು' ಎನ್ನುವುದೊಂದು ವಿಚಿತ್ರ ಅಂಗ. ವಯಸ್ಸಾದಂತೆ ದೇಹ ಶಿಥಿಲವಾದರೂ ಮಿದುಳು ಮಾತ್ರ ಇನ್ನೂ ಚುರುಕಾಗಿದೆ. ಇದು ಬುದ್ಧಿಜೀವಿಗಳಿಗೆ ವರವೋ ಅಥವಾ ಶಾಪವೋ ತಿಳಿಯದು.

ನೆನಪಿನ ಸುಳಿಯಲ್ಲಿ ಒತ್ತುತ್ತಿರುವ ಯಕ್ಷ ಪ್ರಶ್ನೆ: "ನೀನು ಏನು ಮಾಡಿದೆ ಈ ಆರು ದಶಕಗಳಲ್ಲಿ?" ಇದಕ್ಕೆ ಉತ್ತರ ಬಯಸುವುದು ಅಥವಾ ನೇರವಾಗಿ ಹೇಳುವುದಕ್ಕೆ ತರ್ಕಬದ್ಧವಾದ ಅಳತೆಗೋಲಿಲ್ಲ. ಇಷ್ಟು ಮಾತ್ರ ಹೇಳಬಹುದು: ಜೀವನದ ಆರು ದಶಕಗಳಲ್ಲಿ ಮೂರು ಅರ್ಧ ದಶಕಗಳು ನಿದ್ರಾ ವಸ್ಥೆಯಲ್ಲಿ ಕಳೆದಿವೆ. ಇನ್ನುಳಿದ ಅರ್ಧ ಭಾಗದಲ್ಲಿ ಒಂದು ಕಾಲಾಂಶ ಬಾಲ್ಯದಲ್ಲಿ, ಇನ್ನುಳಿದ ಕಾಲಾಂಶ ತರುಣಾವಸ್ಥೆಯಲ್ಲಿ, ಇನ್ನು ಉಳಿದುಳಿದ ಅರ್ಧಾಂಶ ಜೀವನ ಸಂಜೆಗಪ್ಪಿನಲ್ಲಿ ಲೀನವಾಗುತ್ತಿದೆ.

ಈಗ ಯಾವುದು ಒಪ್ಪಾಯಿತು, ಯಾವುದು ತಪ್ಪಾಯಿತು ಎಂದು ಮಾತ್ರ ನೆನಪಿಸಿಕೊಳ್ಳಬ ಹುದು. ಅದನ್ನು ಸರಿಮಾತ್ರ ಮಾಡಿಕೊಳ್ಳಲಾರೆ. ಈ ನೆನಪಿನ ಸುಳಿಯಲ್ಲಿ ಆಗಿ ಹೋದ ಘಟನೆಗಳಿಗೆ ಪಶ್ಚಾತ್ತಾಪಪಡುತ್ತೇನೆ. ಸಂದು ಹೋದ ಘಟನೆಗಳಿಗೆ ಪರಿತಪಿಸುತ್ತಿದ್ದೇನೆ. ದಿನಗಳೆ ದಂತೆ, ಇನ್ನುಳಿದ ದಿನಗಳಲ್ಲಿ ಈ ಸ್ಮೃತಿಗಳ ಮೈತ್ರಿ ಯನ್ನು ಬಿಟ್ಟರೆ ಮತ್ತಾರೂ ನನ್ನ ಸಂಗಾತಿಗಳಿಲ್ಲ; ಎಲ್ಲರೂ ನನ್ನಿಂದ ದೂರವಾಗಿದ್ದಾರೆ; ಒಂಟಿಯಾಗಿ ಬಂದಿದ್ದೇನೆ ಒಂಟಿಯಾಗಿ; ಹೋಗುವುದಿದೆ ಎಂಬ ಕಟು ಸತ್ಯ ನನ್ನೆದುರು ಬೆಳೆದುನಿಂತಿದೆ. ಗತ

ಜೀವನದ ಗಳಿಗೆಗಳನ್ನು ಎಳೆ ಎಳೆಯಾಗಿ ಜಗ್ಗಿ ನೋಡಿದಾಗ ಎಸ್.ಎಲ್. ಭೈರಪ್ಪನವರ ಮಾತು ನೆನಪಾಗುತ್ತದೆ: "ನಾನು ಯಾವುದರಲ್ಲೂ ಸೋತಿಲ್ಲ; ಆದರೆ ಯಾವುದೂ ಹಿತವಾಗಿಲ್ಲ." ಇದು ಒಂದು ವಿಪರ್ಯಾಸ.

ಬಾಲ್ಯದಲ್ಲಿ ಪುರಾಣ, ಪ್ರವಚನಗಳಲ್ಲಿ ಕತೆಯಾಗಿ ಕೇಳಿದ ಅರಿಷಡ್ವರ್ಗಗಳಾದ ಕಾಮ, ಕ್ರೋಧ, ಮದ, ಮತ್ಸರ, ಲೋಭ ಮತ್ತು ಮೋಹಗಳ ವಿರಾಟ್‌ರೂಪ, ನಂತರದ ಜೀವನದಲ್ಲಿ ಅನುಭವಿಸಿದ ದಾರುಣ ಯಾತನೆಯನ್ನು ಮರುಕಳಿಸುತ್ತಿದೆ. ಈ ಯಾತನೆಗಳು ಸಂದರ್ಭಕ್ಕೆ ತಕ್ಕಂತೆ ಈ ದೇಹಕ್ಷೇತ್ರದಲ್ಲಿ ಪ್ರವೇಶಿಸಿ ರಣಕ್ಷೇತ್ರಗಳನ್ನಾಗಿ ಮಾಡಿದ ಪ್ರಸಂಗಳಿಗೆ ಕೊರತೆಯಿಲ್ಲ. ಹುಟ್ಟಿನಿಂದ ಬಂದ ಸಂಬಂಧಗಳಾದ ತಂದೆ, ತಾಯಿ, ತಂಗಿ, ಬಂಧು ಬಳಗಗಳ ಪ್ರೀತಿ, ವಿಶ್ವಾಸ, ಅಂತಃಕರಣ, ಅನುಕಂಪ, ಮಾತ್ಸರ್ಯ, ದ್ರೋಹ, ವಂಚನೆ, ಎಲ್ಲವೂ ಒಂದು ವಿಡಂಬನೆಯಾಗಿ ತೋರುತ್ತಿದೆ. "ಜೀವನ ಒಂದು ನಾಟಕ. ಅದರಲ್ಲಿ ಪ್ರತಿಯೊಂದು ವ್ಯಕ್ತಿಗೂ ಒಂದು ಲಘುಪಾತ್ರ" ಎಂಬ ಸಾಹಿತ್ಯಕಾರರ ವಿಶ್ಲೇಷಣೆ ಸಮರ್ಪಕವಾಗಿದೆ. "ಉದರ ನಿಮಿತ್ತಂ ಬಹುಕೃತ ವೇಷಂ" ಎಂಬ ನಾಣ್ನುಡಿಯಂತೆ, ಹೊಟ್ಟೆ ತುಂಬಿಸಿಕೊಳ್ಳಲು ಕೈಗೊಂಡ ಉದ್ಯೋಗದಲ್ಲಿ ತತ್ವನಿಷ್ಠೆಯ ಪರಾಃಷ್ಠತೆಯನ್ನು ಅಧಿಕಾರಿಗಳ ದೌರ್ಜನ್ಯಕ್ಕೆ , ಹಿಂಸೆ ಆತ್ಮವಂಚನೆಗೆ ಹಾಗೂ ದ್ರೋಹಚಿಂತನೆಗಳಿಗೆ ನ ಅಂತರಂಗದ ಶುದ್ಧಿಯನ್ನೇ ಕಳೆದುಕೊಂಡ ಸಂ ರ್ಭಗಳ ನೆನಪಿನ ಯಾತನೆ ನನ್ನನ್ನು ಈಗ ಚಿ ಹಿಂಸೆಗೊಳಿಸುತ್ತಿದೆ.

ಸದ್ಯದ ಸಮಾಜ ರಚನೆಯಲ್ಲಿ ಈ ಸ್ಥಿತ್ಯಂತಗಳು ಅನಿವಾರ್ಯವೆಂದೂ ತೋರುತ್ತದೆ. "ತಾ ದ್ದರೆ ಜಗತ್ತು" ಎಂಬ ಅಹಂಕಾರ, ಅಹಂಭಾ ಹಾಗೂ ಮನೋದೌರ್ಬಲ್ಯಗಳ ತಾಕಲಾಟದ ಆಗಬಾರದ್ದು ಆಗಿಹೋಗಿದೆ. ತಪ್ಪು ಮಾಡುವುದ ಮನುಷ್ಯನ ಸ್ವಾಭಾವಿಕ ಗುಣ, ಆದರೆ ಅದ ಒಪ್ಪಿಕೊಂಡು ಆತ್ಮವನ್ನು ಶುದ್ಧಗೊಳಿಸುವುದ ಒಂದು ವಿಧಾನವೆಂದು ಎಷ್ಟೋ ಧರ್ಮಗ ಮಾರ್ಗದರ್ಶನವಿದೆ. ಇದು ನೀರಿನಲ್ಲಿ ಮುಳು ವವನಿಗೆ ಒಂದು ಆಧಾರವಿದ್ದಂತೆ. ನನ್ನ ಒ ಮಿತ್ರ ಒಮ್ಮೆ "ಜೀವನ ಎಂದರೆ ಏನು?" ಎಂ ಕೇಳಿದ ಪ್ರಶ್ನೆಗೆ ಉತ್ತರವಿಲ್ಲದಾಗಿದೆ. ಇದು ವಿಚಿ ಆದರೂ ಸತ್ಯ. ಲೌಕಿಕ ಪ್ರಶ್ನೆಗೆ ನೇರ ಉತ್ತ ಬಹುಕಷ್ಟ. ಅದನ್ನು ಅನುಭವದಿಂದ ಪಡೆಯ ಹುದೆಂಬ ಹಿರಿಯರ ಮಾತನ್ನು ಮೆಲುಕಾಡಿಸು ದ್ದೇನೆ.

## ಬಾಡದ ಹೂವು - ಒಣಗದ ಹಣ್ಣು!

**ಬ**ಹಳ ದಿನಗಳವರೆಗೂ ಒಣಗದೆಯೆ ತಾಜಾತನ ಉಳಿಸಿಕೊಳ್ಳುವ ಹಣ್ಣು.. ವಾರಗಟ್ಟಲೆ ಬಾಡದೆಯೇ ಸುಗಂಧ ಬೀರುವ ಹೂವು.. ಛೆ, ಇರಲು ಸಾಧ್ಯವೇ ಇಲ್ಲ ಎಂದು ನೀವನ್ನುವುದಾದರೆ ಅದು ತಪ್ಪು. ಜೀವಶಾಸ್ತ್ರೀಯವಾಗಿ ಅಘಟಿತ ಎನ್ನಬಹುದಾದದ್ದೀಗ ಪ್ರತ್ಯಕ್ಷವಾಗಿ ಘಟಿಸುತ್ತಲಿದೆ. ಗಿಡದಿಂದ ಬೇರ್ಪಡಿಸಿದ ಹಾಡುಗಾಯಿ ಕಳಿತರೂ ಕೊಳೆಯದೇ ಉಳಿಯುತ್ತದೆ. ಎಲೆ ಹಳದಿಗೆ ತಿರುಗದೆ ಹಸಿರನ್ನುಳಿಸಿಕೊಳ್ಳುತ್ತದೆ ಮತ್ತು ಹೂವು ಬಾಡದೇ ಈಗಷ್ಟೇ ಅರಳಿದ್ದೇನೋ ಎಂಬಂತೆ ನಳನಳಿಸುತ್ತದೆ. ಅಂದರೆ ಇವೆಲ್ಲದರ ಕಾಲಾವಧಿಯೀಗ ಮನುಷ್ಯನ ಇಚ್ಛೆಯನ್ನೇ ಅವಲಂಬಿಸಿದೆ. ಇದಕ್ಕೊಂದು ವಿಶಿಷ್ಟ ಗುಣಸೂತ್ರವನ್ನು ಕಂಡುಕೊಂಡಿದ್ದೇವೆಂದು ಬೀಗುತ್ತಿದ್ದಾರೆ ಅಮೆರಿಕದ ಸಸ್ಯ ವಿಜ್ಞಾನಿಗಳು. ಮೆಡಿಸನ್ ವಿಶ್ವವಿದ್ಯಾಲಯದಲ್ಲೀಗ ಈ ಕುರಿತ ಸಂಶೋಧನೆಗಳು ಕೊನೆಯ ಹಂತದಲ್ಲಿವೆ.

# ತುಳುನಾಡಿನ ರಣಚಂಡಿ



ಬಿಬಿಎಚ್ ಪ್ರಕಾಶನ ಪ್ರಕಟಿಸಿದ 'ಅಬ್ಬಕ್ಕ' ಪುಸ್ತಕದ ಮುಖಪುಟ

# ಅಬ್ಬಕ್ಕ

- ಆರ್.ಜಿ. ಶಾನಭಾಗ

ಕನ್ನಡ ನಾಡಿನ ಇತಿಹಾಸದ ಅಧ್ಯಾಯಗಳು ಯೋಧರುಗಳ ಚರಿತ್ರೆಗಳಿಂದಲೇ ತುಂಬಿವೆ. ಕಲಿತನದಿಂದ ಕಾದಾಡಿ ವೀರ ಸ್ವರ್ಗವನ್ನೇರಿದ ವೀರಾಂಗನೆಯರ ಅಧ್ಯಾಯಗಳು ಇದರಲ್ಲಿ ಬೆರಳೆಣಿಕೆಯಷ್ಟು. ಕಿತ್ತೂರ ಚೆನ್ನಮ್ಮ, ಒನಕೆ ಓಬವ್ವ, ಬೆಳವಡಿ ಮಲ್ಲಮ್ಮ, ಗೇರುಸೊಪ್ಪೆಯ ಕರಿಮೆಣಸಿನ ರಾಣಿಯರು ನಾಡ ಇತಿಹಾಸದಲ್ಲಿ ಬೆಳಗುವ ವೀರಾಗ್ರೇಸಣಿಯರಾದರೆ ಉಳ್ಳಾಲದ ವೀರಾಂಗನೆ ಅಬ್ಬಕ್ಕ ಇತಿಹಾಸದ ಈ ಪುಟಗಳಲ್ಲಿ ಸೇರ್ಪಡೆಯಾಗದಿರುವದು ವಿಷಾದನೀಯ.

ಗತಕಾಲದ ಇತಿಹಾಸದ ಮೇಲೆ ಬೆಳಕನ್ನು ಚೆಲ್ಲಿ ಅಬ್ಬಕ್ಕನನ್ನು ನಾಡ ಇತಿಹಾಸದಲ್ಲಿ ಮೊದಲ ಬಾರಿ ಸೇರ್ಪಡೆ ಮಾಡಿರುವ ಶ್ರೇಯಸ್ಸು ಕರ್ನಾಟಕ ಗೆಝೆಟಿಯರಿನ ಪ್ರಧಾನ ಸಂಪಾದಕರಾದ ಸೂರ್ಯನಾಥ ಕಾಮತರಿಗೆ ಸಲ್ಲುತ್ತದೆ.

ಇಟಲಿಯ ಪ್ರವಾಸಿ ಪಿತ್ರೊ ಡಲ್ಲೆ ವಲ್ಲೆಯ ಪ್ರವಾಸಿ ಕಥನ, ಪೋರ್ಚುಗೀಸರ ಕಡತಗಳು, ಸೂರ್ಯನಾಥ ಕಾಮತರು ಬರೆದಿರುವ ಐ.ಬಿ.ಎಚ್. ಪ್ರಕಾಶನ ಸಂಸ್ಥೆಯ 'ಅಬ್ಬಕ್ಕ' ಎಂಬ ಕಿರು ಪುಸ್ತಕ ಹಾಗೂ ಬಂಗರಾಜ ವಂಶದ ಶಾಸನಗಳು ವೀರಾಂಗನೆಯಾದ ಅಬ್ಬಕ್ಕನ ಕುರಿತಾದ ವೀರಗಾಥೆಯನ್ನು ಹೇಳುತ್ತವೆ.

## ಪ್ರವಾಸಿ ಕಂಡ ವೀರಾಂಗನೆ:

ಇಟಲಿಯ ಪ್ರವಾಸಿ ಪಿತ್ರೋ ಪೋರ್ಚುಗೀಸರನ್ನು ಸೋಲಿಸಿರುವ ಉಳ್ಳಾಲದ ರಾಣಿ ಅಬ್ಬಕ್ಕನನ್ನು ಕಾಣುವ ಕೌತುಕವನ್ನು ಹೊಂದಿದ್ದನು. ಎಂತಲೆ ವಿಶ್ವ ಪರ್ಯಟನದ ಮೇಲೆ ಆತ ಭಾರತದೆಡೆಗೆ ತಿರುಗಿದನು. ೧೬೨೩ನೇ ಇಸ್ವಿಯಲ್ಲಿ ಪರ್ಶಿಯದಿಂದ ನೇರವಾಗಿ ಹಡಗಿನ ಮುಖಾಂತರ ಮಂಗಳೂರಿಗೆ ಬಂದಿಳಿದನು. ಮಂಗಳೂರಿನ ಅಳಿವೆಯ ಆಚೆಗಿರುವ ಊರು ಉಳ್ಳಾಲ ಆಗಿತ್ತು. ಅಂದು ಇದೊಂದು ಸಂಪದ್ಭರಿತ ಬಂದರವೂ ಆಗಿತ್ತು. ಪೋರ್ಚುಗೀಸರ ಪ್ರಭಾವ ವಲಯವಾದ ಉಳ್ಳಾಲವನ್ನು ಬಂಗರಾಜನೆಂಬ ದೊರೆಯು ಆಳುತ್ತಿದ್ದನು. ಈತ ಉಳ್ಳಾಲದ ರಾಣಿಯ ಪತಿ. ಸತಿ-ಪತಿಯರಲ್ಲಿ ತಲೆದೋರಿದ್ದ ಭಿನ್ನಾಭಿಪ್ರಾಯಗಳ ದುರ್ಲಾಭವನ್ನು ಪಡೆದುಕೊಂಡು ಪೋರ್ಚುಗೀಸರು ಉಳ್ಳಾಲದಲ್ಲಿ ತಮ್ಮ ಸಾಮ್ರಾಜ್ಯದ ಬೇರನ್ನು ಬಿಟ್ಟಿದ್ದರು.

ಬಂಗರಾಜ ಪೋರ್ಚುಗೀಸರ ಸಹಾಯ ಪಡೆದಿದ್ದ ಉಳ್ಳಾಲದ ರಾಣಿ ಅಬ್ಬಕ್ಕ ಕೆಳದಿಯ ದೊರೆ ವೆಂಕಟಪ್ಪನ ನೆರವನ್ನು ಪಡೆದು ಪೋರ್ಚುಗೀಸರ ವಿರುದ್ಧ ರಣ ಕಹಳೆಯನ್ನು ಮೊಳಗಿಸಿದಳು. ೧೬೧೮ರಲ್ಲಿ ನಡೆದ ಈ ಯುದ್ಧದಲ್ಲಿ ಅಬ್ಬಕ್ಕನ ಕೊರಳಿಗೆ ಜಯಮಾಲೆ ಬಿದ್ದಿತು.

## ಸ್ವಾತಂತ್ರ್ಯದ ಬೀಜ:

ಈ ಧೀರರಾಣಿ ಅಬ್ಬಕ್ಕಳು ಚೌಟ ಮನೆತಕ್ಕೆ ಸೇರಿದವಳು. ಅಳಿಯ ಸಂತಾನದ ಕಟ್ಟಿಗೆ ಸೇರಿದವಳೂ ಆಗಿದ್ದಳು. ಇವಳ ತಾಯಿಯಾದ ಹಿರಿಯ ಅಬ್ಬಕ್ಕನಿಗೆ ಹಲವಾರು ಕಿರುಕಳಗಳನ್ನು ನೀಡಿ ಪೋರ್ಚುಗೀಸರ ಅವಳಿಂದ ಕಪ್ಪ ಕಾಣಿಕೆಗಳನ್ನು ಸ್ವೀಕರಿಸುತ್ತಿದ್ದರು. ಹಿರಿಯಬ್ಬಕ್ಕಳು ತನ್ನ ರಾಜ್ಯದಲ್ಲಿ ಬೆಳೆದಿರುವ ಬೆಳೆಗಳನ್ನು ಪೋರ್ಚುಗೀಸರಿಗೇ ಮಾರಬೇಕಾಗಿತ್ತು. ಪೋರ್ಚುಗೀಸರ ಈ ಕರಾರು ಒಂದು ರೀತಿಯ ಬಲಾತ್ಕಾರವೇ ಆಗಿರುವದರಿಂದ ಅನ್ಯ ಕಡೆಗಳಲ್ಲಿ ಬೆಳೆಗಳಿಗೆ ಹೆಚ್ಚಿಗೆ ಬೆಲೆ ಬರುವುದಿದ್ದರೂ ರಾಣಿಗೆ ಮಾರಲಾಗುತ್ತಿದ್ದಿಲ್ಲ. ಪೋರ್ಚುಗೀಸರು ವಿಜಯನಗರ ದೊರೆಗಳ ಬೆಂಬಲವನ್ನೂ ಪಡೆದಿದ್ದರು. ಯುದ್ಧಗಳಿಗೆ ಬೇಕಾಗುವ ಕುದುರೆಗಳನ್ನು ಪೋರ್ಚುಗೀಸರು ವಿಜಯನಗರದ ಅರಸರಿಗೆ ತಂದು ಕೊಡುತ್ತಿದ್ದರು. ಇದರಿಂದಲೇ

ವಿಜಯನಗರದ ದೊರೆಗಳು ಪೋರ್ಚುಗೀಸರ ಹಂಗಿನಲ್ಲಿ ಉಳಿದು ಅವರಿಗೆ ನೆರವನ್ನು ನೀಡುತ್ತಿದ್ದರು. ಸ್ವಾತಂತ್ರ್ಯ ಪ್ರೇಮಿಯಾದ ತಾಯಿ ಹಿರಿಯಬ್ಬಕ್ಕಳು ಪರಕೀಯ ದಾಸ್ಯ ಶೃಂಖಲೆಯಿಂದ ರಾಜ್ಯದ ವಿಮೋಚನೆಯ ಕುರಿತೇ ಸದಾ ಯೋಚಿಸುತ್ತಿದ್ದಳು. ತಾಯಿಯಾದ ಅಬ್ಬಕ್ಕ ಸ್ಥಳೀಯ ಸೈನಿಕರಾದ ಮೊಗೇರರು ಹಾಗೂ ಮಾಪಿಳ್ಳೆಯರ ನೆರವಿನಿಂದ ಸಮರ ತಂತ್ರವನ್ನು ಹೂಡುತ್ತಲೇ ಇರುತ್ತಿದ್ದಳು. ಗೋವೆಯ ಪೋರ್ಚುಗೀಸ್ ವೈಸರಾಯ ನರೊನ್ನ ರಾಣಿಯ ವಿರುದ್ಧ ಕತ್ತಿ ಮಸೆಯುತ್ತಿದ್ದನು. ಅದೇ ಹೊತ್ತಿಗೆ ಕಲ್ಲಿಕೋಟೆಯ ದೊರೆ ಜಾಮೋರಿನ ಹಿರಿಯಬ್ಬಕ್ಕನಿಗೆ ಸ್ನೇಹ ಹಸ್ತವನ್ನು ಚಾಚಿದ್ದನು.

ನರೊನ್ನ ೧೫೬೭ರಲ್ಲಿ ಸುಸಜ್ಜಿತ ನೌಕಾಪಡೆಯೊಂದಿಗೆ, ಉಳ್ಳಾಲದ ಮೇಲೆ ಏರಿ ಬಂದನು. ರಾಣಿ ರಣಚಂಡಿಯಂತೆ ಹೋರಾಡಿದಳು. ಹಿರಿಯ ಅಬ್ಬಕ್ಕ ವಿಜಯ ಪತಾಕೆಯನ್ನು ಹಾರಿಸಿದಳು. ಪ್ರತೀಕಾರವನ್ನು ತೀರಿಸಿಕೊಳ್ಳಲು ಮರುದಿನ ಪೋರ್ಚುಗೀಸರು ಉಳ್ಳಾಲವನ್ನು ಕೊಳ್ಳೆ ಹೊಡೆದು ಬೆಂಕಿ ಹಚ್ಚಿ ನಾಶಪಡಿಸಿದರು. ರಾಣಿ ಸ್ವಪ್ರಜೆಗಳನ್ನು ಒಡಗೂಡಿ, ಗುಡ್ಡ ಬೆಟ್ಟಗಳಲ್ಲಿ ತಲೆ ಮರೆಸಿಕೊಂಡಳು. ಈ ಯುದ್ಧದ ಫಲಿತಾಂಶವಾಗಿ ೧೫೬೭ರಲ್ಲಿ ಪೋರ್ಚುಗೀಸರು ಉಳ್ಳಾಲದಲ್ಲಿ ಸ್ಥಿರವಾಗಿ ನೆಲೆಯೂರಿದರು. ದೀರ್ಘಕಾಲದಿಂದ ತಲೆ ಮರೆಸಿಕೊಂಡಿರುವ ರಾಣಿಗೆ ಹೊರ ಬಂದು ಪೋರ್ಚುಗೀಸರ ಜೊತೆಗೆ ಒಪ್ಪಂದ ಮಾಡಿಕೊಂಡ ಹೊರತು ಅನ್ಯ ಮಾರ್ಗವೇ ಇರಲಿಲ್ಲ. ಪ್ರಜೆಗಳಲ್ಲಿರುವ ಬೆಳೆಗಳು ಮಾರಾಟವಾಗದೇ ಉಳಿದಿರುವದು ಇವಳ ಒಪ್ಪಂದಕ್ಕೆ ಮೂಲ ಕಾರಣ. ತಾಯಿ ಹಿರಿಯಬ್ಬಕ್ಕಳು ಮರಣಹೊಂದಿದ ನಂತರ ಮಗಳಾದ ಕಿರಿಯಬ್ಬಕ್ಕಳು ಉತ್ತರಾಧಿಕಾರಿಯಾದಳು. ತಾಯಿಯು ಮಗಳಾದ ಅಬ್ಬಕ್ಕಳ ಮನದಲ್ಲಿ ಸ್ವಾತಂತ್ರ್ಯದ ಬೀಜವನ್ನು ಬಿತ್ತಿದಳು.

## ವ್ಯವಹಾರ ಚತುರೆ

ಸಿಂಹಾಸನಾರೂಢಳಾದ ಅಬ್ಬಕ್ಕ ಪೋರ್ಚುಗೀಸರಿಗೆ ಕಪ್ಪ ಕಾಣಿಕೆ ನೀಡುವುದನ್ನು ನಿಲ್ಲಿಸಿದಳು. ಪೋರ್ಚುಗೀಸರು ಹಾಳುಗೆಡವಿ ನೆಲಸಮ ಮಾಡಿದ್ದ ಕೋಟೆಯನ್ನು ಪುನಃ ಕಟ್ಟಿಸಿದಳು. ರಾಜಕೀಯ, ವ್ಯವಹಾರ ಚತುರೆಯೂ ಬುದ್ಧಿವಂತೆಯೂ ಆಗಿದ್ದ ಅಬ್ಬಕ್ಕ ಪೋರ್ಚುಗೀಸರ ಹದ್ದುಮೀರಿದ ವರ್ತನೆಯನ್ನು ಕೊನೆಗೊಳಿಸಲು ಹೊಂಚನ್ನು ಹಾಕುತ್ತಿದ್ದಳು. ಪೋರ್ಚುಗೀಸರ ಕರಾರಿಗೆ ತಲೆಬಾಗಿ ಕಡಿಮೆ ಬೆಲೆಯಲ್ಲಿ ಬೆಳೆಗಳನ್ನು ಅವರಿಗೆ ಮಾರುವದು ಸರಿಯಲ್ಲ. ಪ್ರಜೆಗಳಿಗೆ ಅದರಿಂದ ಭಾರಿ ನಷ್ಟ, ಪರ್ಶಿಯ ಮತ್ತು ಅರೇಬಿಯಗಳಲ್ಲಿ ಇವುಗಳಿಗೆ ಲಾಭದಾಯಕ ಬೆಲೆಯು ದೊರೆಯುವುದು ಎಂದು ಮನಗಂಡು ರಾಣಿ ಆ ದೇಶಗಳೊಡನೆ ವ್ಯಾಪಾರ ವಾಣಿಜ್ಯಗಳನ್ನು ಆರಂಭಿಸಿದಳು. ಅದಕ್ಕಾಗಿ ಹಡಗುಗಳನ್ನು ನಿರ್ಮಿಸಿ, ಅಕ್ಕಿ, ಬಟ್ಟೆ ಸರಕುಗಳನ್ನು ನಿರ್ಯಾತ ಮಾಡಿದಳು. ನಿರ್ಯಾತ ವ್ಯಾಪಾರವನ್ನು ಪೋರ್ಚುಗೀಸರು ಪ್ರತಿಭಟಿಸಿದರೂ ರಾಣಿ ಧೃತಿಗೆಡಲಿಲ್ಲ.

ಕಿರಿಯ ಅಬ್ಬಕ್ಕಳಿಗೆ ಪೋರ್ಚುಗೀಸರನ್ನು ಹಿಮ್ಮೆಟ್ಟಿಸಲು ಕೆಳದಿಯ ರಾಜ ಅಭಯವನ್ನು ನೀಡಿದನು. ಇದರಿಂದ ಅಬ್ಬಕ್ಕಳು ದಂಡಿ ದುರ್ಗಿಯಾದಳು.

## ದಾಂಪತ್ಯ ವಿರಸ

ಅಬ್ಬಕ್ಕನಿಗೂ ಪತಿಯಾದ ವೀರನರಸಿಂಹನಿಗೂ ಮಗಳ ಮದುವೆಯ ವಿಷಯದ ಮೇಲೆ ಭಿನ್ನಾಭಿಪ್ರಾಯ ತಲೆದೋರಿ, ಅವರೀರ್ವರ ದಾಂಪತ್ಯ ಜೀವನದಲ್ಲಿ ವಿರಸವು ಉಂಟಾಯಿತು. ಮಗಳನ್ನು ಸೋದರಳಿಯನಿಗೆ ಕೊಟ್ಟು ವಿವಾಹ ಮಾಡಿಸಬೇಕೆನ್ನುವುದು ಬಂಗರಾಜನ ಇಚ್ಛೆಯಾಗಿತ್ತು. ಅವನು ವ್ಯಸನಿ ಹಾಗೂ ಸೋಮಾರಿಯಾಗಿದ್ದರಿಂದ ಅಬ್ಬಕ್ಕ ತನ್ನ ಮಗಳಿಗೆ ಅವನು ಸೂಕ್ತವರನಲ್ಲವೆಂದು ಹಠ ಹಿಡಿದಿದ್ದಳು.

ಬಂಗರಾಜನ ಕಡೆಯವರು ಹೇಗಾದರೂ ಮಾಡಿ ರಾಜಕುಮಾರಿಯ ಮದುವೆ ಮಾಡಿಸಬೇಕೆಂದು ಪ್ರಯತ್ನಪಟ್ಟರು. ಲೋಕೇಶ್ವರ ಜಾತ್ರೆಗೆ ಅಬ್ಬಕ್ಕಳ ಮಗಳು ಹೋಗಿರುವದನ್ನು ಕಂಡ ಅರಸ ಬೆಂಬಲಿಗರು ಅವಳನ್ನು ಅಪಹರಿಸಲು ಯತ್ನಿಸಿದರು. ಇದು ಉಭಯಬಣಗಳ ಘರ್ಷಣೆಗೆ ಕಾರಣವಾಗಿ ರಕ್ತಪಾತಕ್ಕೆ ಹಾದಿ ಮಾಡಿ ಕೊಟ್ಟಿತು. ಈ ಪ್ರಯತ್ನ ಯಶಸಾಧಿಸಲಿಲ್ಲ, ಗಂಡ ಹೆಂಡಿರ ವೈಮನಸ್ಸು ಹೆಚ್ಚಾಯಿತು. ನಂತರ ರಾಜಕುಮಾರಿಯ ಮದುವೆ ನೆರೆ ರಾಜ್ಯದ ದೊರೆಯಾದ ರಾಮನಾಥನೊಡನೆ ತಂದೆಯ ಅನುಪಸ್ಥಿತಿಯಲ್ಲಿಯೆ ನಡೆ

ಯಿತು. ಮುಂದೆ ಮಗಳಿಗೆ ಸಂತಾನವೂ ಪ್ರಾಪ್ತವಾಯಿತು. ಆದರೆ ಅಸ್ವಾಸ್ಥದಿಂದ ಮಗಳು ಕೊನೆಯುಸಿರೆಳೆದಾಗ ಅವಳ ಅಂತಿಮ ದರ್ಶನಕ್ಕೂ ತಂದೆ ಬರಲಿಲ್ಲ.

ಕ್ರೋಧಾಗ್ನಿಯಾಗಿ ಉರಿಯುತ್ತಿದ್ದ ಬಂಗರಾಜ ತನ್ನ ಸತಿಗೆ ಪಾಠ ಕಲಿಸಲು ಪೋರ್ಚುಗೀಸರ ನೆರವನ್ನು ಪಡೆದನು.

ಒಮ್ಮೆ ಅಬ್ಬಕ್ಕ ಪೊಳಲಿಯ ದುರ್ಗಾ ಜಾತ್ರೆಗೆ ತೆರಳಿದಾಗ ಬಂಗರಾಜನ ಬೆಂಬಲಿಗರು ಅವಳನ್ನು ಬಂಧಿಸಿದರು. ಅವಳನ್ನು ಕಟ್ಟಿ ಪಲ್ಲಕ್ಕಿಯಲ್ಲಿ ಕೂಡ್ರಿಸಿ ಬಂಗರಾಜನಿದ್ದೆಡೆಗೆ ತಂದರು. ತನ್ನನ್ನು ಅಗೌರವಿಸಿ, ಮಗಳ ಮದುವೆ ಮಾಡಿರುವುದರ ಕುರಿತಾಗಿ ರಾಣಿಯನ್ನು ರಾಜ ಹೀಯಾಳಿಸಿದ. "ಕನ್ಯಾದಾನಕ್ಕೆ ಬಂದು ಕರ್ತವ್ಯ ನಿರ್ವಹಿಸುವದು ತಂದೆಯಾದ ನಿಮ್ಮ ಆದ್ಯ ಕರ್ತವ್ಯವಾಗಿತ್ತು. ಇದನ್ನು ನೀವು ಉಲ್ಲಂಘಿಸಿರುವಿರಿ. ಮಗಳು ಸತ್ತರೆ ಅಂತಿಮ ದರ್ಶನವನ್ನೂ ಪಡೆಯಲಿಲ್ಲ. ಮೊಮ್ಮಗನ ಮುಖ ವನ್ನು ನೋಡಲೂ ಬರಲಿಲ್ಲ. ಪರಕೀಯರಾದ ಪೋರ್ಚುಗೀಸರ ಬೆಂಬಲವನ್ನು ಪಡೆದು ದೇಶ ದ್ರೋಹವನ್ನು ಬಗೆಯುತ್ತಿದ್ದೀರಿ. ದೇವಾಲಯವನ್ನು ಹಾಳುಗೆಡವಲು ಪರಂಗಿಯರಿಗೆ ಸ್ನೇಹಹಸ್ತವನ್ನು ಚಾಚಿರುವಿರಿ. ನಿಮಗೆ ನಾಚಿಕೆಯಾಗುವುದಿಲ್ಲವೇ?" ಎಂದು ಪತ್ನಿ ಪತಿಗೆ ಮಾರುತ್ತರ ನೀಡಿದಳು. ತನ್ನ ಹೇಯ ಕೆಲಸಕ್ಕೆ ಆತ ನಾಚಿ ತಲೆ ತಗ್ಗಿಸುವಂತಾ ಯಿತು.

ಅಬ್ಬಕ್ಕನ ನೈತಿಕ ಸ್ಥೈರ್ಯ ಹಾಗೂ ವಾದ ವೈಖರಿಗೆ ಬೆರಗಾದ ಬಂಗರಾಜ ಹೆಂಡತಿಯ ಬಿಡು ಗಡೆಗೆ ಆಜ್ಞಾಪಿಸಿದನು.

ವಿರಸಗೊಂಡ ಸತಿಪತಿಯರ ಜೀವನ ಸೂಸೂತ್ರವಾಗಿ ಸಾಗದೆ ಕೊನೆಗೆ ಬಂಗರಾಜ ಶಂಕರದೇವಿ ಎಂಬ ರಾಜಕುಮಾರಿಯೊಡನೆ ವಿವಾಹವಾದ. ಸವತಿ ಮತ್ಸರದ ದ್ವೇಷ ಯುದ್ಧಕ್ಕೆ ನಾಂದಿಯಾ ಯಿತು. ವಿರಸದಿಂದಾಗಿ ಸತಿ ಪತಿಯರಲ್ಲಿ ಯುದ್ಧ ಗಳಾದವು. ಇನ್ನೊಂದೆಡೆಗೆ ಅಬ್ಬಕ್ಕ ಪೋರ್ಚುಗೀಸರನ್ನು ಸೋಲಿಸಲು ಕೆಳದಿ ದೊರೆ ವೆಂಕಟಪ್ಪನಿಗೆ ಕಪ್ಪ ಕಾಣಿಕೆ ಸಲ್ಲಿಸಿ ಸ್ನೇಹ ಬೆಳೆಸಿ ದಳು. ಬಲಶಾಲಿ ವೆಂಕಟಪ್ಪನಾಯಕನಿಗೆ ಕಪ್ಪ ನೀಡುವ ಮನಸ್ಸು ಬಂಗರಾಜನಿಗೆ ಇರಲಿಲ್ಲ. ಅವನು ಪೋರ್ಚುಗೀಸರ ಸ್ನೇಹ ಬೆಳೆಸಿ ಅವರಿಗೆ ವ್ಯಾಪಾರಿ ಸೌಲಭ್ಯಗಳನ್ನು ಹೆಚ್ಚಿಸಿದ.

## ವಿದೇಶ ವ್ಯವಹಾರ

ಕಲ್ಲಿಕೋಟೆಯ ಜಾಮೋರಿನ ದೊರೆ ಪೋರ್ಚು ಗೀಸರ ಪರಮ ಶತ್ರುವಾಗಿದ್ದ. ಅಬ್ಬಕ್ಕ ಅವನ ಜೊತೆ ಸ್ನೇಹ ಬೆಳೆಸಿದಳು. ಜಾಮೋರಿನನ ಸಹಾಯದಿಂದ ಪೋರ್ಚುಗೀಸರನ್ನು ಧಿಕ್ಕರಿಸಿ ಅವಳು ಅರೇಬಿಯ ದೊಂದಿಗೆ ವ್ಯಾಪಾರವನ್ನು ಮಾಡಿದಳು. ಅವರ ಬೆದರಿಕೆಗೆ ಸೊಪ್ಪು ಹಾಕದೇ ೧೫ ವರ್ಷಗಳ ಕಾಲ ವ್ಯಾಪಾರ ನಡೆಸಿದಳು.

ಒಂದು ದಿನ ಅರೇಬಿಯದೆಡೆಗೆ ವ್ಯಾಪಾರಕ್ಕೆ ತೆರಳಿದ್ದ ಅಬ್ಬಕ್ಕನ ಹಡಗುಗಳನ್ನು ಪೋರ್ಚುಗೀ ಸರು ತಡೆಹಿಡಿದು ಕೊಳ್ಳೆ ಹೊಡೆದರು. ಅಬ್ಬಕ್ಕನ ಒಂದು ಹಡಗು ಪೋರ್ಚುಗೀಸರ ವಶವಾಯಿತು. ಉಳಿದ ಹಡುಗುಗಳು ಉಳ್ಳಾಲಕ್ಕೆ ತಲುಪಿದವು. ವಾರ್ತೆ ತಿಳಿದ ಅಬ್ಬಕ್ಕ ಕಿಡಿಯಾಗಿ ಹಾರಿದಳು. ಹಿಡಿದಿರುವ ಹಡಗನ್ನು ತಿರುಗಿ ಕಳಿಸಬೇಕೆಂದು ಪರಂಗಿಯವರಿಗೆ ಹೇಳಿ ಕಳಿಸಿದಳು. ಇದಕ್ಕೆ ಮಾರು ತ್ತರವಾಗಿ ತೋಪಿನಿಂದ ಗುಂಡುಗಳು ರಾಣಿಯ ಕೋಟೆಯತ್ತ ಹಾರಿ ಬಂದವು.

ಆ ಕಾಲಕ್ಕೆ ಅರೇಬಿಯದಿಂದ ಮರಳಿದ ಜಾಮೋರಿನನ ಹಡಗುಗಳು ಉಳ್ಳಾಲದಲ್ಲಿದ್ದವು. ಈ ಹಡಗುಗಳು ರಾಣಿಯನ್ನು ಬೆಂಬಲಿಸಿ ಸಮ ರಾಂಗಣವನ್ನು ಪ್ರವೇಶಿಸಿದವು. ದೊರೆ ಜಾಮೋರಿ ನನ ತಕ್ಷಣದ ಸಹಾಯದಿಂದ ಪೋರ್ಚುಗೀಸರ ಸದ್ದಡಗಿತು. ಅವರು ಶರಣಾಗತರಾಗಲೇ ಬೇಕಾ ಯಿತು. ಪೋರ್ಚುಗೀಸರ ಸೇನಾನಿ ರಿಬೆಕೋ ತಲೆಮರೆಸಿಕೊಂಡ. ಪರಾಜಯದ ವಾರ್ತೆ ತಿಳಿದೊ ಡನೆ ಗೋವೆಯಿಂದ ಪೋರ್ಚುಗೀಸರ ನೆರವಿಗಾಗಿ ಕುತಿನ್ಹೋ ಎಂಬ ಮಿಲಿಟರಿ ಅಧಿಕಾರಿಯ ನೇತೃ ತ್ವದಲ್ಲಿ ಸೇನಾ ತುಕಡಿಯೊಂದು ಉಳ್ಳಾಲಕ್ಕೆ ಧಾವಿ ಸಿತು. ಭಾರಿ ಕದನದಿಂದಾಗಿ ರಣರಂಗದಿಂದ ಅಬ್ಬಕ್ಕ ಹಿಮ್ಮೆಟ್ಟಬೇಕಾಯಿತು.

ಈ ಯುದ್ಧದಲ್ಲಿ ಅಬ್ಬಕ್ಕ ಪಲ್ಲಕ್ಕಿಯಲ್ಲಿ ಕುಳಿತು ಕೊಂಡು ಹುರುಪು ನೀಡಿ ಸೈನಿಕರಿಗೆ ಹೋರಾಟಕ್ಕೆ ಮಾರ್ಗದರ್ಶನ ನೀಡುತ್ತಿದ್ದಳು. ನಾಲ್ಕು ದಿನಗಳ ನಂತರ ಪುನಃ ಯುದ್ಧ ಆರಂಭವಾಯಿತು. ಪೋರ್ಚು ಗೀಸರ ಸಾವಿರಾರು ಸೈನಿಕರು ರಣರಂಗದಲ್ಲಿ ಮಡಿ

ದರು. ಉಳ್ಳಾಲವನ್ನು ವಶಪಡಿಸಿಕೊಳ್ಳಬೇಕೆಂಬ ಪರಂಗಿಯವರ ಆಶೆ ಮಣ್ಣುಗೂಡಿತು.

### ಪ್ರವಾಸ ಕಥನ

ಪೋರ್ಚುಗೀಸರಿಗೆ ಮಳೆಗಾಲ ಆರಂಭವಾಗಿದ್ದರಿಂದ ಉಳ್ಳಾಲದ ಮೇಲೆ ದಾಳಿಯನ್ನು ಮುಂದುವರಿಸಲಾಗಲಿಲ್ಲ. ಸಮುದ್ರದಲ್ಲಿ ಬಿರುಗಾಳಿ ಬೀಸುತ್ತಿತ್ತು. ತಾಯ್ನಾಡಾದ ಪೋರ್ಚುಗಲ್‌ನಿಂದ ನೌಕಾಪಡೆ ಬರಲು ಸಾಧ್ಯವಾಗಲಿಲ್ಲ. ಮಳೆಗಾಲವು ಕಳೆಯಿತು. ಗೋವೆಯಿಂದ ಡಿಮೆಲ್ಲೋ ಮತ್ತು ಮಿರಾಂಡ ಎಂಬ ಇಬ್ಬರು ಸೇನಾಧಿಪತಿಗಳು ಪಡೆಯೊಂದಿಗೆ ಬಂದರು.

ವೆಂಕಟಪ್ಪ ನಾಯಕ ಸೈನ್ಯದೊಂದಿಗೆ ಘಟ್ಟದಿಂದ ಇಳಿದು ಬಂದು ಬಂಗರಾಜಧಾನಿಯನ್ನು ಮುತ್ತಿ ಬಂಗನನ್ನು ಸೋಲಿಸಿ ಕಪ್ಪವನ್ನು ಪಡೆದನು. ಅಬ್ಬಕ್ಕ ಜಾಮೋರಿನ ದೊರೆಯ ಸಹಾಯ ಪಡೆದಳು. ಕನ್ನಡಿಗರಿಗೂ ಪೋರ್ಚುಗೀಸರಿಗೂ ಭಾರಿ ಕದನ ನಡೆಯಿತು. ಪೋರ್ಚುಗೀಸರು ಹತರಾದರು. ಡಿಮೆಲ್ಲೊ ಮತ್ತು ಮಿರಾಂಡ ಕದನದಲ್ಲಿ ಮಡಿದರು. ವೆಂಕಟಪ್ಪನೂ ಈ ಕದನದಲ್ಲಿ ನೆರವು ನೀಡಿರುವದರಿಂದ ಮಂಗಳೂರು ಕೋಟೆ ಕೆಳದಿಯ ವಶವಾಯಿತು. ವೀರಾಗ್ರಣಿ, ಸ್ವಾತಂತ್ರ್ಯ ಪ್ರೇಮಿಯ ಈ ವೀರಗಾಥೆ ಇಟಲಿ ಪ್ರವಾಸಿ ಪಿತ್ರೋ ಡಲ್ಲೆ ವಲ್ಲೆಯ ಪ್ರವಾಸ ಕಥನದಲ್ಲಿ ಬರುತ್ತದೆ.

ಪ್ರವಾಸಿ ಪಿತ್ರೋ ಡಲ್ಲೆ ಉಳ್ಳಾಲಕ್ಕೆ ಬಂದಾಗ ಮಣೇಲ ಎಂಬಲ್ಲಿ ಹೋಗಿದ್ದ. ಅದು ರಾಣಿಯ ಮತ್ತೊಂದು ರಾಜಧಾನಿ. ಪಿತ್ರೋ ಗಾಡಿಯನ್ನೇರಿ ಅವಳನ್ನು ಭೇಟಿಯಾಗಿ ಬಂದನು. ಅಣೆಕಟ್ಟಿನ ಕಾಮಗಾರಿಯ ಮೇಲ್ವಿಚಾರಣೆಗಾಗಿ ರಾಣಿಯು ಸ್ವತಃ ಮುತುವರ್ಜಿಯನ್ನು ವಹಿಸುತ್ತಿದ್ದಳೆಂದು ಪಿತ್ರೋ ಹೇಳುತ್ತಾನೆ. ರಾಜ್ಯದ ಸಮೃದ್ಧಿ ಕೃಷಿಯ ಮೇಲಿದೆ ಎಂದು ನೀರಾವರಿಗಾಗಿ ಅಣೆಕಟ್ಟನ್ನು ತನ್ನ ರಾಜ್ಯದಲ್ಲಿ ಕಟ್ಟಿಸಿದಳು. ರಾಣಿಯು ನಗರದ ಬೀದಿಯಿಂದ ಬರುತ್ತಿರುವಾಗ ಜನರು ಕೈಮುಗಿದುಕೊಂಡು ನಿಲ್ಲುತ್ತಿದ್ದರು. ಕಹಳೆಯನ್ನೂದಿ ರಾಣಿಯ ಆಗಮನವನ್ನು ಸೂಚಿಸಲಾಗುತ್ತಿತ್ತು. ಗರಿಯ ಕೊಡೆ ಹಿಡಿದ ಹೆಣ್ಣಾಳು, ಚಾಮರ ಬೀಸುವ ಹೆಂಗಸು, ಕತ್ತಿ ಹಿಡಿದ ಅಂಗರಕ್ಷಕರು ರಾಣಿಯ ಜೊತೆಗೂಡಿ ಬರುವ ಪರಿಪಾಠವಿತ್ತು.

ಬರಿಗಾಲಿನಿಂದ ಬರುವ ರಾಣಿ ವೇಷಭೂಷಣ ಹಾಗೂ ನಡೆಯಲ್ಲಿ ಸರಳತೆಯ ಆಗರವಾಗಿದ್ದಳು. ಮೈಮೇಲೆ ಮಿತ ಆಭರಣ ಧರಿಸುತ್ತಿದ್ದಳು. ಕರಿಯ ಕಂದು ವರ್ಣದ ಅವಳು ಮೇಲ್ನೋಟಕ್ಕೆ ಅರಸಿಯಂತೆಯೂ ಕಾಣದೆ ಯುರೋಪಿಯನ್ನರ ಅಡಿಗೆಯ ಹೆಂಗಸಿನಂತೆ ಇಲ್ಲವೆ ಅಗಸಗಿತ್ತಿಯಂತೆ ಕಾಣುತ್ತಿದ್ದಳೆಂದು ಪ್ರವಾಸಿ ಪಿತ್ರೋ ವರ್ಣಿಸಿದ್ದಾನೆ. ಅವಳ ಮೈಕಟ್ಟು ಆಕರ್ಷಣೀಯವೂ ಹಾಗೂ ಧ್ವನಿಯು ಗಂಭೀರವೂ ಆಗಿತ್ತೆಂದು ಆತ ಹೇಳಿದ್ದಾನೆ.

"ನನ್ನ ಊಟಕ್ಕೆ ಬೇಕಾಗಿರುವ ಅಕ್ಕಿ ಬೆಲ್ಲ, ಮೆಣಸು ಇತ್ಯಾದಿ ಜಿನುಸು ಪಡಿಗಳನ್ನು ರಾಣಿಯು ಕಳುಹಿಸಿಕೊಟ್ಟಿದ್ದಳು. ನೆರೆಮನೆಯವರು ನನಗೆ ಅಡಿಗೆ ಮಾಡಿಕೊಟ್ಟರು. ಮರುದಿನ ರಾಣಿ ನನ್ನನ್ನು ರಾಜಮರ್ಯಾದೆಯೊಂದಿಗೆ ಕರೆಸಿ ಔತಣವನ್ನು ನೀಡಿದಳು. ನಾನು ಹೊರಡುವಾಗ ಆಳಿನ ಕೈಯಲ್ಲಿ ಸಂಜೆಯ ಊಟಕ್ಕಾಗಿ ಬೇಕಾಗಿರುವ ಸಾಮಗ್ರಿಗಳನ್ನು ನೀಡಿ ಕಳುಹಿಸಿದಳು. ಎಂದು ಕೃತಜ್ಞತಾಪೂರ್ವಕವಾಗಿ ಪಿತ್ರೋ ಸ್ಮರಿಸಿಕೊಂಡಿದ್ದಾನೆ.

ಅಬ್ಬಕ್ಕನ ಕುರಿತಾಗಿ ಇನ್ನೂ ಅರಿಯದ ವಿಷಯ ಸಂಶೋಧನೆಯಾಗಿ ರಾಷ್ಟ್ರಾಭಿಮಾನದ ಜ್ಯೋತಿ ಬೆಳಗಿಸಬೇಕಾಗಿದೆ. ಇತಿಹಾಸಕಾರರು ಈ ನಿಟ್ಟಿನಲ್ಲಿ ಗಮನವನ್ನು ಹರಿಸಬೇಕು ಅಷ್ಟೆ. ★

### "ಹುಚ್ಚಾ..."

ಡಕಾಯಿತನೊಬ್ಬ ಪ್ರೊಫೆಸರತ್ತ ಬಂದೂಕಿನ ನಳಿಗೆ ಹಿಡಿದು ಹೇಳಿದ, "ಅಲುಗಾಡಬೇಡಿ, ಅಲುಗಾಡಿದರೆ ನೀವು ಸತ್ತಿರಂತೆಯೆ".
ಪ್ರೊಫೆಸರ್ ನಗುತ್ತಾ, "ಹುಚ್ಚಾ! ನಾನು ಅಲುಗಾಡಿದರೇನೇ ಜೀವಂತ ಇರುವೆನೆಂದು ತಿಳಿಯುವುದು" ಎಂದರು.

- ನಾ.ರಾ. ಗಡಗಿ

# ಮದನ ಕಾಮನ ಕಥೆಗಳು - ೧೧

ಗೌಪ್ಯದಲ್ಲಿನ ಸೊಬಗು ಇನ್ನಾವುದಕ್ಕೂ ಬಾರದು. ಅದರಲ್ಲೂ ರಹಸ್ಯ ಹಾಗೂ ಸಾಹಸಗಳ ಹಿನ್ನೆಲೆಯಿರುವಾಗಲಂತೂ ಅದಕ್ಕಿನ್ನೂ ಮೆರುಗು ಇರುತ್ತದೆ. ಅಂತೆಯೇ ಮುಂದಿನ ಐದು ದಿನ ಅದರಲ್ಲೂ ರಾತ್ರಿಗಳನ್ನೂ ಗಿಳಿಯ ರೂಪದ ರಾಜಕುಮಾರ ಮತ್ತು ರಾಜಕುಮಾರಿಯರು ಹೊರ ಜಗತ್ತನ್ನೆ ಮರೆತು ಸ್ವರ್ಗ ಸುಖದಲ್ಲಿ ವಿಹರಿಸುತ್ತ ಕಳೆದಿದ್ದರೆ ಆಶ್ಚರ್ಯವೇ ಇಲ್ಲ.

ಎಂಟನೆಯ ದಿನ ಬೆಳಗಾಗುವವರೆಗೆ ಅವರಿಬ್ಬರಿಗೂ ಅದರ ಪರಿವೆಯೇ ಇರಲಿಲ್ಲ. ಸೂರ್ಯೋದಯದ ಸುಮಾರಿಗೆ ಗಾರುಡಿಗನ ಡೋಲಿನ ಸಪ್ಪಳವೇ ಅವರನ್ನೆಚ್ಚರಿಸಿತು. ಮುಂದಾಗಲಿರುವುದರ ಬಗ್ಗೆ ರಾಜಕುಮಾರ ಒಂದು ಬಗೆಯ ನಿಶ್ಚಿಂತೆಯನ್ನೇ ತಳೆದಿದ್ದರೆ ರಾಜಕುಮಾರಿಯನ್ನು ಮಾತ್ರ ಬಾಯಿಂದಾಡಲು ಬಾರದಂತಹ ಭಯ ಆವರಿಸಿತ್ತು. ರಾಜಕುಮಾರ ತನ್ನ ಪ್ರೇಯಸಿ ಅಂದು ಮಾಡಬೇಕಾದುದೇನೆಂಬುದರ ಬಗ್ಗೆ ಮತ್ತೊಮ್ಮೆ ತಿಳಿ ಹೇಳಿ ಧೈರ್ಯವಿತ್ತು ಗಿಳಿಯ ರೂಪ ಧರಿಸಿ ಲಗುಬಗೆಯಿಂದ ಪಂಜರ ಸೇರಿದನು.

ಅರಮನೆಯ ಹೊರಗಡೆಯ ವಿಶಾಲ ಅಂಗಣದಲ್ಲಿ ತನ್ನ ಪರಿವಾರದೊಂದಿಗೆ ಬಂದಿದ್ದ ಗಾರುಡಿಗನು ತನ್ನ ಆಟ ಪ್ರಾರಂಭಿಸಿದ್ದನು. ಅರಸನೆದುರಿಗೆ ನಡೆದ ಗಾರುಡಿಯಾಟವನ್ನು ನೋಡಲು ನಗರದ ಸಾವಿರಾರು ಜನ ಅಲ್ಲಿ ನೆರೆದಿದ್ದರು. ಗಾರುಡಿಗನ ಒಂದೊಂದು ಆಟವನ್ನೂ ಜನರು ಮಂತ್ರಮುಗ್ಧರಂತೆ ನೋಡುತ್ತಿದ್ದರು. ಅವನ ಪ್ರದರ್ಶನದ ಕೊನೆ ಸಮೀಪಿಸಿದಾಗ ಜನರೆಲ್ಲ ಮುಕ್ತ ಕಂಠದಿಂದ ಅವನನ್ನು ಹೊಗಳಿದರು. ಅರಸನು ಸಮಾಧಾನದ ಮುಗುಳ್ನಗೆ ಬೀರಿದನು.

ಕೊನೆಯ ಪ್ರದರ್ಶನವೆಂದು ಹೇಳಿ ಗಾರುಡಿಗನು ಎಪ್ಪತ್ತಡಿ ಉದ್ದವಾದ ಕೋಲೊಂದನ್ನು ನೇರವಾಗಿ ನೆಲದ ಮೇಲೆ ನಿಲ್ಲಿಸಿ ಸರಸರನೆ ಅದನ್ನೇರಿ ಅದರ ತುದಿಯಲ್ಲಿ ಕುಳಿತುಕೊಂಡನು.

ಆಶ್ಚರ್ಯ-ಹರುಷಾತಿರೇಕದಿಂದ ಜನರೆಲ್ಲಾ ಚಪ್ಪಾಳೆ ತಟ್ಟಿದರು. ಮೇಲೆ ಕುಳಿತಲ್ಲಿಂದಲೇ ಗಾರುಡಿಗನು ಅರಸನಿಗೆ ವಂದಿಸಿ ಬಹುಮಾನ ಕೇಳಿದನು.

"ನಿನಗೇನು ಬೇಕೋ ಕೇಳಿಕೊ" ಅರಸನಿಂದ ಉತ್ತರಬಂತು.

"ಸ್ವಾಮಿ, ನಾನೇನು ಕೇಳಿದರೂ ತಾವು ನಿರಾಕರಿಸುವುದಿಲ್ಲವೆಂದು ನನಗೆ ಗೊತ್ತು. ಆದರೆ, ಮಹಾಸ್ವಾಮಿ, ದೇವರು ನನಗೆ ಸಾಕಷ್ಟು ಧನ ಸಂಪತ್ತು ಕರುಣಿಸಿದ್ದಾನೆ. ಅಂತೆಯೇ ಅಂಥದಾವುದನ್ನೂ ನಾನು ಕೇಳುವುದಿಲ್ಲ. ರಾಜಕುಮಾರಿಯವರ ಹತ್ತಿರವಿರುವ ಗಿಳಿಯನ್ನು ನನಗಿತ್ತರೆ ಸಾಕು. ಅಷ್ಟರಿಂದ ನಾನು ತೃಪ್ತನು" ಗಾರುಡಿಗ ಕೇಳಿದನು.

"ತಥಾಸ್ತು; ನಿನಗದು ದೊರೆಯುವುದು," ಎಂದು ಹೇಳಿ ಅರಸನು ಗಿಳಿಯನ್ನು ತರಲು ಸೇವಕನನ್ನು ತನ್ನ ಮಗಳೆಡೆಗೆ ಕಳುಹಿದನು.

ಸೇವಕನಿಂದ ಅರಸನ ಆಜ್ಞೆಯನ್ನು ತಿಳಿದ ರಾಜಕುಮಾರಿಯು ಕೋಪದಿಂದ ಕೆಂಡಮಾದಳು. "ನೀವೆಲ್ಲ ಮೂರ್ಖರಿದ್ದೀರಿ! ನನ್ನ ಪ್ರೀತಿಯ ಗಿಳಿಯನ್ನು ಕೇಳಲು ನಿಮಗೆಲ್ಲಿಂದ ಬಂತು ಧೈರ್ಯ? ಯಾಕೆ? ಬೇರೆ ಗಿಳಿಗಳು ನಿಮಗೆ ಸಿಗುವುದಿಲ್ಲವೆ? ನಡೆ ಇಲ್ಲಿಂದ" ಎಂದವಳು ಸೇವಕನನ್ನು ಹೊರಗಟ್ಟಿದಳು.

## ಗುರು-ಶಿಷ್ಯರಲ್ಲಿ ಸಂಧಾನ

ಮಗಳ ಉತ್ತರ ಕೇಳಿ ಅರಸನು ತಪ್ತನಾದನು. ಆದರೂ ಅದನ್ನು ಬಹಿರಂಗವಾಗಿ ವ್ಯಕ್ತಪಡಿಸದೆ, "ನಾನೊಮ್ಮೆ ವಚನವಿತ್ತ ನಂತರ ಅದನ್ನು ಹಿಂತೆಗೆಯಲಾರೆ. ನಾನವಳಿಗೆ ನೂರು ಗಿಳಿಗಳನ್ನು ಕೊಡುವೆನೆಂದೂ, ಆ ಗಿಳಿಯನ್ನು ಕೊಡಲೇಬೇಕೆಂದೂ ರಾಜಕುಮಾರಿಗೆ ತಿಳಿಸು" ಎಂದನು.

ಸೇವಕನು ರಾಜಾಜ್ಞೆಯೊಂದಿಗೆ ಮರಳಿ ಬಂದಾಗ ರಾಜಕುಮಾರಿ ಇನ್ನೂ ಸಿಟ್ಟಿಗೆದ್ದಳು. ನಂತರ ಕಣ್ಣವೆಯನ್ನೂ ಪಿಳುಕಿಸದೆಯೆ ಪಂಜರದಿಂದ ಗಿಳಿಯನ್ನು ಹೊರದೆಗೆದು ಅದರ ಕತ್ತು ಹಿಚುಕಿ ಕಿಟಕಿಯಿಂದ ಹೊರಗೆಸೆದುಬಿಟ್ಟಳು. ನಂತರ ಬಿಗುವಿನಿಂದಲೇ- "ನಿಮಗೆ ಬೇಕಿದ್ದರೆ ಅದನ್ನು ತೆಗೆದುಕೊಳ್ಳಿ" ಎಂದಳು.

ಹೊರಗೆಸೆಯಲ್ಪಟ್ಟ ಗಿಳಿಯು ಗಾರುಡಿಗ ನೇರಿದ ಕೋಲಿನ ಅಡಿಯಲ್ಲಿಯೇ ನೆಲಕ್ಕೆ ಬಿತ್ತು. ಸತ್ತ ಗಿಳಿಯನ್ನು ನೋಡಿದ ಅವನು "ಮಹಾರಾಜ, ನನಗೆ ಬೇಕಿದ್ದುದು ಜೀವಂತ ಪಕ್ಷಿ; ಆದರೆ ಈಗದು ಸತ್ತು ಹೋಗಿರುವುದರಿಂದ ನಿಮ್ಮ ಪುತ್ರಿಯ ಕೊರಳಲ್ಲಿಯ ಮುತ್ತಿನ ಹಾರವನ್ನಿತ್ತರೆ ಉಪಕಾರವಾಗುವುದು" ಎಂದನು.

ಅರಸನು ತನ್ನ ಸೇವಕನೆಡೆ ಹೊರಳಿ ನೋಡುವುದೊಂದೇ ತಡ ಅವನು ರಾಜಕುಮಾರಿಯೆಡೆಗೆ ಓಡಿ ಹೋಗಿ ಅರಸನ ಆಜ್ಞೆಯನ್ನು ಅರುಹಿದನು. ತನ್ನ ಪ್ರಿಯತಮ ಹೇಳಿದ್ದಂತೆಯೇ ಎಲ್ಲವೂ ನಡೆಯುತ್ತಿದ್ದುದನ್ನು ಕಂಡು ಅವಳಲ್ಲಿ ಅವನ ಬಗ್ಗೆ ಗೌರವ ಇನ್ನೂ ಹೆಚ್ಚಿತು. ಆದರೂ ಕೋಪದಿಂದಲೇ "ನಾನು ಈ ಹಾರವನ್ನು ಧರಿಸುವುದು ತಂದೆಯವರಿಗೆ ಸರಿಬಂದಂತೆ ತೋರಲಿಲ್ಲ. ಇದನ್ನು ಇತರರಿಗೆ ಕೊಡುವುದಕ್ಕಿಂದ ಹರಿದು ಹಾಕುವುದೆ ಲೇಸು!" ಎಂದವಳೆ ಮುತ್ತಿನ ಹಾರವನ್ನು ಕೊರಳೊಳಗಿಂದ ತೆಗೆದು ಅದರ ದಾರ ಹರಿದು ನೆಲದ ಮೇಲೆಸೆದಳು. ಆಶ್ಚರ್ಯವೆಂದರೆ ಹಾರ ನೆಲಕ್ಕೆ ಬಿದ್ದೊಡನೆಯೇ ಅದರಲ್ಲಿಯ ಮುತ್ತುಗಳೆಲ್ಲಾ ಕ್ಷುದ್ರ ಜಂತುಗಳಾಗಿ ಎಲ್ಲ ಗಡೆಗೂ ಹರಿದಾಡತೊಡಗಿದವು.

ಕೋಲಿನ ಮೇಲೆ ಕುಳಿತಲ್ಲಿಂದಲೇ ಇದೆಲ್ಲವನ್ನೂ ನೋಡುತ್ತಿದ್ದ ಗಾರುಡಿಗ ಕೋಳಿಯ ರೂಪ ಧರಿಸಿ ರಾಜಕುಮಾರಿಯ ಕೋಣೆಯೊಳಗೆ ಹಾರಿ ಬಂದವನೇ ನೆಲದ ಮೇಲೆ ಹರಿದಾಡುತ್ತಿದ್ದ ಜಂತುಗಳನ್ನೊಂದೊಂದನ್ನೇ ಲಗುಬಗೆಯಿಂದ ನುಂಗಲಾರಂಭಿಸಿದನು. ರಾಜಕುಮಾರಿ ಹಾಗೂ ಸೇವಕರು ಆಶ್ಚರ್ಯಚಕಿತರಾಗಿ ಅದನ್ನೇ ನೋಡುತ್ತಿದ್ದಂತೆಯೇ ಎಲ್ಲಿಂದಲೋ ಕಾಡು ಬೆಕ್ಕೊಂದು ನೆಗೆದು ಬಂದು ಕೋಳಿಯ ಕುತ್ತಿಗೆಯನ್ನೇ ಕಚ್ಚಿ ಹಿಡಿಯಿತು. ಆಗೊಮ್ಮೆಲೆ ಕೋಳಿಯು ಮಾನವ ಧ್ವನಿಯಲ್ಲಿ, "ಭಲೆ ಹುಡುಗಾ ಭಲೆ! ನನ್ನನ್ನು ಪರಾಭವಗೊಳಿಸಿರುವಿ ನೀನು. ನಿನ್ನ ಬಗ್ಗೆ ನನಗೆ ಅಭಿಮಾನವೆನಿಸುತ್ತದೆ. ಇನ್ನು ಮುಂದೆ ನಿನ್ನ ಬಗ್ಗೆ ವೈರಭಾವವನ್ನು ನಾನಿರಿಸಿಕೊಳ್ಳುವುದಿಲ್ಲ, ನನ್ನನ್ನು ಬಿಟ್ಟುಬಿಡು" ಎಂದಿತು.

ಆ ವೇಳೆಗಾಗಲೇ ಗಾರುಡಿಗ ಕೋಳಿಯಾಗಿ ರಾಜಕುಮಾರಿಯ ಕೋಣೆಯೊಳಗೆ ಹಾರಿ ಹೋದುದನ್ನು ಕಂಡಿದ್ದ ಅರಸ ಹಾಗೂ ಅವನ ಪರಿವಾರದವರು ಬಂದಿದ್ದರು. ಅವರು ಒಳಗೆ ಬಂದಾಗ ಬೆಕ್ಕು ಕೋಳಿಯನ್ನು ಬಿಡದೆಯೆ ಮನುಷ್ಯ ಧ್ವನಿಯಲ್ಲಿ ಕೂಗುತ್ತಿತ್ತು. "ಅನೇಕ ವರುಷಗಳಿಂದ ನನ್ನ ತಂದೆ-ತಾಯಿಗಳಿಗೆ, ನನಗೆ ನೀನು ಕೊಟ್ಟ ಕಷ್ಟವನ್ನು ನಾನು ಮರೆತಿಲ್ಲ. ನಿನ್ನನ್ನೂ ನಾನು ಹಾಗೆಯೇ ಬಿಡಲಾರೆ. ನೀನಾಡಿದ ಒಂದು ಶಬ್ದವನ್ನೂ ನಾನು ನಂಬುವುದಿಲ್ಲ."

ಪ್ರಾಣಿಗಳು ಮಾತನಾಡುವುದನ್ನು ನೋಡಿಯೇ ಚಕಿತನಾಗಿದ್ದ ಅರಸನು ಬೆಕ್ಕಿನ ಹಿಡಿತದಿಂದ ಕೋಳಿಯನ್ನು ಬಿಡಿಸಿ "ನೀವು ಯಾರು? ಹೀಗೇಕೆ ಕಾದುತ್ತಿರುವಿರಿ? ಎಂದು ವಿಚಾರಿಸಿದನು.

"ಬೆಕ್ಕನ್ನೇ ಕೇಳಿರಿ, ಅದೇ ಎಲ್ಲವನ್ನೂ ಹೇಳುವುದು" ನೊಂದ ಧ್ವನಿಯಲ್ಲಿ ಕೋಳಿ ಹೇಳಿತು.

ಆಗ ಅರಸನು ಕೋಪದಿಂದ ಬಿಸಿಯುಸಿರು ಬಿಡುತ್ತ ನಿಂತಿದ್ದ ಬೆಕ್ಕನ್ನು ವಿಚಾರಿಸಿದನು.

ಧರ್ಮನಂದನ ಕಿರಿಯ ಮಗನೂ, ಕೋಳಿಯ ರೂಪದಲ್ಲಿದ್ದ ಬ್ರಾಹ್ಮಣ ಗುರುವಿನ ಶಿಷ್ಯನೂ ಆಗಿದ್ದ ಬೆಕ್ಕು ತನ್ನ ನಿಜ ವೃತ್ತಾಂತವನ್ನು ವಿವರವಾಗಿ ಹೇಳಲಾರಂಭಿಸಿದಾಗ ಅಲ್ಲಿ ನೆರೆದವರೆಲ್ಲ ಬೆರಗುಗೊಂಡರು. ಅವನ ಕತೆ ಮುಗಿದಾಗ ಅರಸನು ಇಬ್ಬರನ್ನೂ ಕುರಿತು "ಈಗ ಇಬ್ಬರೂ ಒಂದೆಡೆಯೇ ಸೇರಿದ್ದೀರಿ. ಮುಂದೇನು ಮಾಡಬೇಕೆಂದಿದ್ದೀರಿ?" ಎಂದು ಕೇಳಿದನು.

ಆಗ ಗುರುವು ಹೇಳಿದನು. "ಆಗಲೇ ನಾನು ಸೋಲೊಪ್ಪಿಕೊಂಡಿದ್ದೇನೆ. ನನ್ನ ಶಿಷ್ಯ ಗುರುವಿಗಿಂತ ಹೆಚ್ಚಿನ ಯೋಗ್ಯತೆಯನ್ನು ಪ್ರದರ್ಶಿಸಿದ್ದಾನೆ. ಅವನ ಬಗ್ಗೆ ನನಗೀಗ ಅಭಿಮಾನವೆನಿಸುತ್ತಿದೆ. ಅವನೊಂದಿಗೆ ನಾನೀಗ ಮೈತ್ರಿಯಿಂದಿರಬಯಸುವೆ ಇದು ನನ್ನ ಪ್ರಾಮಾಣಿಕ ಇಚ್ಛೆ."

"ರಾಜಕುಮಾರ ನಿನ್ನ ಅಭಿಪ್ರಾಯವೇನು?" ಅರಸನು ಬೆಕ್ಕನ್ನು ಕೇಳಿದನು. "ನನ್ನ ಗುರುವಿನೊಂದಿಗೆ ಶಾಂತಿಯಿಂದಿರುವುದಕ್ಕೆ ನನ್ನಿಂದ ಯಾವ ಅಭ್ಯಂತರವೂ ಇಲ್ಲ. ಅವನಿಂದ ನನಗೆ ಯಾವ



ಭೀತಿಯೂ ಇಲ್ಲ."

ನಂತರ ಗುರು-ಶಿಷ್ಯರಿಬ್ಬರೂ ತಮ್ಮ ನೈಜ ಮನುಷ್ಯರೂಪ ಧಾರಣ ಮಾಡಿ ಅರಸನ ಸಮ್ಮುಖದಲ್ಲಿಯೆ ಪರಸ್ಪರ ಕೈಕುಲುಕಿದರು.

ಅರಸನು ಅವರಿಬ್ಬರನ್ನೂ ಆ ದಿನ ಸತ್ಕರಿಸಿದನು. ಭೋಜನಾ ನಂತರದಲ್ಲಿ ರಾಜಕುಮಾರನೆಡೆಗೆ ಹೊರಳಿ ಅವನು "ಕಳೆದ ಎಂಟು ದಿನಗಳನ್ನು ನೀನು ಗಿಳಿಯಾಗಿ ನನ್ನ ಮಗಳ ಶಯ್ಯಾಗೃಹದಲ್ಲಿ ಕಳೆದಿರುವೆ. ಅಲ್ಲದೆ ಗಿಳಿಯ ರೂಪದಲ್ಲಿ ನೀನು ಅವಳ ಹೃದಯವನ್ನೂ ಕದ್ದಿರುವೆ. ನೀನು ಯಾರೆಂಬುದು ಗೊತ್ತಾದಾಗ ಅವಳು ನಿನ್ನನ್ನು ಬಿಡಲಿಚ್ಛಿಸುತ್ತಾಳೆಂದು ನನಗನಿಸುವುದಿಲ್ಲ. ಈಗ ನಿನ್ನ ಒಪ್ಪಿಗೆಯಿದ್ದರೆ ಅವಳನ್ನು ನಿನಗೆ ವಿವಾಹ ಮಾಡಿಕೊಡಲಿಚ್ಛಿಸುವೆ" ಎಂದನು.

ರಾಜಕುಮಾರನು ಮುಖ ಕೆಳಗೆ ಹಾಕಿದನೆ ವಿನಾ ಮಾತಾಡಲಿಲ್ಲ. ಅದರಿಂದ ಅವನ ಒಪ್ಪಿಗೆಯಿಂದೆಯೆಂದೇ ಬಗೆದು ಅರಸನು ರಾಜಜ್ಯೋತಿಷಿಗಳನ್ನು ಕರೆಯಿಸಿ ವಿವಾಹ ಮುಹೂರ್ತ ನಿರ್ಧರಿಸಿದನು.

ಶೀಘ್ರದಲ್ಲಿಯೇ ಶುಭ ಮುಹೂರ್ತದಲ್ಲಿ ಆ ಮದುವೆ ನೆರವೇರಿತು. ರಾಜಕುಮಾರನ ಗುರುವೇ ಪೌರೋಹಿತ್ಯ ವಹಿಸಿದನು.

ಕೆಲ ದಿನಗಳ ನಂತರ ಗುರುವು ಸತಿ-ಪತಿಯರನ್ನು ತನ್ನ ಆಶ್ರಮಕ್ಕೆ ಕರೆದೊಯ್ಯಬೇಕೆಂಬ ಇಚ್ಛೆಯನ್ನು ಪ್ರಕಟಿಸಿದನು. ಅದಕ್ಕೆಲ್ಲರೂ ಒಪ್ಪಿದ್ದರಿಂದ ಅರಸನು ಅಳಿಯ ಹಾಗೂ ಮಗಳಿಗೆ ಅಪಾರ ಸಂಪತ್ತನ್ನೂ ದೊಡ್ಡ ಸೈನ್ಯ ಬಲವನ್ನೂ ಕೊಟ್ಟು ಕಳಿಸಿದನು.

ವೈರಭಾವವನ್ನೆಲ್ಲ ಮರೆತು ಗುರುವು ತನ್ನ ಶಿಷ್ಯನನ್ನು ಉಪಚರಿಸಿದನು. ಅಲ್ಲದೆ ಅವನು ಅಲ್ಲಿಂದ ಹೊರಡುವಾಗ ದಕ್ಷಿಣೆಯೆಂದು ಇಟ್ಟುಕೊಂಡಿದ್ದ ಅವನ ಅಣ್ಣನನ್ನೂ ಅವನೊಂದಿಗೆ ಕಳುಹಿಸಿದನು. ಆಗ ಸೋದರರಿಬ್ಬರೂ ಪರಸ್ಪರ ಆಲಂಗಿಸಿಕೊಂಡು ಅಭಿನಂದಿಸಿದರು.

ಅಲ್ಲಿಂದ ಸೋದರರು ತಮ್ಮ ಮೂಲ ಗ್ರಾಮವಾದ ಧರ್ಮಪುರಿಗೆ ತೆರಳಿ ಅದರ ಮೇಲೆ ದಾಳಿ ಮಾಡಿದರು. ಅವರ ತಂದೆಯಿಂದ ಅದನ್ನಾಕ್ರಮಿಸಿ ಆಳುತ್ತಿದ್ದ ಅರಸನಿಗೆ ಇದು ತೀರ ಅನಿರೀಕ್ಷಿತವಾಗಿದ್ದರಿಂದ ಅವನು ದಾರಿಗಾಣದೆ ಶರಣಾಗತನಾದನು.

ಕೂಡಲೇ ಕಿರಿಯ ರಾಜಕುಮಾರನು ತನ್ನ ತಂದೆ-ತಾಯಿಗಳನ್ನು ಕರೆಯ ಕಳುಹಿದನು. ಅವರು ಬಂದಾಗ ಜನತೆ ಅಭೂತಪೂರ್ವ ಸ್ವಾಗತವನ್ನಿತ್ತಿತು. ಅವನು ತಂದೆ-ತಾಯಿಗಳನ್ನು ಸಿಂಹಾಸನದ ಮೇಲೆ ಕೂಡಿಸಿದನಲ್ಲದೆ ತನ್ನ ಅಣ್ಣನ ಶಿಕ್ಷಣಕ್ಕಾಗಿ ಉಚಿತ ವ್ಯವಸ್ಥೆಯನ್ನು ಮಾಡಿದನು; ಹಾಗೂ ಓರ್ವ ರಾಜಕುಮಾರಿಯೊಂದಿಗೆ ಅವನ ಮದುವೆಯನ್ನು ಮಾಡಿದನು. ಇದರಿಂದ ರಾಜ್ಯವನ್ನೂ, ಸಕಲ ಸುಖವನ್ನೂ ಮರಳಿ ಪಡೆದ ಧರ್ಮನಂದ ಹಾಗೂ ಅವನ ಹೆಂಡತಿ, ಮಕ್ಕಳು ಸಂತೋಷದಿಂದ ಕಾಲವನ್ನು ಕ್ರಮಿಸಿದರು.

*** *** ***

ಭೀಮಪುರಿಯ ಹಿರಿಯ ರಾಜಕುಮಾರಿಗೆ ಶಯ್ಯಾಗೃಹದಲ್ಲಿ ಪ್ರಥಮ ರಾತ್ರಿ, ಮಂತ್ರಿಕುಮಾರ ಬುದ್ಧಿಚಾತುರ್ಯ ಹೇಳುತ್ತಿದ್ದ ಕತೆ ಇಲ್ಲಿಗೆ ಮುಗಿಯಿತು. ಆಗ ಚಾತುರ್ಯ "ರಾಜಕುಮಾರಿ, ನಿನ್ನ ಪತಿಯೂ ಧರ್ಮನಂದನ ಕಿರಿಯ ಮಗನಂತೆಯೇ ಇರಬೇಕೆಂದು ನಿನಗನಿಸುವುದಿಲ್ಲವೇ?" ಎಂದು ನಸುನಗುತ್ತ ಕೇಳಿದನು.

ಅವನು ಮಾತು ಮುಗಿಸುತ್ತಿದ್ದಂತೆಯೇ ಸೂರ್ಯ ಕಿರಣಗಳು ಕೋಣೆಯನ್ನು ಪ್ರವೇಶಿಸಿದವು. ಆಗ ಚಾತುರ್ಯ "ರಾಜಕುಮಾರಿ, ಆಗಲೆ ಬೆಳಗಾಗಿಬಿಟ್ಟಿತಲ್ಲ! ಪ್ರಾತರ್ವಿಧಿಗೆ ಸಿದ್ಧತೆಯಾಗಲಿ" ಎಂದನು.

• (ಮುಂದಿನ ಸಂಚಿಕೆ ನೋಡಿ)

# ವಿಸ್ತರಿಸುತ್ತಿರುವ ಪ್ಲಾಸ್ಟಿಕ್ ಪ್ರಪಂಚ

## ಪ್ಲಾಸ್ಟಿಕ್ ಭಸ್ಮಾಸುರನೀಗ ಮಾನವನ ವಿನಮ್ರ ಸೇವಕನಾಗುತ್ತಿದ್ದಾನೆ

-ಮೋಹನರಾವ್, ಮಂಜೇಶ್ವರ

**ಪ್ಲಾ**ಸ್ಟಿಕ್ಕು ನಿತ್ಯ ಜೀವನದಲ್ಲಿ ಹಾಸುಹೊಕ್ಕಾಗಿರುವುದರಿಂದ ಈ ಕಾಲವನ್ನು 'ಪ್ಲಾಸ್ಟಿಕ್‌ಯುಗ'ವೆಂದು ಕರೆದರೆ ತಪ್ಪಲ್ಲ.

ನೀರನ್ನು ಶೇಖರಿಸಿಡುವ ದೈತ್ಯ ಗಾತ್ರದ ಟ್ಯಾಂಕಿನಿಂದ ಮೊದಲುಗೊಂಡು ಚೆಲುವೆಯರ ದೃಷ್ಟಿದೋಷ ನಿವಾರಿಸಲು ಕಣ್ಣಂಚಿನ ಮೇಲೆ ಹೊದಿಸಲ್ಪಡುವ ಮೆದುವಾದ ಸ್ಪರ್ಶ ಮಸೂರದವರೆಗಿನ ಸಾವಿರಾರು ವಸ್ತುಗಳು ಪ್ಲಾಸ್ಟಿಕ್ಕಿನಿಂದಲೇ ತಯಾರಾಗುತ್ತಿವೆ. ಶಾಬ್ದಿಕವಾಗಿ ಪ್ಲಾಸ್ಟಿಕ್ ಎಂದರೆ ಸುಲಭದಲ್ಲಿ ಯಾವುದೇ ಆಕೃತಿ ಪಡೆಯಬಲ್ಲ ಪದಾರ್ಥ ಎಂದು ಅರ್ಥ. ಇವುಗಳ ಹೆಸರಿಗೆ ತಕ್ಕಂತೆ ಪ್ಲಾಸ್ಟಿಕ್ಕುಗಳಿಗೆ ನಾವು ಬಯಸುವ ಯಾವುದೇ ಗುಣಮಟ್ಟ, ಆಕಾರ, ಬಣ್ಣ ಇತ್ಯಾದಿಗಳನ್ನು ಕೊಡಬಹುದು. "ವಜ್ರಾದಪಿ ಕಠೋರಾಣಿ ಮೃದೂನಿ ಕುಸುಮಾದಪಿ" ಎಂಬ ಉಪಮೆ ಇದಕ್ಕೂ ಸ್ವಲ್ಪ ಮಟ್ಟಿಗೆ ಅನ್ವಯಿಸುತ್ತದೆ. ಇವುಗಳ ಇನ್ನೊಂದು ವಿಶೇಷ ಗುಣವೆಂದರೆ ರಾಸಾಯನಿಕ ಸ್ಥಿರತೆ ಮತ್ತು ದೀರ್ಘ ಬಾಳಿಕೆ. ಕೆಲವು ಬಗೆಯ ಪ್ಲಾಸ್ಟಿಕ್ಕುಗಳು ಬಲು ಗಟ್ಟಿ. ಎರಡರಿಂದ ನಾಲ್ಕು ಶತಮಾನಗಳವರೆಗೂ ನಾಶವಾಗದೆ ಹಾಗೆಯೇ ಉಳಿಯಬಲ್ಲವು. ಇವುಗಳ ಈ ಉತ್ತಮ ಗುಣವೇ ಮನುಷ್ಯನಿಗೆ ಈಗ ಚಿಂತೆಯ ವಿಷಯವಾಗಿದೆ.

ಇಲ್ಲಿ ಉದ್ಭವಿಸಿದ ಪ್ರತಿಯೊಂದು ಜೀವಿಯಾಗಲಿ, ವಸ್ತುವಾಗಲಿ ಒಂದಿಲ್ಲೊಂದು ದಿನ ತಾನು ಮಣ್ಣಿಗೆ ಮರಳಲೇಬೇಕು ಎನ್ನುವುದು ನಿಸರ್ಗ ನಿಯಮ. ಇಲ್ಲದಿದ್ದರೆ ನಿಸರ್ಗದ ಸಮತೋಲ ತಪ್ಪುತ್ತದೆ. ಆದರೆ ಪ್ರಕೃತಿಯ ಈ ಸಾರ್ವತ್ರಿಕ ನಿಯಮವಾದ "ಸೃಷ್ಟಿ, ಸ್ಥಿತಿ, ಲಯ"ದಿಂದ ಈ ಪ್ಲಾಸ್ಟಿಕ್ಕುಗಳು ತಪ್ಪಿಸಿಕೊಳ್ಳಲೆಣಿಸುತ್ತಿವೆ!

ನಮ್ಮ ಮನೆಯ ಹಿತ್ತಲದ ಕಡೆಗೆ ಇಲ್ಲವೆ ಮಾರ್ಗದ ಬದಿಯ ಕಸದ ಗುಪ್ಪೆಯ ಕಡೆಗೆ ನಾವು ಒಮ್ಮೆ ಕಣ್ಣಾಡಿಸಿದರೆ ಸಾಕು, ನಮಗೆ ಪರಿಸ್ಥಿತಿಯ ಅರಿವಾಗುತ್ತದೆ. ಒಮ್ಮೆ ಉಪಯೋಗಿಸಿ ಬಿಸುಡಲ್ಪಟ್ಟ ಅಸಂಖ್ಯ ಪ್ಲಾಸ್ಟಿಕ್ ಚೀಲಗಳು, ಡಬ್ಬಗಳು ಅಲ್ಲಲ್ಲೇ ಚೆಲ್ಲಾಪಿಲ್ಲಿಯಾಗಿ ಹರಡಿರುವುದನ್ನು ನಾವು ಕಾಣಬಹುದು. ಇವುಗಳಲ್ಲಿ ತುಂಬಿಸಿದ್ದ ನಿತ್ಯೋಪಯೋಗಿ ವಸ್ತುಗಳು ಎಂದೋ ನಾಶವಾಗಿದ್ದರೂ ಇವು ಇನ್ನೂ ಬದುಕುಳಿದಿವೆ. ವಾಸ್ತವವಾಗಿ ಅಮೆರಿಕದಂಥ ಮುಂದುವರಿದ ದೇಶಗಳಲ್ಲಿ ಇಂದು ಶೇಖರವಾಗಿ ಬಾಕಿ ಉಳಿಯುತ್ತಿರುವ ತ್ಯಾಜ್ಯ ನಿರುಪಯುಕ್ತ ವಸ್ತುಗಳಲ್ಲಿ ಶೇಕಡಾ ನಾಲ್ವತ್ತರಷ್ಟು ಪ್ಲಾಸ್ಟಿಕ್ಕುಗಳೇ ಆಗಿವೆ. ಇವುಗಳನ್ನೆಲ್ಲ ಸುಲಭವಾಗಿ ಸುಟ್ಟು ಬಿಡುಬಹುದಲ್ಲ ಎಂಬ ವಿಚಾರ ಸಹಜವಾಗಿ ನಿಮಗೆ ಹೊಳೆಯಬಹುದು. ಆದರೆ ಇತರ ತ್ಯಾಜ್ಯಗಳಂತೆ ಇವು ಸುಲಭವಾಗಿ ಸುಟ್ಟು ನಾಶವಾಗುವವುಗಳಲ್ಲ. ಬದಲು ಸುಡಲ್ಪಡುವಾಗ ಅಪಾಯಕರವಾದ ಅನೇಕ ಅನಿಲಗಳನ್ನು ಗಾಳಿಯಲ್ಲಿ ಬಿಟ್ಟು ಹೋಗುತ್ತವೆ. ಉಳಿದವು ಕ್ಲಿಷ್ಟ ರಾಸಾಯನಿಕಗಳಾಗಿ ಮಾರ್ಪಡುತ್ತವೆ. ತ್ಯಾಜ್ಯ ಪ್ಲಾಸ್ಟಿಕ್ಕುಗಳ ಸಮಸ್ಯೆಯನ್ನು ನಿವಾರಿಸುವ ಒಂದು ಮುಖ್ಯ ಉಪಾಯವೇನೆಂದರೆ ಮತ್ತೆ ಉಪಯೋಗಿಸಲು ಬರುವ ಹಾಗೆ ಅವುಗಳನ್ನು ಹೊಸದಾಗಿ ರೂಪಿಸುವುದು. ಈಗ ಚಿಂದಿ ಹೆಕ್ಕುವವರಿಂದ ಸಂಗ್ರಹಿಸ



ಲ್ಪಡುವ ಪ್ಲಾಸ್ಟಿಕ್ ಸಾಮಗ್ರಿಗಳು ಪುನರುಪಯೋಗಕ್ಕಾಗಿಯೇ ಬಳಸಲ್ಪಡುತ್ತವೆ.

ಆದರೆ ಇವು ವಿವಿಧ ಮೂಲಗಳಿಂದ ಬಂದವುಗಳು ಮತ್ತು ಬೇರೆ ಬೇರೆ ಗುಣಮಟ್ಟದವುಗಳಾದ್ದರಿಂದ ಅವುಗಳನ್ನು ಕರಗಿಸಿ ತಯಾರಿಸಿದ ಮಿಶ್ರಣಕ್ಕೆ ನಾವು ಬಯಸುವ ಗುಣಗಳನ್ನು ಕೊಡಲಸಾಧ್ಯವಾಗಿದೆ. ಇದರಿಂದ ಸದ್ಯ ಕೆಲವು ಪೀಠೋಪಕರಣ ಇತ್ಯಾದಿ ಮಾತ್ರ ತಯಾರು ಮಾಡಬಹುದಷ್ಟೆ. ಈಗ ಮುಖ್ಯವಾಗಿ ನಮಗೆ ಬೇಕಾದ ಗುಣಮಟ್ಟದ ಪ್ಲಾಸ್ಟಿಕ್ಕುಗಳನ್ನು ಪುನಾರಚಿಸುವತ್ತ ಸಂಶೋಧನೆಗಳು ನಡೆಯುತ್ತಿವೆ.

ಪ್ಲಾಸ್ಟಿಕ್ಕುಗಳು ಮುಖ್ಯವಾಗಿ ಖನಿಜ ತೈಲ(Petroleum) ಮೂಲದ ವಸ್ತುಗಳು. ಇವುಗಳ ಸೂಕ್ಷ್ಮ ಕಣಗಳು (Molecules) ಉದ್ದವಾದ ಸರಪಳಿಯ ಆಕೃತಿಯಲ್ಲಿವೆ. ಈ ಸರಪಳಿಯ ಉದ್ದಕ್ಕೆ ಇಂಗಾಲ, ಜಲಜನಕಗಳಿಂದ ರಚಿತವಾದ ಶರ್ಕರಪಿಷ್ಟದ ಸಣ್ಣ ಕಣಗಳು ಮಣಿಗಳಂತೆ ಪೋಣಿಸಲ್ಪಟ್ಟಿವೆ. ರಸಾಯನಶಾಸ್ತ್ರದಲ್ಲಿ ಸಣ್ಣ ಕಣಗಳಿಂದ ಪೋಣಿಸಲ್ಪಟ್ಟು ರಚಿತವಾದ ಉದ್ದ ಕಣಗಳಿಗೆ ಪಾಲಿಮರ್ ಎನ್ನುತ್ತಾರೆ. ಹೀಗೆ ಪ್ಲಾಸ್ಟಿಕ್ಕುಗಳು ಪೆಟ್ರೋಲಿಯಂ ಮೂಲದ ಪಾಲಿಮರುಗಳು.

ನಾವು ಪ್ಲಾಸ್ಟಿಕ್ಕುಗಳನ್ನು ಯಥೇಚ್ಛವಾಗಿ ಉಪಯೋಗಿಸುತ್ತೇವೆ. ಆ ಮೇಲೆ ಅವನ್ನು ಕಸದ ಗುಪ್ಪೆಗೆ ಎಸೆಯುತ್ತೇವೆ. ಅವು ಕಾಲಕ್ರಮೇಣ ಕಂಪೋಸ್ಟ್ ಹೊಂಡವನ್ನೋ ಮಣ್ಣನ್ನೋ ಸೇರುತ್ತವೆ. ಅಲ್ಲಿ ವಾಸಿಸುವ ಸೂಕ್ಷ್ಮ ಜೀವಿಗಳಾದ ಬ್ಯಾಕ್ಟೀರಿಯಾ ಮತ್ತು ಅಣಬೆ ಜೀವಿಗಳು ಈ ತ್ಯಾಜ್ಯಗಳನ್ನು ಕೊಳೆಯಿಸಿ ಅವನ್ನು ನೀರು, ಇಂಗಾಲಾಮ್ಲದಂತಹ ಸರಳ ವಸ್ತುಗಳಾಗಿ ವಿಭಜಿಸಿ ತಮ್ಮ ಆಹಾರವಾಗಿ ಉಪಯೋಗಿಸುತ್ತವೆ. ಆದರೆ ಪ್ಲಾಸ್ಟಿಕ್ ತ್ಯಾಜ್ಯಗಳ ಕಣಗಳು ಉದ್ದ ಸರಪಳಿಯ ರೂಪದಲ್ಲಿ ಇರುತ್ತವಾದ್ದರಿಂದ ಇವನ್ನು ಬ್ಯಾಕ್ಟೀರಿಯಗಳಿಂದ ನುಂಗಲಾಗುವುದಿಲ್ಲ. ಬಹಳ ಮಟ್ಟಿಗೆ ಅವು ಸರಪಳಿಯ ಎರಡು ತುದಿಗಳನ್ನು ಸ್ವಲ್ಪ ಸ್ವಲ್ಪ ಅಗಿದು ತಿನ್ನಬಹುದಷ್ಟೆ. ಆದುದರಿಂದ ಈ ಅತಿ ಉದ್ದ ಸರಪಳಿಯನ್ನು ತಿಂದು ಮುಗಿಸಲು ಬ್ಯಾಕ್ಟೀರಿಯಗಳಿಗೆ ಶತಮಾನಗಳೇ ಹಿಡಿಯುತ್ತವೆ. ಇಲ್ಲಿದೆ ಪ್ಲಾಸ್ಟಿಕ್ಕುಗಳ ದೀರ್ಘ ಆಯುಷ್ಯದ ಗುಟ್ಟು!

ಇತ್ತೀಚೆಗಷ್ಟೆ 'ಒಳ್ಳೆಯ ಸ್ವಭಾವ'ದ ಹೊಸ ಪೀಳಿಗೆಯ ಪ್ಲಾಸ್ಟಿಕ್ಕುಗಳು ಮಾರುಕಟ್ಟೆಗಿಳಿದಿವೆ. ಇವುಗಳನ್ನು ತಯಾರಿಸುವಾಗ ಪೆಟ್ರೋಲಿಯಂ ಮೂಲದ ಪಾಲಿಮರಿನೊಡನೆ ಸಸ್ಯಜನ್ಯ ಪಾಲಿಮರ್ ಆದ ಪಿಷ್ಟವನ್ನು ಸಹ ಬೆರೆಸುತ್ತಾರೆ. ಆಗ

ಪಿಷ್ಟದ ಸರಪಳಿ ಕಣಗಳು ಪೆಟ್ರೋಲಿನ ಪಾಲಿಮರಿನ ಉದ್ದದ ಸರಪಳಿಯ ಮಣಿಗಳ ನಡುವೆ ಪೋಣಿಸಲ್ಪಡುತ್ತವೆ. ಈ ಹೊಸ ಪ್ಲಾಸ್ಟಿಕ್ಕು ಕ್ರಮೇಣ ತ್ಯಾಜ್ಯವಾಗಿ ಮಣ್ಣಿಗೆ ಸೇರಿಸಲ್ಪಟ್ಟಾಗ ಪಾಲಿಮರ್ ಸರಪಳಿಯ ನಡುವೆ ಸೇರಿಸಲ್ಪಟ್ಟ ಪಿಷ್ಟದ ಭಾಗವನ್ನು ಬ್ಯಾಕ್ಟೀರಿಯಗಳು ಬೇಗ ಕಬಳಿಸುತ್ತವೆ. ಈ ಪಿಷ್ಟ ನಷ್ಟದಿಂದ ಉದ್ದದ ಪಾಲಿಮರ್ ಸರಪಳಿಯು ತುಂಡರಿಸಲ್ಪಡುತ್ತದೆ. ಸರಪಳಿಯ ಉಳಿದ ಚಿಕ್ಕ ತುಂಡುಗಳನ್ನು ಅಗಿದು ಮುಗಿಸಲು ಬ್ಯಾಕ್ಟೀರಿಯಕ್ಕೆ ಈಗ ಅನುಕೂಲವಾಗುತ್ತದೆ. ಪ್ಲಾಸ್ಟಿಕ್ ಉತ್ಪಾದಕರು ಮೊದಮೊದಲು ಶೇಕಡಾ ಐದರಿಂದ ಹದಿನೈದರಷ್ಟು ಪಿಷ್ಟವನ್ನು ಮಾತ್ರ ಪೆಟ್ರೋ ಪಾಲಿಮರಿನೊಡನೆ ಬೆರೆಸುತ್ತಿದ್ದರು. ಈ ಪೀಳಿಗೆಯ ಪ್ಲಾಸ್ಟಿಕ್ಕುಗಳನ್ನು ಪಾಲಿಎಷ್ಟರೀನ್, ಪಾಲಿ ಒಲಿಫಿನ್, ಪಾಲಿ ಎಥಿರೀನ್ ಇತ್ಯಾದಿ ಹೆಸರುಗಳಿಂದ ಕರೆಯುತ್ತಾರೆ. ಇವು

ಪ್ಲಾಸ್ಟಿಕ್ ಆಟಿಕೆಗಳು



ಶತಮಾನಗಳವರೆಗೆ ನಷ್ಟವಾಗುವುದಿಲ್ಲ. ಈಗೀಗ ಪೆಟ್ರೋಪಾಲಿಮರಿನೊಂದಿಗೆ ಶೇಕಡಾ ಐವತ್ತೊಂಭತ್ತರಷ್ಟು ಪಿಷ್ಟ ಬೆರಸುತ್ತಾರೆ. ಜತೆಗೆ ಕೆಲವು ಉತ್ತೇಜಕ (Catalysts) ಗಳನ್ನು ಸಹ ಮಿಲಾಯಿಸುತ್ತಾರೆ. ಉತ್ತೇಜಕಗಳು ಬ್ಯಾಕ್ಟೀರಿಯಗಳಿಂದ ಮೊದಲೇ ತುಂಡು ತುಂಡಾದ ಪಾಲಿಮರ್ ಸರಪಳಿಯನ್ನು ಮಣ್ಣಿನೊಳಗಿನ ಆಮ್ಲಜನಕದೊಡನೆ ಸಂಯೋಗಗೊಳ್ಳುವಂತೆ ಮಾಡಿ ಇನ್ನಷ್ಟು ವಿಘಟನಗೊಳ್ಳುವಂತೆ ಮಾಡುತ್ತವೆ. ಉಳಿದ ಚೂರುಗಳನ್ನು ಬ್ಯಾಕ್ಟೀರಿಯಗಳು ನುಂಗಿ ಮುಗಿಸುತ್ತವೆ. ಈ ಎರಡನೇ ಪೀಳಿಗೆಯ ಪ್ಲಾಸ್ಟಿಕ್ಕುಗಳು ಸುಮಾರು ಎರಡು ವರ್ಷಗಳಲ್ಲಿ ನಾಶವಾಗುತ್ತವೆ.

ಆ ನಂತರ ಬಂದಿರುವ ಮೂರನೇ ಪೀಳಿಗೆಯ ಪ್ಲಾಸ್ಟಿಕ್ಕುಗಳು ಪೆಟ್ರೋಲಿಯಂ ಮೂಲದವು ಅಲ್ಲವೇ ಅಲ್ಲ. ಇವು ಜೈವಿಕ ಮೂಲಗಳಿಂದ ಬಂದ ಬರೇ ಪಿಷ್ಟ, ಸಕ್ಕರೆ ಮತ್ತು ನೀರಿನಿಂದ ಉತ್ಪಾದಿಸಲ್ಪಡುತ್ತಿವೆ. ಅಮೆರಿಕದ ವಾರ್ನರ್ ಹಂಬರ್ಟ್ ಕಂಪನಿಯು ತಯಾರಿಸುವ ನೊವೊನ್ ಎಂಬ ಪ್ಲಾಸ್ಟಿಕ್ಕು ಪಿಷ್ಟವನ್ನು ದ್ರವೀಕರಿಸಿ ಅದನ್ನು ನೀರಿನೊಂದಿಗೆ ಮೇಳವಿಸುವುದರಿಂದ ಉತ್ಪಾದಿಸಲ್ಪಡುತ್ತದೆ. ಇಂಗ್ಲೆಂಡಿನ ಇಂಪೀರಿಯಲ್ ಕೆಮಿಕಲ್ ಕಂಪೆನಿಯ ತಯಾರಿಕೆಯಾದ ಬಯೋಪೋಲ್ ಎಂಬ ಜೈವಿಕ, ಮೂಲದ ಮತ್ತೂ ಒಂದು ಬಗೆಯ ಪ್ಲಾಸ್ಟಿಕ್ಕು ಕಾಕಂಬಿಯಲ್ಲಿ (molases) ಬೆಳೆಯಿಸಲ್ಪಡುವ ಒಂದು ಜಾತಿಯ ಬ್ಯಾಕ್ಟೀರಿಯಗಳಿಂದ ತಯಾರಿಸಲ್ಪಡುತ್ತವೆ. ಚಳಿಗಾಲದಲ್ಲಿ ಹಿಮಕರಡಿಗಳು ತಮ್ಮ ಚರ್ಮದಡಿಯಲ್ಲಿ ಕೊಬ್ಬನ್ನು ಶೇಖರಿಸುವಂತೆಯೇ ಈ ಸೂಕ್ಷ್ಮ ಜೀವಿಗಳು ಆಪತ್ಕಾಲದ ಆಹಾರಕೋಸ್ಕರ ಜೈವಿಕ ಪಾಲಿಮರ್ ಹರಳುಗಳನ್ನು ತಯಾರಿಸಿ ತಮ್ಮ ಪುಟ್ಟ ಶರೀರದೊಳಗೆ ದಾಸ್ತಾನು ಇಡುತ್ತವೆ.

ಬ್ಯಾಕ್ಟೀರಿಯದ ಶರೀರದಿಂದ ಅನಂತರ ಪಾಲಿಮರ್ ಹರಳನ್ನು ಹೊರತರಲು ಆವಿ ಮತ್ತು ಕ್ಷಾರ ಮಿಶ್ರಣಗಳನ್ನು ಪ್ರಯೋಗಿಸಲಾಗುತ್ತದೆ. ಹೀಗೆ ಬ್ಯಾಕ್ಟೀರಿಯಗಳನ್ನು ಪೋಷಿಸುವ ಆಹಾರ ಮತ್ತು ಅವು ಬೆಳೆಯುವ ಪರಿಸರವನ್ನು ಬದಲಾಯಿಸಿ ನಮಗೆ ಬೇಕಾದ ಗುಣಮಟ್ಟದ ಪಾಲಿಮರನ್ನು ಪಡೆಯಬಹುದಾಗಿದೆ. ಆಲ್ಕೆಲಿಜೀನಸ್ ಇಯೊಟ್ರೋಪಸ್ ಎಂಬ ಬ್ಯಾಕ್ಟೀರಿಯ ಜೈವಿಕ ಪಾಲಿಮರನ್ನು ತಯಾರಿಸುತ್ತದೆ. ಪ್ಲಾಸ್ಟಿಕ್ ಸಾಮಗ್ರಿಗಳ ಉಪಯೋಗದ ನಂತರ ಅವುಗಳ ನಾಶಕ್ಕೆ ಇದೇ ಬ್ಯಾಕ್ಟೀರಿಯವನ್ನು ಪ್ರೇರೇಪಿಸುವ ಸಾಧ್ಯತೆ ಕೂಡ ಇದೆ!

ಜೈವಿಕ ಮೂಲದ ಪ್ಲಾಸ್ಟಿಕ್ಕುಗಳ ಒಳ್ಳೆಯ ಗುಣವೇನೆಂದರೆ ಅವು ಕೆಲವು ದಿನಗಳಿಂದ ತೊಡಗಿ ಆರು ವಾರಗಳೊಳಗೆ ವಿಘಟಿತಗೊಂಡು ನಾಶವಾಗುತ್ತವೆ. ಪೆಟ್ರೋಲಿಯಂ ಮೂಲದ ಪ್ಲಾಸ್ಟಿಕ್ಕುಗಳ ಹೆಚ್ಚು ಕಡಿಮೆ ಎಲ್ಲ ಉತ್ತಮ ಗುಣಗಳನ್ನೂ ಇವುಗಳಲ್ಲಿ ಕಾಣಬಹುದು. ಆದರೆ ಇವು ಅತಿ ಹೆಚ್ಚಿನ ಶಾಖ ಮತ್ತು ಆಘಾತವನ್ನು ಮಾತ್ರ ತಾಳಲಾರವು. ಬಯೋಪೋಲ್‌ನ ರಾಸಾಯನಿಕ ಸ್ಥಿರತೆ ಮತ್ತು ಶೀಘ್ರ ವಿಘಟನ ಗುಣಗಳಿಂದಾಗಿ ಅದನ್ನು ವೈದ್ಯಶಾಸ್ತ್ರದಲ್ಲಿ ಧಾರಾಳವಾಗಿ ಉಪಯೋಗಿಸುವ ಸಾಧ್ಯತೆ ಇದೆ. ಉದಾಹರಣೆಗೆ ಶಸ್ತ್ರಕ್ರಿಯೆಯ ಗಾಯಗಳನ್ನು ಹೊಲಿಯುವ ದಾರಗಳು, ತುಂಡಾದ ಎಲುಬನ್ನು ಜೋಡಿಸುವ ಅಂಟು; ನಿರಂತರವಾಗಿ ಔಷಧಿಯನ್ನು ಸ್ರವಿಸುವ ಗುಳಿಗೆಗಳು ಇತ್ಯಾದಿ, ಇತ್ಯಾದಿ. ಈ ಪ್ಲಾಸ್ಟಿಕ್ಕುಗಳು ಮನುಷ್ಯ ಶರೀರಕ್ಕೆ ಯಾವ ರೀತಿಯ ಅಪಾಯವನ್ನೂ ತಾರದೆ ತಮ್ಮ ಕರ್ತವ್ಯಗಳನ್ನು ನಿಭಾಯಿಸಿದ ಬಳಿಕ ನಮ್ಮ ಶರೀರದೊಳಗೇ ವಿಘಟಿತಗೊಂಡು ನಷ್ಟವಾಗಿಬಿಡುತ್ತವೆ.

ಹೀಗೆ ಈ ಹೊಸ ಪೀಳಿಗೆಯ ಪ್ಲಾಸ್ಟಿಕ್ಕುಗಳು ಪುನರುತ್ಪತ್ತಿಗೊಳ್ಳುವ ಜೈವಿಕ ಮೂಲಗಳಿಂದಲೇ ಹುಟ್ಟಿ, ನಮ್ಮ ಭೂಮಿಯ ಅಮೂಲ್ಯ ಖನಿಜತೈಲ ನಿಕ್ಷೇಪವನ್ನು ಉಳಿಸಿಕೊಂಡು ವಿವಿಧ ರೀತಿಗಳಿಂದ ಮಾನವನಿಗೆ ಉಪಯೋಗವಾಗಿ ಕಟ್ಟ ಕಡೆಗೆ ಕ್ಲುಪ್ತ ಸಮಯದಲ್ಲಿ ವಿಘಟಿತವಾಗಿ ಸದ್ದಿಲ್ಲದೆ ಈ ಲೋಕದಿಂದ ಮಾಯವಾಗಿಬಿಡುತ್ತವೆ!

(ಸಾಧಾರ)



## ಜ್ಞಾನನಿಧಿ

### ವಿದ್ಯಾರ್ಥಿ ಅಂಕಣ

# ಅಗಾಧ ಶಕ್ತಿಯ ಮನುಷ್ಯರು

- ಟೀಕಲ್ ಗೋಪಾಲಕೃಷ್ಣ

ಈಜಿಪ್ಟಿನ ಸುಲ್ತಾನನಾಗಿದ್ದ ನಾಸಿರ್‌ನ ಸ್ಮರಣ ಶಕ್ತಿ ಅದ್ಭುತವಾಗಿತ್ತು. ಅವನ ಹತ್ತಿರ ೨೦,೦೦೦ ಗುಲಾಮರಿದ್ದರು. ಸುಲ್ತಾನ್ ನಾಸಿರ್‌ಗೆ ಅವರಲ್ಲಿ ಪ್ರತಿಯೊಬ್ಬನ ಹುಟ್ಟಿದ ಊರು, ಜಾತಿ, ವಯಸ್ಸು, ಅವನನ್ನು ಕೊಂಡ ಸ್ಥಳ, ಸಮಯ ಮತ್ತು ಅವನಿಗಾಗಿ ಕೊಟ್ಟ ಹಣ ಎಲ್ಲಾ ನೆನಪಿನಲ್ಲಿರುತ್ತಿತ್ತು.

ಪ್ರಾಚೀನ ಗ್ರಂಥಗಳಲ್ಲಿ ಭೋಜರಾಜನ ದರಬಾರಿನಲ್ಲಿದ್ದ ಶ್ರುತಿಧರ್ ಎಂಬ ಆಸ್ಥಾನಿಕನ ವರ್ಣನೆ ಬರುತ್ತದೆ. ಅವನ ಸ್ಮರಣಶಕ್ತಿ ಎಷ್ಟಿತ್ತೆಂದರೆ ಅವನು ಒಂದು ಘಡಿ (೨೪ ನಿಮಿಷಗಳು)ವರೆಗೆ ಆಲಿಸಿದ ಯಾವುದೇ ಪ್ರಸಂಗವನ್ನು ಆಗಿಂದಾಗ ಅಕ್ಷರಶಃ ಪುನರಾವರ್ತಿಸಬಲ್ಲವನಾಗಿದ್ದ.

ದಕ್ಷಿಣ ಆಫ್ರಿಕಾದ ಫೀಲ್ಡ್ ಮಾರ್ಷಲ್ ಜನರಲ್ ಸ್ಮಟ್ಸ್ ಸಾಹಿತ್ಯಾನುರಾಗಿಯಾಗಿದ್ದರು. ಅವರ ಹತ್ತಿರ ಸುಮಾರು ಹತ್ತು ಸಾವಿರ ಪುಸ್ತಕಗಳ ಒಂದು ದೊಡ್ಡ ಸಂಗ್ರಹವೇ ಇತ್ತು. ಸ್ಮಟ್ಸ್ ಅವರು ತಮ್ಮಲ್ಲಿನ ಯಾವುದೇ ಪುಸ್ತಕದಲ್ಲಿನ ಪುಟ ಸಂಖ್ಯೆ ಮತ್ತು ಅದರಲ್ಲಿನ ವಿವರಣೆಯನ್ನು ತಕ್ಷಣ ನೀಡಬಲ್ಲವರಾಗಿದ್ದರು.

ಜರ್ಮನಿಯ ಮ್ಯೂನಿಕ್ ನಗರದ ರಾಷ್ಟ್ರೀಯ ಪುಸ್ತಕಾಲಯದ ನಿರ್ದೇಶಕ ಜೋಸೆಫ್ ಬರ್ನ್‌ಬರ್ಡ್ ಡೋಕನ್ ಅವರಿಗೆ ಪ್ರಪಂಚದ ೨೦ ಭಾಷೆಗಳು ಬರುತ್ತಿದ್ದವು. ಅವುಗಳ ಪೈಕಿ ಒಂಭತ್ತು ಭಾಷೆಗಳ ಮೇಲೆ ಪ್ರಭುತ್ವವಿತ್ತು. ಜೋಸೆಫ್ ಅವರು ಪತ್ರವ್ಯವಹಾರ ನಡೆಸಲು ತಲಾ ಒಂದರಂತೆ ಒಂಭತ್ತು ಭಾಷೆಗಳನ್ನು ಬಲ್ಲ ಒಂಭತ್ತು ಸಹಾಯಕರನ್ನು ನಿಯಮಿಸಿಕೊಂಡಿದ್ದರು. ಜೋಸೆಫ್ ಈ ಒಂಭತ್ತು ಜನರಿಂದ ಒಂದೇ ಸಲಕ್ಕೆ ಒಂಭತ್ತು ಭಾಷೆಗಳಲ್ಲಿ ಉತ್ತರ ಬರೆಸುತ್ತಿದ್ದರು.

# ಜ್ಞಾನನಿಧಿ

ಅವರು ಇಡೀ ಬೈಬಲ್ ಅನ್ನು ಜ್ಞಾಪಕದಿಂದ ಹೇಳಬಲ್ಲವರಾಗಿದ್ದರು.

ಪ್ರಖ್ಯಾತ ಲೇಖಕ ಟೀ.ಈ. ಲಾರೆನ್ಸ್‌ರ ಪ್ರಸಿದ್ಧ ಪುಸ್ತಕ 'ದಿ ಸಿಕ್ಸ್ ಪಿಲ್ಲರ್ಸ್ ಆಫ್ ವಿಸ್‌ಡಮ್'ನ ಪೂರ್ತಿ ಹಸ್ತಪ್ರತಿ ಕಳೆದು ಹೋಯಿತು. ಆದರೆ ಅವರು ತಮ್ಮ ಸ್ಮರಣಶಕ್ತಿಯಿಂದ ಆ ಪುಸ್ತಕವನ್ನು ಮತ್ತೆ ಬರೆದರು.

ಒಮ್ಮೆ ಡೆನ್‌ಮಾರ್ಕಿನ ದಿ ಹೇಗ್ ನಗರದ ಒಂದು ದೊಡ್ಡ ಬ್ಯಾಂಕಿಗೆ ಬೆಂಕಿ ಹತ್ತಿಕೊಂಡು ಅಲ್ಲಿನ ಎಲ್ಲ ದಾಖಲೆಗಳು ಉರಿದು ಭಸ್ಮವಾದವು. ಮಾರನೇ ದಿನ ಅಲ್ಲಿ ಅಕೌಂಟ್ ಇಟ್ಟ ಜನರು ಬಂದು ತಮ್ಮ ಹಣ ಕೇಳಲು ಪ್ರಾರಂಭಿಸಿದರು. ಅಂತಹ ಪರಿಸ್ಥಿತಿಯಲ್ಲಿ ಅವರಿಗೆ ಹಣ ನೀಡುವುದು ಹೇಗೆ? ಆಗ ಆ ಬ್ಯಾಂಕಿನಲ್ಲಿ ಕೆಲಸ ಮಾಡುತ್ತಿದ್ದ ಒಬ್ಬ ನೌಕರ ಈ ಸಮಸ್ಯೆಯನ್ನು ಪರಿಹರಿಸಿಬಿಟ್ಟ. ಅವನು ೨೦೦೦ ಗ್ರಾಹಕರ ಅಕೌಂಟಿನಲ್ಲಿ ಎಷ್ಟು ಹಣ ಉಳಿದಿದೆ ಎನ್ನುವುದನ್ನು ತನ್ನ ಸ್ಮರಣ ಶಕ್ತಿಯಿಂದ ಸರಿಯಾಗಿ ಹೇಳಿದ. ಅವನ ಹೆಸರು ಬರ್ಥೋಲ್ಡ್ ನೀವ್‌ಹರ್.

ಇಂಗ್ಲೆಂಡಿನ ಫೀಲ್ಡಿಂಗ್ ಹುಟ್ಟಿದಾರಭ್ಯ ಕುರುಡನಾಗಿದ್ದ. ಈತನಿಗೆ ಹತ್ತುಸಾವಿರ ಜನರ ಹೆಸರು, ವಿಳಾಸ ಹಾಗೂ ಅವರ ಕಸಬಿನ ಬಗ್ಗೆ ಜ್ಞಾಪಕವಿತ್ತು. ಅವರನ್ನು ಧ್ವನಿಯಿಂದಲೇ ಗುರುತಿಸಿಬಿಡುತ್ತಿದ್ದ. ಅದೇ ಪ್ರಕಾರ ಇಂಗ್ಲೆಂಡಿನ ಒಬ್ಬ ಪೋಸ್ಟ್‌ಮನ್ ಮಾಟುಗುನಸ್ ೨೫ ವರ್ಷಗಳವರೆಗೆ ಮನೆ-ಮನೆಗೆ ಹೋಗಿ ಟಪಾಲು ಹಂಚುತ್ತಿದ್ದ. ಇವನೂ ಆಜನ್ಮ ಕುರುಡ. ಯಾವ ತಪ್ಪು ಮಾಡದೆ ಸರಿಯಾಗಿ ಪತ್ರಗಳನ್ನು ಹಂಚುತ್ತಿದ್ದ.

ಫ್ರಾನ್ಸ್ ದೇಶದ ಪ್ರಧಾನಮಂತ್ರಿ ಮಿಸ್ಟರ್ ಲಿಯಾನ್ ಮೆಂಬ್ರೇಜ್‌ರ ಸ್ಮರಣಶಕ್ತಿ ಅದ್ಭುತವಾಗಿತ್ತು. ವಿರೋಧಿ ಪಕ್ಷದವರು ಲೋಕಸಭೆಯಲ್ಲಿ ಮಾಡಿದ ಭಾಷಣದ ಒಂದೊಂದು ಶಬ್ದವೂ ಅವರಿಗೆ ಜ್ಞಾಪಕವಿರುತ್ತಿತ್ತು. ಅಲ್ಲಿ ಮಂಡಿಸಲಾಗಿದ್ದ ಹಿಂದಿನ ಬಡ್ಜೆಟ್‌ನ ಒಂದೊಂದು ಲೆಕ್ಕವನ್ನೂ ಅವರು ಸರಿಯಾಗಿ ಹೇಳುತ್ತಿದ್ದರು.

ಇಂಗ್ಲೆಂಡಿನ ಮಿ. ಲೆಸ್‌ಲೀ ಅವರಿಗೆ ತಮ್ಮ ದೇಶದಲ್ಲಿ ನೂರಐವತ್ತು ವರ್ಷಗಳ ಹಿಂದೆ ನಡೆದ ಯಾವುದೇ ಕ್ರೀಡೆಯ ವಿವರಗಳನ್ನು ಕರಾರುವಾಕ್ಕಾಗಿ ಹೇಳುವಷ್ಟು ಜ್ಞಾಪಕಶಕ್ತಿಯಿತ್ತು.

ಲ್ಯೂಮಿಥಿನ್ ಎಂಬ ಒಬ್ಬ ಬಾಲಕ ಪ್ರಪಂಚದ ಯಾವುದೇ ಭಾಷೆಯಾಗಲಿ, ಅದರಲ್ಲಿ ಪದ್ಯ ಅಥವಾ ಗದ್ಯವನ್ನು ಒಂದು ಸಲ ಆಲಿಸಿದರೆ ಸಾಕು, ಅದೇ ಭಾಷೆಯಲ್ಲಿ ಯಾವ ತಪ್ಪೂ ಇಲ್ಲದೆ ಪುನರುಚ್ಚರಿಸಬಲ್ಲವನಾಗಿದ್ದ.

ನಿಜವಾಗಿಯೆಂದರೆ ಅದ್ಭುತ ಸ್ಮರಣಶಕ್ತಿಗೂ ಬುದ್ಧಿಗೂ ಯಾವ ಸಂಬಂಧವೂ ಇಲ್ಲ. ಅತ್ಯಂತ ಕುಶಾಗ್ರ ಬುದ್ಧಿಯುಳ್ಳ ದಾರ್ಶನಿಕರಿಗೆ ಹಾಗೂ ವಿಜ್ಞಾನಿಗಳಿಗೆ ಮರೆವು ರೋಗ ಇರುತ್ತೆ. ಅದೇ ಅದ್ಭುತ ಸ್ಮರಣಶಕ್ತಿಯುಳ್ಳವರ ಬುದ್ಧಿ ಕೆಳಮಟ್ಟದಲ್ಲೂ ಇರಬಹುದು. ರಷ್ಯಾದ ಪತ್ರಕರ್ತ ಅಲೆಕ್ಸಾಂಡರ್ ಲ್ಯೂರಿಯಾನಿಗೆ ಪೂರ್ತಿ ರೈಲ್ವೆ ಟೈಂ ಟೇಬಲ್ ಜ್ಞಾಪಕವಿರುತ್ತಿತ್ತು. ಆದರೆ ಅವನ ಬುದ್ಧಿಮತ್ತೆ ಸಾಧಾರಣ ಮನುಷ್ಯನಿಗಿಂತ ಕಮ್ಮಿಯಿತ್ತು.

ಸ್ಮರಣಶಕ್ತಿಯು ರಹಸ್ಯಮಯವಾಗಿಯೇ ಇದೆ. ರಹಸ್ಯವನ್ನು ಬಿಡಿಸಲು ವಿಜ್ಞಾನಿಗಳು ಸೆಣಸಾಡುತ್ತಿದ್ದಾರೆ.

## ಜ್ಞಾನನಿಧಿ

# ಇಸಿಜಿ ಬಗೆಗೆ ಒಂದಿಷ್ಟು....

- ಹಾಲಸ್ವಾಮಿ ಎಮ್.ಮಲ್ಲನಗೌಡರ

**ರೋ**ಗಿ ಮಲಗಿರುವ ಮಂಚದ ಪಕ್ಕದ ಮೇಜಿನ ಮೇಲೆ ಪುಟ್ಟ ಟೆಲಿವಿಜನ್‌ನಂತಹುದೊಂದು ಯಂತ್ರ. ಅದಕ್ಕೊಂದು ಚಿಕ್ಕ ಪರದೆ. ಪರದೆಯ ಮೇಲೆ ಸದಾ ಏರಿಳಿಯುವ ಅನೇಕ ರೇಖೆಗಳು. ವೈದ್ಯರ ಗಮನವೆಲ್ಲ ಈ ರೇಖೆಗಳತ್ತ. ಆಧುನಿಕ ವೈದ್ಯವಿಜ್ಞಾನದಲ್ಲಿ ಹೃದ್ರೋಗಗಳ ಚಿಕಿತ್ಸೆಯಲ್ಲಿ ಅತ್ಯುಪಯುಕ್ತವಾಗಿ ಪರಿಣಮಿಸಿರುವ ಈ ಪುಟ್ಟ ಯಂತ್ರವೇ ಇಸಿಜಿ.

ಇಸಿಜಿ ಎಂಬುದು 'ಎಲೆಕ್ಟ್ರೋ ಕಾರ್ಡಿಯೋಗ್ರಾಮ್' ಎಂಬ ಪದಸಮುಚ್ಚಯದ ಸಂಕ್ಷಿಪ್ತ ರೂಪ. ಸಾಧಾರಣ ರೇಡಿಯೋ ಗಾತ್ರದ ಈ ಪುಟ್ಟ ಎಲೆಕ್ಟ್ರಾನಿಕ್ ಯಂತ್ರ ಇಂದು ಹೆಚ್ಚು ಕಡಿಮೆ ಎಲ್ಲ ಆಸ್ಪತ್ರೆಗಳಲ್ಲೂ ನೋಡಸಿಗುತ್ತದೆ.

ಇಸಿಜಿಯ ಕಾರ್ಯವಿಧಾನವನ್ನು ತಿಳಿಯಲು ಈ ಕೆಳಗಿನ ಹಲವು ಸಂಗತಿಗಳನ್ನು ಅರಿಯುವುದು ಅವಶ್ಯ. ಆರೋಗ್ಯವಂತ ಮಾನವನ ಹೃದಯ ಪ್ರತಿ ನಿಮಿಷಕ್ಕೆ ಸರಾಸರಿ ಎಪ್ಪತ್ತೆರಡು ಸಲ ಮಿಡಿಯುತ್ತಿದೆಂಬುದು ಸರಿಯಷ್ಟೆ? ಅದಕ್ಕೆ ಹೃದಯದ ಸ್ನಾಯುಗಳಲ್ಲುಂಟಾಗುವ ವಿದ್ಯುದಂಶಗಳಲ್ಲಿನ ಸೂಕ್ಷ್ಮ ಬದಲಾವಣೆಗಳೇ ಕಾರಣ. ಮಾನವನ ದೇಹ ವಿದ್ಯುತ್ತಿನ ಉತ್ತಮ ವಾಹಕವಾದುದರಿಂದ, ಹೃದಯದ ಸ್ನಾಯುಗಳಲ್ಲಿ ಪ್ರತಿ ಬಾರಿ ಉಂಟಾಗುವ ವಿದ್ಯುಂಶಗಳಲ್ಲಿನ ಬದಲಾವಣೆಗಳು ಹೃದಯದ ಸ್ನಾಯುಗಳಿಗೆ ಮಾತ್ರ ಸೀಮಿತವಾಗಿರದೆ ಅಲೆಗಳ ರೂಪದಲ್ಲಿ ದೇಹದ ಉದ್ದಗಲಕ್ಕೂ ಪ್ರವಹಿಸುತ್ತಿವೆ. ಸೂಕ್ತವಾದ ವಿದ್ಯುತ್ ತಂತಿ (Electrical leads) ಗಳನ್ನು ದೇಹದ ನಿರ್ದಿಷ್ಟ ಭಾಗಗಳಿಗೆ ಜೋಡಿಸಿ ಈ ವಿದ್ಯುದಲೆಗಳನ್ನು ಇಸಿಜಿ ಯಂತ್ರದ ಪರದೆಯ ಮೇಲೆ ವಕ್ರರೇಖೆಗಳ ರೂಪದಲ್ಲಿ ವೀಕ್ಷಿಸಬಹುದು ಅಥವಾ ವಿಶಿಷ್ಟವಾದ ಕಾಗದದ ಮೇಲೆ ದಾಖಲಿಸಬಹುದು. ಈ ರೀತಿ ಪಡೆದ ದಾಖಲೆಯನ್ನೇ 'ಇಲೆಕ್ಟ್ರೋ ಕಾರ್ಡಿಯೋಗ್ರಾಮ್' ಎನ್ನುತ್ತಾರೆ (ಇಸಿಜಿ ಯಂತ್ರವನ್ನು ಇಲೆಕ್ಟ್ರೋ ಕಾರ್ಡಿಯೋಗ್ರಾಫ್ ಎನ್ನುತ್ತಾರೆ). ಆರೋಗ್ಯವಂತ ವ್ಯಕ್ತಿಗಳ ಇಸಿಜಿ ಹೆಚ್ಚೂ ಕಡಿಮೆ ಮೇಲೆ ತೋರಿಸಿದ ರೇಖೆಗಳ ರೂಪದಲ್ಲಿರುತ್ತವೆ. (ಇಲ್ಲಿ ಒಂದು ಅಲೆಯನ್ನು ಮಾತ್ರ ತೋರಿಸಲಾಗಿದೆ)ಆದರೆ ಹೃದಯದಲ್ಲಿ ಯಾವುದೇ ವಿಧದ ನ್ಯೂನತೆಗಳಿದ್ದಲ್ಲಿ ಅವುಗಳಿಗನುಗುಣವಾಗಿ ಇಸಿಜಿ ರೇಖೆಗಳೂ ಬದಲಾಗುತ್ತವೆ. ಹೀಗಾಗಿ ಇಸಿಜಿಯನ್ನು ವೀಕ್ಷಿಸಿದ ತಜ್ಞ ವೈದ್ಯರು ಹೃದಯದಲ್ಲಿರಬಹುದಾದ ನ್ಯೂನತೆಗಳನ್ನು ಅತ್ಯಂತ ಶೀಘ್ರವಾಗಿಯೂ ನಿಖರವಾಗಿಯೂ ಕಂಡುಹಿಡಿಯಬಲ್ಲರು.

ಹೀಗೆ ಇಸಿಜಿ ಹೃದ್ರೋಗಗಳ ಚಿಕಿತ್ಸೆಯಲ್ಲಿ ಅತ್ಯಂತ ಸರಳವೂ, ನಿಖರ ಮಾಹಿತಿದಾಯಕವೂ ಆದ ಅತ್ಯುಪಯುಕ್ತ ಪರಿಕರವಾಗಿ ಪರಿಣಮಿಸಿದ್ದು ಆ ಯಂತ್ರದ ಅನೇಕ ಸುಧಾರಿಸಿದ ಆವೃತ್ತಿಗಳು ದಿನೇ ದಿನೇ ಬಳಕೆಗೆ ಬರುತ್ತಿವೆ.

## ಜ್ಞಾನನಿಧಿ

# ವಿಚಿತ್ರ ಸಮಸ್ಯೆ

ವಿಜ್ಞಾನವು ಪ್ರಗತಿಯ ಜೊತೆಜೊತೆಗೆ ತನ್ನದೇ ಆದ ಸಮಸ್ಯೆಗಳನ್ನು ತಂದೊಡ್ಡಿದೆ. ಹಳ್ಳಿಗಳು ಭಾರತದ ಬೆನ್ನೆಲುಬಾದರೂ ರೈತನ ತುಂಡುನೆಲ ಟ್ರ್ಯಾಕ್ಟರ್, ಬುಲ್‌ಡೋಜರ್‌ನ ಅಳವಿಗೆ ಬರುವಂಥದ್ದಲ್ಲ, ಹಾಗಾಗಿ ತನ್ನ ಹೊಲವನ್ನು ಉಳಲು ಆತ ಹಳೆಯ ನೇಗಿಲು, ಸಾಗಿಸಲು ತಾತ ಮುತ್ತಾತನ ಕಾಲದ ಎತ್ತಿನ ಗಾಡಿಗಳನ್ನೇ ಉಪಯೋಗಿಸುತ್ತಾನೆ. ಹಾಲಿನ ಇಳುವರಿ ಹೆಚ್ಚಿಸಲು ಮಿಶ್ರತಳಿಯ ಹಸುಗಳ ಪಾಲನೆಗೆ ಹೆಚ್ಚು ಒತ್ತು ಕೊಟ್ಟಿದೆ ವಿಜ್ಞಾನ. ೧೯೬೦ ರಿಂದೀಚೆಗೆ ಶೈತ್ಯೀಕರಿಸಿದ ವೀರ್ಯವನ್ನು ಉಪಯೋಗಿಸಿ ಪಡೆದ ಹಾಲ್‌ಸ್ಟೇನ್ ಹಾಗೂ ಜರ್ಸಿ ತಳಿಗಳು ಜನಪ್ರಿಯವಾಗಿವೆ. ಆದರೆ ಈ ತಳಿಗಳ ಜಾತಿಯಲ್ಲಿ ಬೆನ್ನ ಮೇಲಿದ್ದ ಎತ್ತರದ ಹಿಣಿಲು (Hump) ಕ್ರಮೇಣ ಗುಂಡಾಗಿ, ಬರಬರುತ್ತ ಚಪ್ಪಟೆಯಾಗಿದೆ. ನೆಲವನ್ನುಳಲು ಉಪಯೋಗಿಸುವ ನೊಗ, ನೇಗಿಲುಗಳನ್ನು ಶತಮಾನಗಳಿಂದಲೂ ಎತ್ತುಗಳ ಎತ್ತರದ ಹಿಣಿಲನ್ನು ಗಮನದಲ್ಲಿಟ್ಟೇ ತಯಾರಿಸಲಾಗಿದೆ. ಆದರೆ ಮಿಶ್ರತಳಿಗಳ ಉತ್ಪಾದನೆಯ ಭರಾಟೆಯಲ್ಲಿ ಸ್ಥಳೀಯ ತಳಿಗಳು ಕಡಿಮೆಯಾಗುತ್ತಿವೆ. ಹಿಣಿಲು ಹೊಂದದ ಈ ಎತ್ತುಗಳು ನೊಗ ನೇಗಿಲು ಹೊರಲು ಅನರ್ಹವಾಗಿವೆ. ಹೀಗೆ ಭಾರತದ ಬಡ ರೈತ ಸಂದಿಗ್ಧಕ್ಕೆ ಸಿಕ್ಕಿದ್ದಾನೆ.

ಸಂಗ್ರಹ: **ಟಿ.ಎಸ್. ಲಲಿತ**

## ಶೋಧ-ಶೋಧಕ

ನಾವಿಂದು ಪ್ರಯೋಜನ ಪಡೆಯುತ್ತಿರುವ ಅನೇಕ ಯಂತ್ರೋಪಕರಣಗಳನ್ನು ಶೋಧಿಸಿದವರಿಗೆ ಮನುಕುಲ ಚಿರಋಣಿಯಾಗಿರಬೇಕು. ಇಲ್ಲಿ ಅಂಥ ಹಲವು ಶೋಧಗಳು ಹಾಗೂ ಶೋಧಕರ ಕುರಿತು ಮಾಹಿತಿ ಇದೆ.

| ಶೋಧ | ಶೋಧಕ |
|---|---|
| ೧. ಕಂಪ್ಯೂಟರ್ | -ಅಮೆರಿಕದ ಹೋವಾರ್ಡ್ ಆಢ್ಗನ್ (೧೯೩೭) |
| ೨. ಟೈಪ್‌ರೈಟರ್ | -ಅಮೆರಿಕದ ಕ್ರಿಸ್ಟೋಫರ್ (೧೯೦೮) |
| ೩. ಮೋಟಾರ್‌ಸೈಕಲ್ | -ಇಂಗ್ಲೆಂಡಿನ ಎಡ್‌ವರ್ಡ್ ಬಟ್ಲರ್ (೧೮೮೪) |
| ೪. ದೂರವಾಣಿ | -ಅಮೆರಿಕದ ಅಲೆಕ್ಸಾಂಡರ್ ಗ್ರಹಾಂಬೆಲ್ (೧೮೭೬) |
| ೫. ಏರ್‌ಕಂಡೀಶನರ್ | -ಅಮೆರಿಕದ ವಿಲ್ಲಿಸ್ ಕ್ಯಾರಿಯನ್ (೧೯೧೧) |
| ೬. ಹೆಲಿಕಾಪ್ಟರ್ | -ಇಟಲಿಯ ಅಪ್ಪಾನಿಯೊ (೧೯೩೦) |
| ೭. ಥರ್ಮಾಮೀಟರ್ | -ಇಟಲಿಯ ಗೆಲಿಲಿಯೋ (೧೫೯೩) |
| ೮. ಪಿಸ್ತೂಲ್ | -ಅಮೆರಿಕದ ಸ್ಯಾಮ್ಯುಯೆಲ್ ಕೋಲ್ಟ್ (೧೮೩೫) |
| ೯. ಸೈಕಲ್ | -ಸ್ಕಾಟ್‌ಲಂಡಿನ ಮ್ಯಾಕ್‌ಮಿಲನ್ (೧೮೩೯) |
| ೧೦. ಹೊಲಿಗೆ ಯಂತ್ರ | -ಅಮೆರಿಕದ ಎಲಿಯಾಸ್ ಹೋವ್ (೧೮೪೬) |
| ೧೧. ಟಯರ್ | -ಸ್ಕಾಟ್‌ಲಾಂಡಿನ ಜಾನ್ ಪಾಯ್ಡ್ ಡನ್ಲಪ್ (೧೮೮೮) |
| ೧೨. ವೆಲ್ಡಿಂಗ್ ಯಂತ್ರ | -ಅಮೆರಿಕದ ಎಲಿಸಾ ಸ್ಯಾಂಸನ್ (೧೮೭೭) |

ಸಂಗ್ರಹ: ಕು.ಸುಚೇತನಾ ಡಿ.ಎಸ್

# ನಿಮಗಿದು ಗೊತ್ತೆ?

- ವೆಂಕಟೇಶ ಗಂಗಾವತಿ

ನಮ್ಮ ದೇಶದ ಅಂಚೆ ಇಲಾಖೆ ಪ್ರಪಂಚದಲ್ಲಿಯೇ ದೊಡ್ಡದು. ಇಲ್ಲಿ ಎಂಬತ್ತೈದು ಕೋಟಿ ಜನರಿಗಾಗಿ ಒಂದೂವರೆ ಲಕ್ಷ ಅಂಚೆ ಕಚೇರಿಗಳು ಇವೆ. ಆದರೆ ನಮ್ಮ ದೇಶಕ್ಕಿಂತಲೂ ಹೆಚ್ಚು ಜನಸಂಖ್ಯೆ ಇರುವ ಚೀನಾದಲ್ಲಿ ಬರಿ ಒಂದು ಲಕ್ಷ ಅಂಚೆ ಕಚೇರಿಗಳಿವೆ. ಅಮೇರಿಕಾವು ವಿಸ್ತೀರ್ಣದಲ್ಲಿ ಭಾರತಕ್ಕಿಂತ ದೊಡ್ಡದಾಗಿದ್ದರೂ ಅಲ್ಲಿ ಕೇವಲ ಎಪ್ಪತ್ತೈದು ಸಾವಿರ ಅಂಚೆ ಕಚೇರಿಗಳಿವೆ.

ಎಂಭತ್ತೈದು ಕೋಟಿ ಜನಸಂಖ್ಯೆ ಇರುವ ನಮ್ಮ ದೇಶ ಭಾರತದಲ್ಲಿ ಕೇವಲ ೧೮೦ ವಿಶ್ವವಿದ್ಯಾಲಯಗಳಿವೆ. ಅವುಗಳಲ್ಲಿಯ ಐದು ಸಾವಿರ ಮಹಾವಿದ್ಯಾಲಯಗಳಲ್ಲಿ ೫೦ ಲಕ್ಷ ವಿದ್ಯಾರ್ಥಿಗಳು ಶಿಕ್ಷಣ ಪಡೆಯುತ್ತಿದ್ದಾರೆ. ಈ ವಿಶ್ವವಿದ್ಯಾಲಯಗಳಿಂದ ನಡೆಯುವ ಪರೀಕ್ಷೆಗಳಲ್ಲಿ ಬಾಹ್ಯ ಅಭ್ಯರ್ಥಿಗಳಾಗಿ ಪರೀಕ್ಷೆಗೆ ಕೂಡುವವರ ಸಂಖ್ಯೆ ಕೇವಲ ಐದು ಲಕ್ಷ. ಇತರ ದೇಶಗಳನ್ನು ನೋಡಿದರೆ ಈ ಸಂಖ್ಯೆ ಅತ್ಯಂತ ಕಡಿಮೆ.

ನೆದರ್‌ಲ್ಯಾಂಡಿನ ಎರಡು ಮೂರರಷ್ಟು ಭಾಗವು ಸಮುದ್ರ ಮಟ್ಟಕ್ಕಿಂತ ಕೆಳಗಿದೆ. ಅದರ ರಾಜಧಾನಿ ಆಮ್ಸ್ಟರ್‌ಡ್ಯಾಮ್ ನಗರವನ್ನು ಕಾಲುವೆ ಮತ್ತು ಸೇತುವೆಗಳ ನಗರವೆಂದು ಕರೆಯಲಾಗುತ್ತವೆ. ಈ ನಗರದಲ್ಲಿ ನಾಲ್ಕುನೂರಕ್ಕಿಂತಲೂ ಹೆಚ್ಚು ಕಾಲುವೆಗಳಿದ್ದು ಅವುಗಳ ಮೇಲೆ ಒಂದು ಸಾವಿರಕ್ಕಿಂತಲೂ ಹೆಚ್ಚು ಸೇತುವೆಗಳಿವೆ.

# ಜ್ಞಾನನಿಧಿ

ಪ್ರಪಂಚದಲ್ಲಿ ಎಲ್ಲಕ್ಕಿಂತಲೂ ಹೆಚ್ಚು ಗೋಡಂಬಿಯನ್ನು ನಮ್ಮ ದೇಶದಲ್ಲಿ ಬೆಳೆಯಲಾಗುತ್ತಿದೆ. ಅವುಗಳನ್ನು ಸುಮಾರು ಐವತ್ತು ದೇಶಗಳಿಗೆ ರಫ್ತು ಮಾಡಲಾಗುತ್ತಿದೆ. ಅದರಲ್ಲಿ ಶೇಕಡ ೪೦ರಷ್ಟು ಗೋಡಂಬಿಯನ್ನು ಅಮೆರಿಕಾವೊಂದೇ ಕೊಂಡುಕೊಳ್ಳುತ್ತಿದೆ. ೧೯೯೪-೯೫ರಲ್ಲಿ ನಮ್ಮ ದೇಶದಿಂದ ೧೨೪೨ ಕೋಟಿ ರೂಪಾಯಿಗಳ ಗೋಡಂಬಿಯನ್ನು ನಿರ್ಯಾತ ಮಾಡಲಾಯಿತು.

ಇಂಗ್ಲೆಂಡು ನಮ್ಮ ದೇಶದ ಬಿಹಾರದಷ್ಟು ಮಾತ್ರ ಇದೆ. ಅಲ್ಲಿ ಜೋಪಾನವಾಗಿಟ್ಟಿರುವ ರಾಷ್ಟ್ರೀಯ ಸ್ಮಾರಕಗಳ ಸಂಖ್ಯೆ ಐದು ಲಕ್ಷ. ಆದರೆ ನಮ್ಮ ಇಡೀ ದೇಶದಲ್ಲಿ ಇಂಥ ಸ್ಮಾರಕಗಳ ಸಂಖ್ಯೆ ಕೇವಲ ೬೦೦೦.

ಈಗ ಪ್ರಪಂಚದಲ್ಲಿ ಎಲ್ಲ ದೇಶಗಳಿಗಿಂತಲೂ ಹೆಚ್ಚು ಹತ್ತಿಯನ್ನು ಚೀನಾ ದೇಶ ಬೆಳೆಯುತ್ತದೆ. ಆದರೆ ಮೊದಲು ಹೆಚ್ಚು ಹತ್ತಿಯನ್ನು ಭಾರತದಲ್ಲಿ ಬೆಳೆಯಲಾಗುತ್ತಿತ್ತು. ಈಗ ನಮ್ಮ ದೇಶ

## ಬ್ರಹ್ಮಪುತ್ರ

ಭಾರತದಲ್ಲಿ ಅತಿ ಉದ್ದವಾದ ಮತ್ತು ಅಗಲವಾದ ನದಿಯೆಂದರೆ ಬ್ರಹ್ಮಪುತ್ರ. ಇದು ೨,೯೦೦ ಕಿ.ಮೀ. ಉದ್ದವಾಗಿದ್ದು ೧೨ ಕಿ.ಮೀ. ಅಗಲವಾಗಿದೆ. ಭೂಗರ್ಭ ಶಾಸ್ತ್ರಜ್ಞರ ಪ್ರಕಾರ ಹಿಮಾಲಯಕ್ಕಿಂತಲೂ ಹಳೆಯದು. ಟಿಬೇಟಿನಲ್ಲಿ ಪಶ್ಚಿಮದಿಂದ ಪೂರ್ವಕ್ಕೆ ಮತ್ತು ಅಸ್ಸಾಮಿನಲ್ಲಿ ಪೂರ್ವದಿಂದ ಪಶ್ಚಿಮಕ್ಕೆ ಹರಿಯುವ ಏಕೈಕ ನದಿ ಇದು. ಪುರಾಣೇತಿಹಾಸಗಳಲ್ಲಿ ಇದಕ್ಕೆ 'ಗಂಡು ನದಿ'ಯೆಂದು ಕರೆಯಲಾಗಿದೆ.

- ಶಿ.ಕಾ. ಬಡಿಗೇರ

# ಜ್ಞಾನನಿಧಿ

ಆರನೆಯ ಕ್ರಮಾಂಕದಲ್ಲಿದೆ. ದೇಶದಲ್ಲಿಯ ಸುಮಾರು ಒಂದೂಮುಕ್ಕಾಲು ಕೋಟಿ ಜನಗಳ ಜೀವನ ಹತ್ತಿ ವ್ಯವಸಾಯವನ್ನೇ ಅವಲಂಬಿಸಿದೆ.

ಉತ್ತರಭಾರತದಲ್ಲಿಯ ಮೊದಲಿನ ಬುಂದೇಲಖಂಡ ಸಂಸ್ಥಾನದ ರಾಜಧಾನಿ ತೆಹರಿ. ಈ ಊರು ಇರುವ ಸ್ಥಾನದಲ್ಲಿ ಆಧುನಿಕ ರೀತಿಯಿಂದ ನಿರ್ಮಿಸಲಾಗಿರುವ ಚಂಡಿಗಡ ನಗರದಂತೆಯೇ ಮತ್ತೊಂದು ನಗರವು ನಿರ್ಮಾಣಗೊಳ್ಳುತ್ತಿದೆ.

ಭಾರತದಲ್ಲಿ ಪ್ರತಿವರ್ಷ ಒಂದು ರೂಪಾಯಿಯ ೪೫ ಕೋಟಿ ನೋಟುಗಳನ್ನು ಮುದ್ರಿಸಲಾಗುತ್ತಿದೆ. ಮತ್ತು ೫೦ ಕೋಟಿ ನಾಣ್ಯಗಳನ್ನು ತಯಾರಿಸಲಾಗುತ್ತಿದೆ.

ಪ್ರಪಂಚದಲ್ಲಿ ಹುಲಿಗಳ ಒಟ್ಟು ಸಂಖ್ಯೆ ಐದು ಸಾವಿರದಿಂದ ಏಳು ಸಾವಿರದವರೆಗೆ. ಇದರಲ್ಲಿ ಭಾರತವೊಂದರಲ್ಲೇ ಇವುಗಳ ಸಂಖ್ಯೆ ೨೭೫೦ರಿಂದ ೩.೨೫೦ರಷ್ಟು.

ಪ್ರಪಂಚದ ಸದ್ಯದ ೫,೦೦೦ ಭಾಷೆ ಮತ್ತು ಮಾತು(ನುಡಿ)ಗಳಲ್ಲಿ ೮೪೫ ಭಾರತದಲ್ಲಿಯೇ ಇವೆ.

ಭಾರತದ ಕೃಷಿ ವಿಜ್ಞಾನಿ ಡಾ. ಎಮ್.ಎಸ್. ಸ್ವಾಮಿನಾಥನ್ ಅವರನ್ನು ಭಾರತದ ಹಸಿರು-ಕ್ರಾಂತಿಯ ಜನಕನೆಂದು ಕರೆಯಲಾಗಿದೆ. ಅವರು ಗೋದಿ, ಭತ್ತ, ಸಜ್ಜೆ, ಜೋಳ ಮತ್ತು ಗೋವಿನ ಜೋಳದ ಸಂಕರ ತಳಿಗಳನ್ನೂ ವಿಕಸಿತಗೊಳಿಸಿದ್ದಾರೆ.

ಸೀಖರ ಗುರು ಗುರುಗೋವಿಂದ ಸಿಂಹ ಅವರ ಸ್ಮೃತಿಯಲ್ಲಿ ಮಾಡಿದ ರಾಜಮಾರ್ಗವು ೬೪೦ ಕಿಲೋ ಮೀಟರಿನಷ್ಟು ಉದ್ದವಿದೆ. ಇದು ೯೧ ಸ್ಥಾನಗಳನ್ನು ಸಂಧಿಸುತ್ತದೆ. ಗುರುಗೋವಿಂದ ಸಿಂಹ ಅವರು ೧೭೦೫ ರಲ್ಲಿ ಈ ಸ್ಥಾನಗಳ ಮೂಲಕ ರಣಯಾತ್ರೆಯನ್ನು ಪ್ರಾರಂಭಿಸಿದ್ದರು.

## ರೈಲ್ವೆ ಸಿಗ್ನಲ್ ಹುಟ್ಟಿದ್ದು ಹೀಗೆ

ಹತ್ತೊಂಭತ್ತನೆಯ ಶತಮಾನದ ಮಧ್ಯಭಾಗದಲ್ಲಿ ಫ್ರಾನ್ಸ್ ದೇಶದಲ್ಲಿ ರೈಲ್ವೆ ಸೇವೆ ಪ್ರಾರಂಭವಾದಾಗ ಮಾರ್ಗ ಸೂಚಕಗಳಾದ ಸಿಗ್ನಲ್ ಅನ್ನು ಕಂಬವೇರಿ ಕೆಳಮುಖವಾಗಿ ಬೀಳಿಸುತ್ತಿದ್ದರು. ಸಿಗ್ನಲ್ ಕೋಣೆಯಿಂದ ದೂರದ ಸಿಗ್ನಲ್ ಕಂಬದವರೆಗೂ ಹೋಗುವುದು. ನಂತರ ಅದರ ಮೇಲೇರಿ ಬೀಳಿಸುವುದು ಆ ಕೆಲಸ ಮಾಡುತ್ತಿದ್ದವನಿಗೆ ತೊಂದರೆದಾಯಕವೆನಿಸಿತು. ಅದಕ್ಕವನು ಸಿಗ್ನಲ್‌ಗೆ ಭಾರವಾದ ವಸ್ತುವನ್ನು ಕಟ್ಟಿ ಅದಕ್ಕೊಂಡು ತಂತಿ ಬಿಗಿದು, ಆ ತಂತಿಯನ್ನು ತನ್ನ ಕೋಣೆಗೆ ಕಟ್ಟಿಕೊಂಡು ಸಿಗ್ನಲ್ ಮಾಡಬೇಕಾದಾಗಲೆಲ್ಲಾ ತಂತಿ ಎಳೆದು ಸಿಗ್ನಲ್ ಬೀಳಿಸುತ್ತಿದ್ದ. ಬಳಿಕ ಮತ್ತೆ ಸರಿಪಡಿಸುತ್ತಿದ್ದ. ಮುಂದೊಂದು ದಿನ ಈ ಸೋಮಾರಿಯ ಈ ವ್ಯವಸ್ಥೆ ಹಿರಿಯ ಅಧಿಕಾರಿಗಳ ಕಿವಿಗೆ ಬಿತ್ತು. ಆಮೇಲೆ ಈ ವ್ಯವಸ್ಥೆಯೇ ಆಧುನೀಕರಣಗೊಂಡು ಬೇರೆಲ್ಲೆಡೆ ಬಳಕೆಗೆ ಬಂತು.

- ದ.ರಾ. ಪುರೋಹಿತ

## ಜ್ಞಾನನಿಧಿ

# ನಮ್ಮ ಪ್ರಪಂಚದಲ್ಲೇ.....

ಅತಿ ದೊಡ್ಡ ಸಾಗರ - ಪೆಸಿಫಿಕ್ ಸಾಗರ

ಅತಿ ಆಳದ ಪ್ರದೇಶ - ಪೆಸಿಫಿಕ್ ಸಾಗರದ ಮಾರಿಯಾನಾಸ್ ಕಂದಕ

ಅತಿ ದೊಡ್ಡ ಪರ್ವತ - ಎವರೆಸ್ಟ್(೮೮೪೦ ಮೀಟರ್)

ಅತಿ ದೊಡ್ಡ ಜಲಪಾತ - ವೆನಿಜುಎಲಾದಲ್ಲಿರುವ ಸಾಲ್ಟೋ ಏಂಜಲ್(೯೭೯ ಮೀಟರ್)

ಅತಿ ದೊಡ್ಡ ನದಿಗಳು - ನೈಲ್ (ಅತಿ ಉದ್ದ) ಮತ್ತು ಅಮೆಜಾನ್ (ಅತಿ ಅಗಲ)

ಅತಿ ಚಿಕ್ಕ ನದಿ - ರೋಯೀ ನದಿ (೬೧ ಮೀಟರ್)

ಅತಿ ದೊಡ್ಡ ಮರುಭೂಮಿ - ಸಹಾರಾ

ಅತಿ ಹೆಚ್ಚಿನ ಸದ್ದನ್ನುಂಟು ಮಾಡುವ ಪ್ರಾಣಿ ಅಥವಾ ಜೀವಿ - ನೀಲ ತಿಮಿಂಗಿಲ(೧೮೮ ಡೆಸಿಬಲ್)

ಅತಿ ನಿಧಾನವಾಗಿ ಬೆಳೆಯುವ ಜೀವಿ - ಆಳ ಸಮುದ್ರಗಳಲ್ಲಿರುವ ಕಾಮ್-ಟಿನ್ ಡಾರಿಯಾ ಕ್ಯಾಲಿಸ್ಪಿ ಸೋರ್ಮಿಸ್ (೮ ಮಿಲಿಮೀಟರಿನಷ್ಟು ಬೆಳೆಯಲು ೧೦೦ ವರ್ಷಗಳೇ ಬೇಕಾಗುತ್ತದೆ).

ಅತಿ ದೊಡ್ಡ ಕಣ್ಣನ್ನು ಹೊಂದಿರುವ ಜೀವಿ - ಅಟ್ಲಾಂಟಿಕ್ ಸಾಗರದಲ್ಲಿ ಜೀವಿಸುವ ಜೈಂಟ್ ಸ್ಕಿಡ್. (೧೫ ೩/೪ ಇಂಚು ವ್ಯಾಸ).

ಅತಿ ದೊಡ್ಡ ಸಸ್ತನಿ - ನೀಲ ತಿಮಿಂಗಿಲ.

ಅತಿ ದೊಡ್ಡ ಭೂಚರ ಪ್ರಾಣಿ - ಆಫ್ರಿಕನ್ ಬುಶ್ ಆನೆ.

ಅತಿ ಎತ್ತರದ ಭೂಚರ ಪ್ರಾಣಿ - ಜಿರಾಫೆ.

ಅತಿ ವೇಗವಾಗಿ ಓಡುವ ಭೂಚರ ಪ್ರಾಣಿ - ಚಿರತೆ (ಗಂಟೆಗೆ ೯೬-೧೦೦ ಕಿಲೋ ಮೀಟರು).

ಅತಿ ದೊಡ್ಡ ಪಕ್ಷಿ - ಉತ್ತರ ಆಫ್ರಿಕಾದ ಉಷ್ಟ್ರ ಪಕ್ಷಿ (೨.೭೪ ಮೀ.).

ಅತಿ ಅಗಲವಾದ ರೆಕ್ಕೆಯ ಹರವು ಹೊಂದಿರುವ ಪಕ್ಷಿ - ಆಲ್‌ಬಟ್ರಾಸ್ (೩.೧೫ ಮೀ.).

ಅತಿ ಚಿಕ್ಕ ಪಕ್ಷಿ - ಹಮ್ಮಿಂಗ್ ಬರ್ಡ್ (೨ ೧/೪ ಇಂಚು).

ಅತಿ ವೇಗವಾಗಿ ಹಾರುವ ಪಕ್ಷಿ - ಪೆರೆಗ್ರಿನ್ ಫಾಲ್ಕನ್ (ಸಂಚಾರಿ ಗಿಡುಗ) (೨೭೦ ಕಿ.ಮೀ./ಗಂಟೆ).

ಅತಿ ದೊಡ್ಡ ಕೊಕ್ಕನ್ನು ಹೊಂದಿರುವ ಪಕ್ಷಿ - ಆಸ್ಟ್ರೇಲಿಯನ್ ಪೆಲಿಕನ್ (೧೩ - ೧೮ ೧/೨ ಇಂಚು).

ಜಗತ್ತಿನ ಅತಿ ದೊಡ್ಡ ಗುಮ್ಮಟ - ಅಮೇರಿಕದ ನ್ಯೂ ಆರ್ಲಿಯನ್ಸ್‌ನಲ್ಲಿರುವ ಗುಮ್ಮಟ (೨೦೪ ಮೀ.ಹೊರವ್ಯಾಸ).

ಸಂಗ್ರಹ: ಬಿ. ಕೆ. ವರದರಾಜ

# ಜ್ಞಾನನಿಧಿ

## ಅಳುವ ಗಿಡ 'ಗ್ರೇಂಡ್ಲಿ ಓಸಾ'

ಮನುಷ್ಯನ ಹಾಗೆ ಗಿಡಗಳೂ ಅಳುತ್ತವೆಯೆಂದರೆ ಸುಲಭವಾಗಿ ನಂಬುತ್ತೀರಾ? ಲ್ಯಾಟಿನ್ ಅಮೆರಿಕನ್ ದೇಶಗಳ ಕಾಡುಗಳಲ್ಲಿ ಬೆಳೆಯುವ ಗ್ರೇಂಡ್ಲಿ ಓಸಾ ವರ್ಷವಿಡೀ ಅಳುತ್ತದೆ ಎಂಬುದಂತೂ ಸುಳ್ಳಲ್ಲ.

ಗ್ರೇಂಡ್ಲಿ ಓಸಾದ ಸುಂದರ ಹಾಗೂ ಸಣ್ಣ ಸಣ್ಣ ಹಳದಿ ಹೂಗಳ ಮೇಲೆ ಮುಂಜಾವಿನಿಂದ ರಾತ್ರಿಯವರೆಗೆ ಕೆಂಪು ಹನಿಗಳು ಹೊಳೆಯುತ್ತಿರುತ್ತವೆ ಮತ್ತು ರಾತ್ರಿಯಿಂದ ಮುಂಜಾವಿನವರೆಗೆ ನಿರಂತರವಾಗಿ ಅವು ಕೆಳಗೆ ಬೀಳುತ್ತಿರುತ್ತವೆ. ಸ್ವಲ್ಪವೇ ಗಾಳಿ ಬೀಸಿದರೂ ರಕ್ತಪಾತವಾದಂತೆ ತೋರುತ್ತದೆ.

ವಾಸ್ತವವಾಗಿ ಗ್ರೇಂಡ್ಲಿ ಓಸಾದ ಕಣ್ಣೀರು ಇಂಗಾಲಮೂಲದ ಹಲವಾರು ವಸ್ತುಗಳ ಮಿಶ್ರಣವಾಗಿದ್ದು ಅವು ಒಳಗೇ ಉಳಿದುಕೊಂಡರೆ ಗಿಡಕ್ಕೇ ಗಂಡಾಂತರ. ಹೀಗಾಗಿ ಅಳುವುದು ಅವುಗಳ ಆರೋಗ್ಯಕ್ಕೆ ಒಳ್ಳೆಯದು ಎಂದು ಸಸ್ಯಶಾಸ್ತ್ರಜ್ಞರು ಹೇಳುತ್ತಾರೆ.

-ಗೌರಿಅಭ

## ಬಾಯ್ತುಂಬ ಭೂಗೋಳ

ನಾವೆಲ್ಲಾ ಭೂಗೋಳವನ್ನು ಅಧ್ಯಯನ ಮಾಡಿದವರೆ; ಕೆಲವರು ಪಾಂಡಿತ್ಯವನ್ನು ಸಹ ಪಡೆದವರೆ. ಹಾಗಾದರೆ ಪ್ರಪಂಚದ ಅತ್ಯಂತ ಉದ್ದದ ಈ ಎರಡು ಹೆಸರುಗಳನ್ನು ಓದಲು ಪ್ರಯತ್ನಿಸಿ.

ಮೊದಲನೆಯದು ಪ್ರಪಂಚದಲ್ಲೇ ಅತ್ಯಂತ ಉದ್ದವಾದ ೮೩ ಅಕ್ಷರಗಳುಳ್ಳ ಹೆಸರು ನ್ಯೂಜಿಲೆಂಡಿನ ಒಂದು ಸಣ್ಣ ಗುಡ್ಡಗಾಡಿನದಾಗಿದೆ: Taumatawhakatangihang akoauotamatea Turipu Kakapiki maunga huronu kupo kaiwhenuakitantaha.

ಮಾವೋರಿ ನಿಘಂಟಿನ ಪ್ರಕಾರ ಇದರ ಅರ್ಥ: ಇಡೀ ಪ್ರದೇಶವನ್ನು ಸುತ್ತಿ ಬಳಸಿಬಂದ ಟಮೆಟನು ತನ್ನ ಪ್ರಿಯತಮೆಗಾಗಿ ಕೊಳಲನ್ನೂದಿದ ಬೆಟ್ಟದ ಏರು ಹಾದಿಯ ನೆತ್ತಿ.

ಇದಕ್ಕಿಂತ ಕಡಿಮೆಯಾದ-೪೫ ಅಕ್ಷರಗಳುಳ್ಳ ಒಂದು ಸರೋವರ ಅಮೆರಿಕದ ಮೆಸಾಚುಸೆಟ್ಸ್‌ನ ವೆಬ್‌ಸ್ಟರ್ ಬಳಿ ಇದೆ. ಇದರ ಪೈಕಿ ೧೭ ಅಕ್ಷರಗಳು 'G' ಇಂದ ಕೂಡಿವೆ:

Chargoggagoggmancaauggauggagoggchaubunagun gamaugg.

ನಿಪ್‌ಮಕ್ ಇಂಡಿಯನ್ನರ ಭಾಷೆಯ ಈ ಹೆಸರಿನ ಅರ್ಥ: ಒಂದು ಎಲ್ಲೆಯ ಬಳಿ ಇರುವ ತಟಸ್ಥವಾದ ಮೀನು ಹಿಡಿಯುವ ಪ್ರದೇಶ. ಕೆಲವರು ಈ ರೀತಿ ಸಹ ಭಾಷಾಂತರಿಸುತ್ತಾರೆ: 'ನಿನ್ನ ಬದಿಯಲ್ಲಿ ನೀನು ಮೀನು ಹಿಡಿ, ನನ್ನ ಬದಿಯಲ್ಲಿ ನಾನು ಹಿಡಿಯುತ್ತೇನೆ. ಮಧ್ಯದಲ್ಲಿ ಯಾರೂ ಹಿಡಿಯುವುದಿಲ್ಲ.'

- ಬೋನ್ಸಾಯ್ ಶ್ರೀನಿವಾಸ



# ರಕ್ತದಾನ ಶತಕ....!

ಈತನದು ಇನ್ನೊಂದು ದಾಖಲೆ!

• ಸುರೇಂದ್ರಾಚಾರ್ ಕೊರ್ತಕುಂದಾ

ರಕ್ತದಾನದ ಮಹತ್ವವನ್ನು ಅರಿಯದವರಾರು? ಆದರೆ ಅರಿತರೂ ರಕ್ತದಾನಕ್ಕೆ ಮುಂದಾಗಲು ಹಿಂಜರಿಯುವವರ ಸಂಖ್ಯೆಯದೇ ಮೇಲುಗೈ ಎಂಬುದು · ನೋವುಂಟುಮಾಡುವ ವಿಚಾರ. ಅದೇ ಹೊತ್ತಿಗೆ 'ರಕ್ತದಾನವು ಜೀವದಾನಕ್ಕೆ ಸಮ' ಎಂಬುದನ್ನು ಜನಮನದಲ್ಲಿ ಬಿತ್ತುತ್ತ ಸ್ವತಃ ರಕ್ತದಾನ ಗೈಯುತ್ತ ಇತರರನ್ನೂ ಅದಕ್ಕೆ ಹುರಿದುಂಬಿಸುತ್ತಲಿರುವ ಅಪರೂಪದ ವ್ಯಕ್ತಿಗಳೂ ನಮಗೆ ಕಾಣಸಿಕ್ಕುತ್ತಾರೆ.

ಮುಂಬಯಿಯ ಹರೀಶ್ ಅಂಥ ಅಭಿಮಾನಾಸ್ಪದ ವ್ಯಕ್ತಿ.

ಈವರೆಗೂ ಅವರು 'ರಕ್ತದಾನ ಶತಕ' ಪೂರೈಸಿದ್ದಾರೆಂದರೆ ಖಂಡಿತಕ್ಕೂ ನೀವು ಅಚ್ಚರಿಪಡುತ್ತೀರಿ. ೧೯೭೦ ರಿಂದ ಈವರೆಗೆ ಅವರು ಮೂರು ತಿಂಗಳಿಗೆ ಒಮ್ಮೆಯಂತೆ ಹೆಮ್ಮೆಯಿಂದ ರಕ್ತದಾನ ಮಾಡುತ್ತಲೇ ಬಂದಿದ್ದಾರೆ. ಅವರಿಗೆ ವರ್ಷಕ್ಕೆ ನಾಲ್ಕು ಸಲ ರಕ್ತ ನೀಡುವ ಚಟವೇ ಬೆಳೆದು ಬಿಟ್ಟಿದೆ ಎಂದು ಸಮೀಪವರ್ತಿಗಳು ಚೇಷ್ಟೆ ಮಾಡುವುದೂ ಉಂಟು.

'ಲಿಮ್ಕಾ ದಾಖಲೆ ಪುಸ್ತಕ'ದಲ್ಲಿ ನಮೂದಾಗಿರುವ ಹೆಸರು ಈ ಹರೀಶ್. ದುಡ್ಡಿಗಾಗಿ ರಕ್ತ ಮಾರಿಕೊಳ್ಳುವವರಿಂದ ಏನೆಲ್ಲಾ ಅವಾಂತರಗಳು ಉಂಟಾಗಬಹುದು ಎಂಬುದನ್ನು ಕಣ್ಣಾರೆ ಕಂಡು, ಶುದ್ಧ ರಕ್ತ ಮಾತ್ರವೆ ನಿಜಕ್ಕೂ ಜೀವದಾಯಿ ಎಂದರಿತುಕೊಂಡದ್ದು ೧೯೭೦ ರಷ್ಟು ಹಿಂದೆಯೆ. ಹಾಗೆ ನೋಡಿದರೆ ಅಷ್ಟೇನೂ ವಿದ್ಯಾವಂತ ಅಲ್ಲದ ಹರೀಶ್ ರಕ್ತದಾನದ ವಿಷಯದಲ್ಲಿ ಮಾತ್ರ ರ್‍ಯಾಂಕ್ ಹೋಲ್ಡರ್ ಎಂದೇ ಹೇಳಬೇಕು. ಮಾನವೀಯತೆಯ ದೃಷ್ಟಿಯಿಂದ ರಕ್ತದಾನ ಮಾಡುವವರ ಸಂಖ್ಯೆ ಹೆಚ್ಚಿದರೆ ಖಂಡಿತ ಮಾನವೀಯ ಅನುಕಂಪವುಳ್ಳ ಹೃದಯಗಳ ಸಂಖ್ಯೆ ನೂರ್ಮಡಿಸುತ್ತದೆ ಎಂಬುದು ಹರೀಶರ ನಂಬಿಕೆ. ಭರವಸೆ ಕೂಡ.

ಮೂಲತಃ ಗುಜರಾತ್ ರಾಜ್ಯದವರು ಹರೀಶ್. ಆರ್ಥಿಕ ಕಷ್ಟ-ನಷ್ಟಗಳನ್ನು ಎದುರಿಸಲಾಗದೆಯೇ ಕಂಗೆಟ್ಟ ಇವರ ತಂದೆ ನಂದಲಾಲರನ್ನು ಯಾರೋ ಪುಣ್ಯಾತ್ಮ ಮುಂಬಯಿಗೆ ಕರೆತಂದದ್ದು ಒಂದು ರೀತಿಯಿಂದ ಒಳ್ಳೆಯದೇ ಆಯಿತು. ಮುಂಬಯಿಯಲ್ಲಿ ಪಾಂಡುರಂಗ ವೈಜನಾಥ ಆಠವಲೆ ಎಂಬವರ ಆಧ್ಯಾತ್ಮಿಕ ಮಾರ್ಗದರ್ಶನದಲ್ಲಿ ಮುನ್ನಡೆದ ನಂದಲಾಲ ನಂತರ ಜನರಲ್ ಇನ್ಶೂರೆನ್ಸ್ ಕಂಪನಿಯಲ್ಲಿ ಉದ್ಯೋಗಿಯಾದರು.

ತನ್ನ ಶ್ರೇಯಸ್ಸು ಆಠವಲೆಯವರ ಮಾರ್ಗದರ್ಶನದಿಂದಲೇ ಆದದ್ದು ಎಂಬುದನ್ನು ಮನೆಮಂದಿಗೆಲ್ಲಾ ಬಿಂಬಿಸಿದ ನಂದಲಾಲ ತಮ್ಮ ಮಗ ಕೂಡ ಚಿಕ್ಕಂದಿನಿಂದಲೇ ಸನ್ಮಾರ್ಗ, ಸತ್ಸಂಗಗಳೆಡೆ ಲಕ್ಷ್ಯ ಹರಿಸುವಂತೆ ಮನವೊಲಿಸಿದರು. ಹೆಚ್ಚಿನ ಅಂಕಗಳನ್ನೇನೂ ಪಡೆಯದೆ ಮೆಟ್ರಿಕ್ ಮುಗಿಸಿದ ಹರೀಶ್ ಹದಿಹರೆಯದಲ್ಲಿ ಕಾಲೇಜು ಜೀವನದ ಮೋಜು ಅನುಭವಿಸುವ ಉದ್ದೇಶ ಮಾತ್ರದಿಂದಲೇ ಅಡ್ಮಿಶನ್ ಪಡೆದರು. ಕಾಲೇಜಿನಲ್ಲಿ ಅವರಿರುತ್ತಿದ್ದುದು ಅಭ್ಯಾಸ ವರ್ಗಗಳಲ್ಲಲ್ಲ, ಆಟದ ಮೈದಾನುಗಳಲ್ಲಿ.

ಹೀಗೊಂದು ದಿನ ಮೈದಾನದಲ್ಲೊಬ್ಬ ತಾನು ರಕ್ತದಾನ ಮಾಡಿ ಬಂದುದರ ಕುರಿತು ಹೇಳಿ, ಅದರ ಮಾಹಿತಿಯನ್ನು ವಿವರಿಸಿದ. ಹರೀಶ್‌ಗೆ ಕುತೂಹಲ ಹುಟ್ಟಿತು. ಮರುದಿನವೇ ಕಾಲೇಜಿನಲ್ಲಿ ರಕ್ತದಾನ ಶಿಬಿರ ನಡೆಯಿತು. ಹರೀಶ್ ದಾನಿಗಳ ಪಟ್ಟಿಯಲ್ಲಿ ತಮ್ಮ ಹೆಸರು ನೋಂದಾಯಿಸಿಬಿಟ್ಟರು. ಮರುದಿನದ ಅನುಭವ ಅವರಲ್ಲಿ ಅದುವರೆಗೆ ರಕ್ತದಾನ ನೀಡುವುದರ ಬಗೆಗಿದ್ದ ಭಯ-ಸಂಶಯಗಳನ್ನೆಲ್ಲಾ ದೂರ ಮಾಡಿಬಿಟ್ಟಿತು.

ಕಾಲೇಜು ಓದು ಮುಗಿಸಿದ ಹರೀಶ್ ತಂದೆ ನಡೆಸುತ್ತಿದ್ದ ಆಟೋ ಪಾರ್ಟ್ಸ್ ವ್ಯಾಪಾರದಲ್ಲಿ ನೆರವಾಗತೊಡಗಿದ್ದ ಸಂದರ್ಭ ಅದು. ಒಂದು ದಿನ ಕಾರ್ಯ ನಿಮಿತ್ತ ಹೊರಟಿದ್ದಾಗ ದಾರಿಯಲ್ಲೊಂದೆಡೆ ಅಪಘಾತ ಸಂಭವಿಸಿತ್ತು. ವ್ಯಕ್ತಿಯೊಬ್ಬ ತೀವ್ರ ಗಾಯಗೊಂಡು ನರಳುತ್ತಲಿದ್ದ. ಹರೀಶ್ ಅಲ್ಲಿದ್ದ ನಾಲ್ವರೊಂದಿಗೆ ಮಾತನಾಡಿ ಆತನನ್ನು ಕೂಡಲೇ ಆಸ್ಪತ್ರೆಗೆ ಸೇರಿಸಿದರು. ಗಾಯಾಳುವಿಗೆ ರಕ್ತದ ತೀವ್ರ ಅವಶ್ಯಕತೆಯಿದೆ ಎಂದರು ಡಾಕ್ಟರುಗಳು. ಹರೀಶ್ ರಕ್ತದಾನಕ್ಕೆ ಮುಂದಾದರು. ಗಾಯಗೊಂಡು, ಸಾವಿನ ದಾರಿಯಲ್ಲಿದ್ದಾತ ಬದುಕಿ ಬಂದದ್ದು ಕೇಳಿ ಹರೀಶ್‌ಗೇನೋ ಧನ್ಯತಾಭಾವ. "ನಮ್ಮ ಪ್ರಯತ್ನಗಳಿಗಿಂತ ನೀನು ನೀಡಿದ ರಕ್ತ ಆತನನ್ನು ಬದುಕಿಸಲು ನೆರವಾಯಿತು" ಎಂಬ ವೈದ್ಯರುಗಳ ಮಾತಿನಿಂದ ಹರೀಶ್ ಉಬ್ಬಿ ಮೆರೆಯಲಿಲ್ಲ. ರಕ್ತದಾನ ಹಾಗೂ ಅದರ ಮಹತ್ವವನ್ನು ಜನಕ್ಕೆ ತಿಳಿಹೇಳುವುದನ್ನು ತನ್ನ ಧ್ಯೇಯವಾಗಿಸಿಕೊಳ್ಳಲು ನಿರ್ಧರಿಸಲು ಆ ಮಾತು ಪ್ರೇರಕವಾಯಿತು.

"ದೇಹದಲ್ಲಿರುವ ಸುಮಾರು ಆರು ಸಾವಿರ ಸಿ.ಸಿ.ಗಳಷ್ಟು ರಕ್ತದ ಪೈಕಿ ಮುನ್ನೂರು ಸಿ.ಸಿ.ಗಳಷ್ಟನ್ನು ಅವಶ್ಯಕತೆಯಿರುವ ಯಾವುದೇ ವ್ಯಕ್ತಿಗೆ ನೀಡಿದರೂ ದಾನಿಗೆ ನಷ್ಟವೇನಿಲ್ಲ. ಪಡೆದ ವ್ಯಕ್ತಿ ಬದುಕಿಕೊಂಡ ಸಮಾಧಾನದ ಜತೆಗೆ ತಾನು ಪುಣ್ಯಕಾರ್ಯದಲ್ಲಿ ಪಾಲುದಾರನಾದೆನೆಂಬ ನೆಮ್ಮದಿ ಇದಕ್ಕೆ ಪ್ರತಿಯಾಗಿ ದೊರೆತೇ ಇರುತ್ತದೆ. ನಮ್ಮ ಬಳಿಯಿರುವ ಹಣದಲ್ಲಿ ತೀರ ನಗಣ್ಯವೆಂಬಷ್ಟನ್ನು ಅವಶ್ಯಕತೆಯಿರುವ ವ್ಯಕ್ತಿಗೆ ಕೊಟ್ಟಂತೆಯೇ ಇದು ಎಂಬ ಭಾವನೆ ದಾನಿಯಲ್ಲಿ ಬಂದು ಬಿಟ್ಟರಾಯಿತು. ಅಷ್ಟಲ್ಲದೆ ಕೊಟ್ಟ ರಕ್ತದಿಂದಾಗಿ ಕೊಟ್ಟಾತನಲ್ಲಿ ಕೊರತೆಯೇನೂ ಕಾಣಿಸುವುದಿಲ್ಲ. ರಕ್ತದ ಉತ್ಪಾದನೆ ನಮ್ಮ ದೇಹದಲ್ಲಿ ನಿರಂತರ ನಡೆಯುತ್ತಲೇ ಇರುತ್ತದೆ."- ಇದು ಹರೀಶ್ ರಕ್ತದಾನಕ್ಕೆ ಇತರರನ್ನು ಪ್ರೇರೇಪಿಸುವಾಗ ಬಳಸುವ ಮಾತು.

ರಕ್ತದಾನಗೈಯುತ್ತಲೇ ಬಂದ ಹರೀಶ್ ಅದು ತಮ್ಮ ಕರ್ತವ್ಯವೆಂದು ಮಾತ್ರ ಭಾವಿಸಿದರೇ ವಿನಾ ಅದರಿಂದ ಬಿರುದು-ಬಾವಲಿಗಳನ್ನೆಂದೂ ಬಯಸಲಿಲ್ಲ. ಆದರೆ ೨೫ನೆಯ ಬಾರಿ ಅವರು ರಕ್ತದಾನ ಮಾಡಿದ ದಿನ ಆಸ್ಪತ್ರೆಯ ಸಿಬ್ಬಂದಿ ಈ ವಿಷಯವನ್ನು ಮಹಾರಾಷ್ಟ್ರದ ರಾಜ್ಯಪಾಲರ ಗಮನಕ್ಕೆ ತಂದರು. ರೆಡ್‌ಕ್ರಾಸ್ ಸಂಸ್ಥೆಯ ಗವರ್ನರ್‌ರ ಮೂಲಕ ಹರೀಶ್‌ಗೆ ಒಂದು ಅಭಿನಂದನಾ ಪತ್ರ ಬಂತು. ಐವತ್ತನೆ ಸಲ

ರಕ್ತದಾನಗೈದ ಸಂದರ್ಭದಲ್ಲಿ ಮುಂಬಯಿಯ ಮೇಯರ್‌ರಿಂದ ಅಭಿನಂದನಾ ಪತ್ರ ನೀಡಲ್ಪಟ್ಟಿತು. ೧೯೮೩ ರಲ್ಲಿ ಮಹಾರಾಷ್ಟ್ರದ ರಾಜ್ಯಪಾಲರು ಹರೀಶ್ ಹಾಗೂ ಅವರ ಕುಟುಂಬವರ್ಗದವರನ್ನು ರಾಜಭವನಕ್ಕೆ ಕರೆಸಿಕೊಂಡು ಸನ್ಮಾನಿಸಿದರು. ಕಳೆದ ವರ್ಷ ಡಿಸೆಂಬರಿನಲ್ಲಿ ೧೭೬ನೇ ಬಾರಿ ರಕ್ತದಾನ ಗೈದದ್ದಕ್ಕಾಗಿ 'ಲಿಮ್ಕಾ ಬುಕ್ ಆಫ್ ರಿಕಾರ್ಡ್'ನವರು ಗೌರವಿಸಿದರು.

ಈ ಕಾರ್ಯದಲ್ಲಿ ಮನೆಯಿಂದಲೇ ಮೊದಲ ಅಡ್ಡಿ ಶುರುವಾಗುವುದು ಸಾಮಾನ್ಯ. ಹರೀಶ್‌ಗೂ ಈ ಅನುಭವ ಬಾರದೇ ಇರಲಿಲ್ಲ. ಮದುವೆಯಾದ ಮೊದಲ ದಿನಗಳವು. ಪತ್ನಿ ವಿದ್ಯಾ ಈ ವಿಷಯದಲ್ಲಿ ಗೊಣಗತೊಡಗಿದಳು. ಗಂಡನನ್ನು ಅದರಿಂದ ವಿಮುಖನನ್ನಾಗಿಸಲು ಯತ್ನಿಸಿದಳು. "ಆಕೆಗೆ ಸಣ್ಣ ಹುಡುಗರಿಗೆ ಹೇಳುವಂತೆ ಬಿಡಿಬಿಡಿಸಿ ಹೇಳಿದೆ. ಹಲವಾರು ಉದಾಹರಣೆಗಳನ್ನು ನೀಡಿದೆ. ಅವಳಿಗೆ ನಾನು ಮಾಡುತ್ತಿರುವುದು ಪುಣ್ಯಕಾರ್ಯವೆಂಬುದು ಅರಿವಿಗೆ ಬಂತು. 'ಹಾಗಾದರೆ ನೀನೂ ಈ ಸೇವಾಕಾರ್ಯದಲ್ಲಿ ಒಮ್ಮೆಯಾದರೂ ಭಾಗಿಯಾಗು' ಎಂದೆ."- ಇದು ಹರೀಶ್ ಅಡ್ಡಿಯನ್ನು ನಿವಾರಿಸಿಕೊಂಡ ಪರಿ. ಹರೀಶ್‌ಗೆ ಈಗ ಈ ಆಂದೋಲನದಲ್ಲಿ ಮನೆಜನರೆಲ್ಲರ ಮನಸ್ವಿ ಸಹಕಾರವಿದೆ.

ಮುಂಬಯಿಯ ಚರ್ಚ್‌ಗೇಟ್ ಸ್ಟೇಶನ್ ಸಮೀಪ 'ಸ್ವಯಿಚ್ಛಾ ರಕ್ತದಾನ ಸಂಸ್ಥಾ' ಆರಂಭಿಸಿ ವಿದ್ಯಾಸಂಸ್ಥೆಗಳ ಹಾಗೂ ರೋಟರಿ, ಲಯನ್ಸ್, ಜೇಸೀಸ್‌ನಂಥ ಸಾಮಾಜಿಕ ಸೇವಾ ಸಂಸ್ಥೆಗಳ ಸಹಕಾರದೊಂದಿಗೆ ಮಹಾನಗರದಲ್ಲಿ ಅಗತ್ಯವಿರುವವರಿಗೆ ರಕ್ತ ದೊರೆಯುವ ಏರ್ಪಾಡು ಮಾಡಿದ್ದಾರೆ ಹರೀಶ್. ಇದಕ್ಕಾಗಿ ಈ ಸೇವಾ ಸಂಸ್ಥೆಗಳ ಆಶ್ರಯದಲ್ಲಿ 'ರಕ್ತದಾನ ಶಿಬಿರ'ಗಳನ್ನು ಸಂಘಟಿಸಲು ಅವರು ಸದಾ ಶ್ರಮಿಸುತ್ತಿರುವುದಂತೂ ಸಮೀಪವರ್ತಿಗಳೆಲ್ಲ ಬಲ್ಲ ವಿಚಾರ. ಈವರೆಗೆ ಸಂಘಟಿಸಿರುವ ಇಂಥ ಶಿಬಿರಗಳ ಮೂಲಕ ೧೦,೦೦೦ ಬಾಟಲಿಗಳಿಗೂ ಹೆಚ್ಚು ರಕ್ತ ಸಂಗ್ರಹಿಸಿದ್ದಾರೆ.

ಸಾರ್ವಜನಿಕವಾಗಿ ಅಂದರೆ ಇಂಥ ಶಿಬಿರಗಳಲ್ಲಿ ರಕ್ತಸಂಗ್ರಹಿಸುವುದೇನೋ ಸರಿಯೇ. ಆದರೆ ಅವಶ್ಯಕ ಸಂದರ್ಭಗಳಲ್ಲಿ ಆಸ್ಪತ್ರೆಗೇ ಹೋಗಿ ರಕ್ತದಾನ ಮಾಡಬಲ್ಲವರ ಸೇವೆ ಸಕಾಲದಲ್ಲಿ ದೊರೆಯುವಂತೆ ಮಾಡುವುದೂ ಮುಖ್ಯ. ಆದ್ದರಿಂದ 'ಸ್ವಯಿಚ್ಛಾ ರಕ್ತದಾನ ಸಂಸ್ಥಾ' ಮೂಲಕ ಇಂಥ ದಾನಿಗಳ ಕುರಿತಂತೆ ಎಲ್ಲಾ ವಿವರಗಳು ಇರುವ ಒಂದು ಅಧಿಕೃತ ಪುಸ್ತಕವನ್ನು ಅವರು ಈಗಾಗಲೇ ಹೊರತಂದಿದ್ದಾರೆ.

ರಕ್ತದಾನಕ್ಕೆ ಸಿದ್ಧವಿರುವವರ ಹೆಸರು, ವಿಳಾಸ, ರಕ್ತದ ಗುಂಪು ಮುಂತಾದವುಗಳಷ್ಟೇ ಅಲ್ಲ. ಯಾವ ಗುಂಪಿನ ರಕ್ತ ಬೇಕಾದರೆ ಯಾರನ್ನು ಸಂಪರ್ಕಿಸಬೇಕು ಎಂಬ ಮಾಹಿತಿಯನ್ನೂ ಈ ಪುಸ್ತಕ ಒಳಗೊಂಡಿದೆ.

ಈ ಪುಸ್ತಕ ಓದಿ, ದಾನಿಗಳಿಂದ ರಕ್ತ ಪಡೆದು ಬಾಳು ಹಸನಾಗಿಸಿಕೊಂಡವರು "ಈ ಮಹಾನುಭಾವ ಇಂಥದೊಂದು ಪುಸ್ತಕ ಮಾಡಿ ದೊಡ್ಡ ಕೆಲಸ ಮಾಡಿದ. ಇಂಥವರ ಸಂತತಿ ಬೆಳೆಯಲಿ" ಎಂದು ಹಾರೈಸಿದ್ದರೆ ಅಚ್ಚರಿಯೇನಿಲ್ಲ.

"ರಕ್ತ ನಮ್ಮ ದೇಹದಲ್ಲಿ ಸಿದ್ಧಗೊಳ್ಳುತ್ತಲೇ ಇರುವ ಜೀವದ್ರವ. ಇದಕ್ಕೊಂದೇ ಪ್ರತ್ಯೇಕ ಆಹಾರ ಸೇವಿಸಬೇಕಾದ ಅವಶ್ಯಕತೆಯೇನಿಲ್ಲ. ೧೮ ರಿಂದ ೬೦ ವರ್ಷದೊಳಗಿನ, ೪೫ ಕಿಲೋಗಿಂತ ಕಡಿಮೆ ತೂಕವಿರದ ಮತ್ತು ರಕ್ತದಲ್ಲಿ ೧೨.೫ ಗ್ರಾಂನಷ್ಟು ಹಿಮೊಗ್ಲೋಬಿನ್ ಇರುವ ಯಾರಾದರೂ ರಕ್ತದಾನ ಮಾಡಬಹುದು. ತೀವ್ರ ರಕ್ತದೊತ್ತಡ, ಮಧುಮೇಹ, ಕ್ಷಯ, ಕುಷ್ಠ, ಏಡ್ಸ್ ಮುಂತಾದವುಗಳಿಂದ ಬಳಲುವವರಿಂದ ರಕ್ತ ಪಡೆಯಲಾಗದು. ವೈದ್ಯರು ಇಂಥವರಿಂದ ರಕ್ತವನ್ನು ಪಡೆಯುವುದೂ ಇಲ್ಲ. ರಕ್ತದಾನಗೈದ ನಂತರದ ೪೮ ಗಂಟೆಗಳಲ್ಲಿಯೇ ಪುನಃ ದೇಹದಲ್ಲಿ ಆ ಕೊರತೆ ತುಂಬಿಕೊಳ್ಳಲಾರಂಭಿಸುತ್ತದೆ...." ಹರೀಶ್‌ರ ಈ ಮಾತುಗಳಲ್ಲಿ ನಂಬಿಕೆಯಿಟ್ಟು ಅವನ್ನೇ ಪುನರುಚ್ಚರಿಸುತ್ತಿರುವವರ ತಂಡವೂ ಬೆಳೆಯುತ್ತಿದೆ.

ಮನೆ ಮಂದಿಯಂತೂ ಸರಿಯೇ, ಉದ್ಯೋಗ ನೀಡಿರುವ 'ನ್ಯಾಶನಲ್ ಇನ್ಶೂರೆನ್ಸ್ ಕಂಪನಿ'ಯ ಸಹೋದ್ಯೋಗಿ ಮಿತ್ರರೂ ಹರೀಶ್‌ಗೆ ಈ ಮಹಾನ್ ಕಾರ್ಯದಲ್ಲಿ ಬೆಂಬಲ ನೀಡುತ್ತಿದ್ದಾರೆ.

(ಸಾಧಾರ)

# ಐದುವೆ



ಮನುಷ್ಯ ದೇಹದಲ್ಲಿರುವ
ಕೊಬ್ಬಿನಿಂದ ಏಳುಬಾರುಗಳಷ್ಟು
ಸೋಪು ತಯಾರಿಸಬಹುದು
ಎಂದು ಓದಿ ಥ್ರಿಲ್ಲಾದೆ,
ನನ್ನ ದೇಹದಿಂದ ಯಾರಾದರು
ತಯಾರಿಸಲಿ ಎಂದು ಹಂಬಲಿಸಿದೆ,
ಆದರೆ ವಿಲಾಸಿಗಳ ಠಾಕುಠೀಕಿಗೆ
ನೀಡದಿರಲಿ ಎಂದು ಹಾರೈಸಿದೆ.

*

ಹಾತೆಗಳನ್ನು ನೋಡಿದ
ಮನುಷ್ಯ ಕರುಬುತ್ತಾನೆ:
ತನಗೇಕೆ ಬೇಕಿತ್ತಪ್ಪ
ಈ ಬೇವಾರ್ಸಿ ಬಾಯಿ
ಖಾಲಿ ಹೊಟ್ಟೆ?

*

ಜಿರಲೆಗಳು
ತಲೆ ಕತ್ತರಿಸಿದ ಮೇಲೂ
ಬದುಕಬಲ್ಲವು
ಹಲವು ವಾರ.
ಆದರೆ ನರಹುಳುಗಳು
ತಲೆಯಿಲ್ಲದೆ
ಬದುಕಬಲ್ಲವು
ನೂರು ವರುಷ.

*

ತಲೆಯ ಮೇಲೆ
ನಿಲ್ಲಬಲ್ಲ

# ಜೀವನ

ಏಕೈಕ ಪ್ರಾಣಿಯೆಂದರೆ
ಗಜರಾಜ.
ಆದರೆ, ತಲೆ ಅಡವಿಟ್ಟು
ಹೊಟ್ಟೆ ಹೊರೆಯಬಲ್ಲ
ಏಕೈಕ ಪ್ರಾಣಿಯೆಂದರೆ
ನಂನಿಮ್ಮಂಥ ಮನುಜ.

*

ವ್ಹಿಪ್ ಬಾಯ್‌ಗೆ
ರಾಜಕುಮಾರನದೆ ವಯಸ್ಸು.
ಆಟ ಊಟ ನಿದ್ದೆ ಒಟ್ಟಿಗೆ.
ರಾಜಕುಮಾರನ ತಪ್ಪಿಗೆ
ಪೆಟ್ಟು ಬೀಳುತ್ತಿತ್ತು ಇವನಿಗೆ,
ಮನೆಗೆ ಬಂದು ಹೇಳುತ್ತಿದ್ದ ತಾಯಿಗೆ:
'ನಾನಿವತ್ತು ಪೆಟ್ಟು ತಿಂದೆ
ಇಪ್ಪತ್ತೈದಕ್ಕಿಂತ ಹೆಚ್ಚಿಗೆ.'
ರಾಜಕುಮಾರನ ಬದಲಿಗೆ
ಪೆಟ್ಟುತಿಂದ ಖುಷಿಗೆ
ಮುಲಾಮು ಹಚ್ಚಿದಳು ತಾಯಿ
ಗಾಯಕ್ಕೆ.
ರಾಜಕುಮಾರ ಒಬ್ಬನಾದರೆ
ವ್ಹಿಪ್ ಬಾಯ್ ಲಕ್ಷಜನ.
ತಾಯಂದಿರು ಲಕ್ಷಜನ.
ಒಬ್ಬನಿಗಾಗಿ ಲಕ್ಷಜನರನ್ನು
ಶಿಕ್ಷಿಸುವುದಲ್ಲವೆ ಜೀವನ?

*

ಪ್ರಪ್ರಥಮ ಗಗನ ಯಾತ್ರಿಗಳು
ಗಗನದಲ್ಲಿ ಯಾತ್ರಾಧ್ವರಕ್ಕೆ
ಮಾತ್ರ ಕಟ್ಟಿಕೊಂಡು ಹೋದರಂತೆ.
ನನ್ನೀ ಜೀವನಯಾತ್ರೆಯಲ್ಲಿ
ಕಟ್ಟಿಕೊಳ್ಳಲು ಯಾರೂ
ನನಗೆ ಮಾತ್ರ ಕೊಟ್ಟಿಲ್ಲ,
ತಾನಾಗಿಯೂ ಸಿಕ್ಕಿಲ್ಲ.

*

● ಡಾ. ಆರ್ಕೆ, ಮಣಿಪಾಲ



# ಆಗಂತುಕರು

ಪಾಂಡುರಂಗ ಪಾಳ, ಗೇರಸಪ್ಪಾ

ಗೇರಸಪ್ಪೆಯ ಬಸ್ತಿ ಕಾಡು. ಅಮಾವಾಸ್ಯೆಯ ಮುಚ್ಚಂಜೆ. ಸೂರ್ಯ ಮುಳುಗುತ್ತಿದ್ದಂತೆ ಕರಿ ಮೋಡ ಆವರಿಸಿತ್ತು. ಹಗಲಲ್ಲಿಯೂ ಸೂರ್ಯ ಕಾಣದಷ್ಟು ದಟ್ಟ ಮರಗಳ ಜಾಲ. ಮಧ್ಯಾಹ್ನದ ನಂತರ ಬಿದ್ದ ಮಳೆಯಿಂದ ಗಿಡ ಮರಗಳು ಇನ್ನೂ ತೊಟ್ಟಿಕ್ಕುತ್ತಿದ್ದವು. ಕಾಡಿನಲ್ಲಿನ ಒಂಟಿ ಮನೆ ಅದು.

ಕೆಕೆ.ಯವರು ಬಾಗಿಲು ತೆಗೆದು ಮುಗುಳ್ನಗುತ್ತಾ ಶುದ್ಧ ಹಿಂದಿಯಲ್ಲಿ, "ಬನ್ನಿ ಬನ್ನಿ" ಎನ್ನುತ್ತಾರೆ. ಬಂದ ನಾಲ್ಕು ಜನ ಆಗಂತುಕರು ಬೆಪ್ಪಾಗಿ ನಿಲ್ಲುತ್ತಾರೆ. ಇವರು ತಮಗೇಕೆ ಸ್ವಾಗತ ಕೋರುತ್ತಿದ್ದಾರೆ? ಕಣ್ಣಿಗೇಕೆ ಕರಿ ಪಟ್ಟಿ ಕಟ್ಟಿದ್ದಾರೆ? ತಾವು ಬಾಗಿಲು ಬಡಿಯುವ ಮೊದಲೇ ಇವರು ಬಾಗಿಲು ತೆರೆದರಲ್ಲ; ತಾವು ಬಂದದ್ದು ಅವರಿಗೆ ಹೇಗೆ ತಿಳಿಯಿತು? ಎಂದವರು ಆಶ್ಚರ್ಯಪಡುತ್ತಿರುವಾಗಲೇ ಕೆಕೆ. ಮುಂದುವರಿಸುತ್ತಾರೆ. "ಬನ್ನಿ, ಬನ್ನಿ, ಕುಳಿತುಕೊಳ್ಳಿ. ಮಾತನಾಡಲು ಸಾಕಷ್ಟು ಸಮಯವಿದೆ. ನನಗೂ ಜೊತೆ ಬೇಕಿತ್ತು. ಕೆಲಸದವ ಜನ್ನ ಗೇರಸಪ್ಪೆಗೆ - ಅಂದರೆ ಪೇಟೆಗೆ- ಹೋಗಿದ್ದಾನೆ. ಅವನು ಬರುವದು ನಾಳೆ ಮಧ್ಯಾಹ್ನ".

"ಮನೆಯಲ್ಲಿ ಬೇರಾರೂ ಇಲ್ಲವೆ?" ಆಗಂತುಕರಲ್ಲಿ ಒಬ್ಬನ ಪ್ರಶ್ನೆ.

"ಇಲ್ಲ. ನಾಳೆ ಮಧ್ಯಾಹ್ನದ ವರೆಗೆ ನಾನೊಬ್ಬನೇ. ಬೂಟು-ಚಪ್ಪಲಿ ಕಳಚಿ ಹೊರಗೆ ಬಿಡಿ. ಇಲ್ಲೇನು ಭಯವಿಲ್ಲ. ಕಾಲು ಒರೆಸಿಕೊಳ್ಳಿ. ಮಧ್ಯಾಹ್ನದ ನಂತರ ಮಳೆ ಬಂದಿತ್ತು. ಮರಗಳಿಂದ ಬಿದ್ದ ಹನಿಗಳಿಂದಲೇ ನಿಮ್ಮ ಬಟ್ಟೆ ತೊಯ್ದಿರಬಹುದು. ತಲೆ ಒರೆಸಿಕೊಳ್ಳಿ," ಎನ್ನುತ್ತಾ ಅವರು ಕ್ಷಣಮಾತ್ರದಲ್ಲಿ ಒಳಗೆ ಹೋಗಿ ಟವೆಲ್ ತಂದು ಕೊಡುತ್ತಾರೆ. "ಅತಿ ಚಳಿಯಾದಾಗ ಮಾತ್ರ ನಾನು ಅಗ್ಗಿಷ್ಟಿಕೆ ಹಾಕುವುದು. ಆದರೆ ಈಗ ನೀವು ನೆನೆದಿರಬಹುದು. ಅಗ್ಗಿಷ್ಟಿಕೆಯಿಂದ ಬಟ್ಟೆಯೂ ಒಣಗಬಹುದು. ಅಷ್ಟರಲ್ಲಿಯೇ ಬಿಸಿ ಕಾಫಿ ಕೊಡುತ್ತೇನೆ. ಮಾಡಿದ್ದೇ ಇದೆ. ಬಿಸಿ ಮಾಡಿದರೆ ಆಯಿತು," ಅಂದವರೇ ಅಗ್ಗಿಷ್ಟಿಕೆಯ ಮೇಲಿರುವ ಕಡ್ಡಿ ಗೀರುವ ಮೊದಲು ಸ್ವಲ್ಪ ಕೆರೋಸಿನ್ ಸುರುವುತ್ತಾರೆ. ಭಗ್ ಎಂದು ಹೊತ್ತಿಕೊಂಡ ಬೆಂಕಿ ಹಾಲ್‌ನ ಪ್ರಕಾಶವನ್ನು ಇಮ್ಮಡಿಗೊಳಿಸುತ್ತದೆ. ಆಗಂತುಕರು ಇನ್ನೂ ಆಶ್ಚರ್ಯ ಪಡುತ್ತಿರುವಂತೆಯೇ ಕೆಕೆ.ಯವರೇ ಮುಂದುವರಿಸುತ್ತಾರೆ, "ಕುರ್ಚಿಯನ್ನು ಅಗ್ಗಿಷ್ಟಿಕೆಯತ್ತ ಎಳೆದುಕೊಳ್ಳಿ. ಬಹುಶಃ ಮೂರು ಅಥವಾ ನಾಲ್ಕು ಜನರಿದ್ದೀರಿ ಅಲ್ಲವೇ?"

"ಪುನಃ ಅದೇ ತರ್ಕಶಾಸ್ತ್ರ ಮೊದಲು ಕೈ ಕುಲುಕಿದಾಗ ನೀವೆಲ್ಲ ಹತ್ತಿರ ಹತ್ತಿರ ನಿಂತಿದ್ದಿರಿ. ಯಾರು ಆಫ್ಟರ್ ಶೇವ್ ಲೋಶನ್ ಹಚ್ಚಿದ್ದಾರೆಂದು ಗೊತ್ತಿರಲಿಲ್ಲ; ನೀವು ಒಬ್ಬೊಬ್ಬರಾಗಿ ಕೈಕುಲುಕಿದಿರಲ್ಲ, ಗೊತ್ತಾಯಿತು..." ಅಂದರು. ಕೆಕೆ.



"ಹಾಂ! ಹೌದು, ನಾವು ನಾಲ್ವರು." ಎಲ್ಲರೂ ತಮ್ಮ ತಮ್ಮ ಹೆಸರು ಹೇಳಿ ಕೆಕೆ.ಯವರ ಕೈ ಕುಲುಕುತ್ತಾರೆ.

"ಐದು ನಿಮಿಷದಲ್ಲಿ ಕಾಫಿ ಕೊಡುತ್ತೇನೆ," ಎನ್ನುತ್ತಾ ಕೆಕೆ. ಒಳಗೆ ಹೋಗುತ್ತಾರೆ. ಆಗಂತುಕರು ಬಾರಿಬಾರಿಯಾಗಿ ತಲೆ ಒರೆಸಿಕೊಳ್ಳುತ್ತಾ ಒಬ್ಬರ ನ್ನೊಬ್ಬರು ಮಿಕಿಮಿಕಿ ನೋಡುತ್ತಿರುತ್ತಾರೆ. ಎಲ್ಲರ ಲ್ಲಿಯೂ ಏನೋ ಕುತೂಹಲ, ಏನೋ ಆತುರ.

ಕೆಕೆ. ಟ್ರೇಯಲ್ಲಿ ಕಾಫಿ, ಹಾಲು, ಸಕ್ಕರೆ ತೆಗೆದುಕೊಂಡು ಬರುತ್ತಾರೆ. ಬಂದು ದೂರ ನಿಲ್ಲುತ್ತಾರೆ. "ನೀವು ಹೇಗೆ ಕುಳಿತಿದ್ದೀರೋ ಗೊತ್ತಿಲ್ಲ. ಒಂದು ವೇಳೆ ನಾನೇ ಕುರ್ಚಿಹಾಕಿದ್ದರೆ ತಿಳಿಯುತ್ತಿತ್ತು. ನಿಮ್ಮ ಸಹಾಯ ಬೇಕಾಗುತ್ತಿರಲಿಲ್ಲ. ನಿಮ್ಮಲ್ಲಿ ಯಾರಾದರೂ ಆ ಮೂಲೆಯಲ್ಲಿನ ಟೀಪಾಯ್ ನಡುವೆ ಇಡಿ. ಈ ಟ್ರೇ ತೆಗೆದುಕೊಳ್ಳಿ. ನಿಮಗೆ ಸೇರುವಷ್ಟು ಹಾಲು-ಸಕ್ಕರೆ ಬೆರೆಸಿಕೊಳ್ಳಿ."

ಆಗಂತುಕರು ಹಾಗೆಯೇ ಮಾಡುತ್ತಾರೆ. ಇನ್ನೊಂದು ಕೊನೆಯಲ್ಲಿ ಕೆಕೆ. ತಮ್ಮ ಮಾಮೂಲು ರಾಕಿಂಗ್ ಚೇರ್ ಎಳೆದು ಕುಳಿತುಕೊಳ್ಳುತ್ತಾರೆ. "ನೀವು ಕಾಫಿ ಕುಡಿಯುತ್ತಿರುವಂತೆ ನಿಮ್ಮ ಕುತೂ ಹಲ ಸ್ವಲ್ಪ ಮಟ್ಟಿಗೆ ಬಗೆಹರಿಸುತ್ತೇನೆ. ನೋಡಿ, ನೀವು ಬರುವ ಮೊದಲು ನಾನಿಲ್ಲಿ ಟೇಪ್ ಹಾಕಿ

ಹಳೆಯ ಹಿಂದೀ ಸಿನೇಮಾ ಗೀತೆಗಳನ್ನೂ, ಭಜನ್‌ಗಳನ್ನೂ ಕೇಳುತ್ತಿದ್ದೆ. ನನಗೆ ದೂರದಲ್ಲಿ ರಸ್ತೆಯಲ್ಲಿ ಹೋಗುವ ವಾಹನಗಳ ಸದ್ದು ಕೇಳುತ್ತಿರುತ್ತದೆ. ಅವು ಹಾಗೆಯೇ ಹೋಗುತ್ತಿರುತ್ತವೆ. ಇಷ್ಟಕ್ಕೂ ಈ ಕಾಡಿನಲ್ಲಿ ಯಾರು ನಿಲ್ಲುತ್ತಾರೆ, ಆದರೆ ಸ್ವಲ್ಪ ಹೊತ್ತು ಮೊದಲು ಜೀಪ್ ನಿಂತ ಸದ್ದಾಯಿತು. ಸದ್ದು ಮುಂದುವರಿಯಲಿಲ್ಲ. ಬಹುಶಃ ವಿಲ್ಲಿಸ್ ಜೀಪ್. ಸರಿಯೇ?''

"ಅದು ಹೇಗೆ ನೀವು ಹೇಳಿದಿರಿ? ಹೌದು. ಅದು ವಿಲ್ಲಿಸ್ ಜೀಪ್''.

"ಕುರುಡರಿಗೆ ಹೆಚ್ಚಿನ ಜ್ಞಾನ ಇರುತ್ತದೆ. ಅಲ್ಲದಿದ್ದರೂ ಕೆಲವು ಮೋಟರ್ ಸೈಕಲ್‌ಗಳ, ಕಾರುಗಳ ಸಪ್ಪಳದಿಂದಲೇ ಅವು ಯಾವವು ಎಂದು ತಿಳಿಯುತ್ತದೆ. ನಾನು ಚಿಕ್ಕವನಿರುವಾಗ ಎನ್‌ಫೀಲ್ಡ್, ಜಾವಾ, ರಾಜದೂತ್ ಹೀಗೆ ಮುಖ್ಯವಾಗಿ ಮೂರು ತರಹದ ಮೋಟರ್ ಸೈಕಲ್‌ಗಳನ್ನು ಅವುಗಳ ಸದ್ದಿನ ಮೇಲೆ ಗುರುತಿಸುತ್ತಿದ್ದೆ. ಆಗ ನಾನು ನೋಡಬಲ್ಲವನಾಗಿದ್ದೆ. ಸೈನ್ಯದಲ್ಲಿದ್ದೆ. ಯುದ್ಧದಲ್ಲಿ ಗಾಯಗೊಂಡು ಕುರುಡನಾದೆ. ಸೈನ್ಯ ಬಿಡಬೇಕಾಯಿತು. ಬಾಳು ಅಸಹನೀಯವಾಯಿತು. ಆದರೂ ಸಹಿಸದೆ ವಿಧಿಯಿರಲಿಲ್ಲ. ಕುರುಡನಾಗಿಯೇ ಬಹಳ ಸಾಧಿಸಬೇಕೆನಿಸಿತು. ಅದಕ್ಕಾಗಿ ನನಗೆ ಏಕಾಂತದ ಅವಶ್ಯಕತೆಯಿತ್ತು. ನಿರ್ಜನವಾದ ಈ ಅರಣ್ಯದಲ್ಲಿ ನನ್ನ ಆತ್ಮೀಯ ಮಿತ್ರರೊಬ್ಬರ ಸಹಾಯದಿಂದ ಮನೆ ಕಟ್ಟಿಸಿದೆ. ಗೇರಸಪ್ಪೆಯಲ್ಲಿ ನನ್ನ ಸ್ವಂತದ ಮನೆ ಇದೆ. ಜನ್ನ ನಮ್ಮ ತಂದೆಯವರ ಕಾಲದಿಂದಲೂ ಇದ್ದ ಕೆಲಸದವ. ಅವನೊಂದಿಗೆ ಇಲ್ಲಿ ಇರತೊಡಗಿದೆ. ನಾನು ಚಿಕ್ಕವನಿರುವಾಗ ಗೇರಸಪ್ಪೆಯಲ್ಲಿ ಸರಿಯಾದ ರಸ್ತೆಗಳೂ ಇರಲಿಲ್ಲ. ಜೋಗ್ ಫಾಲ್ಸ್ ನೋಡಲು ಬರುವ ಪ್ರವಾಸಿಗರು ಇಲ್ಲಿಯ ಜೈನರ ಹಳೆ ಬಸ್ತಿ ನೋಡಲು ಮೋಟರ್ ಸೈಕಲ್ ಮೇಲೆ ಬರುತ್ತಿದ್ದರು. ಸದ್ದು ಕೇಳಿ ಮೋಟರ್ ಸೈಕಲ್ ಗುರುತಿಸುವುದು ಆ ಕಾಲದ ಮಾತು. ಇಷ್ಟಕ್ಕೂ ಕುರುಡರಿಗೆ ಸ್ಪರ್ಶ, ನಾಸಿಕ, ಕರ್ಣ ಜ್ಞಾನ ಇತರರಿಗಿಂತ ಹೆಚ್ಚಿಗೆ ಇರುತ್ತದೆ ಎನ್ನುವುದು ನಿಮಗೂ ಗೊತ್ತಿದ್ದ ವಿಷಯವೆ. ನಾನು ಕುರುಡನಾದ ಮೇಲೆ ಜೀವನ ನನಗೊಂದು ಆಹ್ವಾನವಾಯಿತು. ದಿಲ್ಲಿಯಲ್ಲಿ ಅವರಿಬ್ಬರೂ ಹುಟ್ಟು ಕುರುಡರ ದಂಪತಿ ಇದ್ದಾರೆ. ಆದರೆ ಅವರ ಮನೆಗೆ ಹೋಗಿ ನೋಡಿದರೆ ಅವರು ಕುರುಡರೆಂದು ಅನುಮಾನಿಸಲೂ ಶಕ್ಯವಿಲ್ಲ. ಇಬ್ಬರೂ ಯಾರ ಸಹಾಯವಿಲ್ಲದೇ ಎಲ್ಲ ಕೆಲಸ ಮಾಡುತ್ತಾರೆ. ನಾನೊಮ್ಮೆ ಸೈನ್ಯದ ಕ್ಯಾಂಪಿನಲ್ಲಿ ಅವರ ಬಗ್ಗೆ ವ್ಯಕ್ತಿ ಚಿತ್ರವೊಂದನ್ನು ನೋಡಿದ್ದೆ. ಕಣ್ಣು ಕಳೆದುಕೊಂಡ ಮೇಲೆ ಅವರೇ ನನಗೆ ಪ್ರೇರಣೆಯಾದರು. ಸರಿ. ಕಾಫಿ ಕುಡಿದಾಯಿತೆ? ಕಪ್‌ಗಳನ್ನು ಅಲ್ಲಿಯೇ ಟ್ರೇದಲ್ಲಿ ಇಡಿ. ಹಾಂ! ಜೀಪ್ ನಂತರ ಮತ್ತೆ ಸ್ಟಾರ್ಟ್ ಆಗಲಿಲ್ಲ. ಜೀಪ್ ಇಲ್ಲಿ ಯಾಕೆ ನಿಂತಿದೆಯೆಂದು ನಾನು ಕುತೂಹಲ ಭರಿತನಾದೆ. ಸರಿಯಾಗಿ ನನ್ನ ಮನೆಯ ಮೇಲ್ಗಡೆ ಒಂದು ಮರ್ಕ್ಯೂರಿ ಬಲ್ಬ್ ಉರಿಯುತ್ತಿದೆ. ಅದರಿಂದ ದೂರದಿಂದಲೂ ಪ್ರಕಾಶ ಕಾಣುತ್ತದೆ. ಜೀಪ್ ಕೆಟ್ಟಿರಬಹುದು ಅಥವಾ ಬೇರೆ ಏನು ತೊಂದರೆಯಾಗಿದೆಯೋ ಎಂದು ನಾನಂದುಕೊಳ್ಳುತ್ತಿರುವಾಗಲೇ ನೀವು ಬರುತ್ತಿರುವದು ಗೊತ್ತಾಯಿತು. ಹೇಗೆಂದರೆ ಮನೆ ಮುಂದೆ ಹೂದೋಟ ಮತ್ತು ಕಾಡಿನ ನಡುವೆ ನೀರು ಹರಿಯಲು ಸಣ್ಣ ಕಾಲುವೆ ಇದೆ. ಅದನ್ನು ದಾಟಲು ಒಂದು ದಪ್ಪನೆಯ ಮೆಟಲ್ ಶೀಟ್ ಹಾಕಿದೆ. ಅದನ್ನು ದಾಟುವಾಗ ಸಪ್ಪಳವಾಗುತ್ತದೆ. ಒಂದು ಸಲಕ್ಕೆ ಒಬ್ಬ ಮಾತ್ರ ದಾಟಬಹುದು. ಒಬ್ಬನು ದಾಟಬೇಕಾದರೆ ಎಷ್ಟು ಸಪ್ಪಳವಾಗುತ್ತದೆ ಎಂದು ನನಗೆ ಗೊತ್ತು. ಗಮನಿಸಿ ಕೇಳಿದಾಗ ಮೂರು ಅಥವಾ ನಾಲ್ಕು ಜನರಿರುವುದು ಗೊತ್ತಾಯಿತು. ನಾನು ಬಾಗಿಲು ತೆರೆಯಲು ಬಂದವನು ನೀವು ಹಿಂದಿಯಲ್ಲಿ ಮಾತನಾಡುತ್ತಿರುವುದನ್ನು ಕೇಳಿಸಿಕೊಂಡೆ. ಇನ್ನು ನೀವು ಹೇಳಿ; ಒಬ್ಬೊಬ್ಬರಾಗಿ ಮಾತನಾಡಿ. ಅಂದರೆ ನನಗೆ ಗುರುತಿಸಲು ಸಹಾಯವಾಗುತ್ತದೆ''.

ಮೊದಲು ಅನೂಪ್‌ಕುಮಾರ್ ಮಾತನಾಡಲು ಪ್ರಾರಂಭಿಸಿದ. ನಡುವೆ ತಟ್ಟನೆ ಅವನನ್ನು ತಡೆದು ಕೆಕೆ. ಹೇಳಿದರು, "ಈಗ ನೀವು ದೆಹಲಿಯಲ್ಲಿರಬಹುದು. ಆದರೆ ನೀವು ಮೂಲತಃ ಉತ್ತರ ಪ್ರದೇಶದವರು. ನಿಮ್ಮ ಹಿಂದಿಯಲ್ಲಿ ಪೂರ್ವ ಯುಪಿಯ ಭೋಜಪುರೀ ಛಾಟಿ ಇದೆ.'' ಅನೂಪ್‌ಕುಮಾರ್ ಆಶ್ಚರ್ಯ ಪ್ರಕಟಿಸಿ ಒಪ್ಪಿ

ಕೊಂಡ.

ಎರಡನೆಯವ ಅಮೀರ್‌ಚಂದ್. ಇವನೂ ದೆಹಲಿಯವನೆಂದ. ಆದರೆ ಕೆಕೆ "ನೀವು ಹರಿಯಾಣದವರು ಅಥವಾ ಪಂಜಾಬ-ಹರಿಯಾಣದ ಗಡಿ ಪ್ರದೇಶದವರು. ನೀವು ಹಾಸ್ಯಕವಿ ಸುರೇಂದ್ರ ಶರ್ಮರ ಧಾಟಿಯಲ್ಲಿ ಹಿಂದಿ ಮಾತನಾಡುತ್ತೀರಿ. 'ನ' ಅಕ್ಷರದ ಬದಲು 'ಣ' ಅಕ್ಷರ ಉಚ್ಚರಿಸುತ್ತೀರಿ. ಉದಾಹರಣೆಗೆ 'ಕರನಾ ಹೈ'ಯನ್ನು 'ಕರಣಾ ಹೈ' ಎಂದಿರಿ; 'ದೇನಾ ಚಾಹಿಯೆ' ಎನ್ನುವುದನ್ನು 'ದೇಣಾ ಚಾಹಿಯೇ' ಎಂದಿರಿ."

ಮೂರನೆಯವ ಪ್ರತಾಪಸಿಂಗ್. ಕೆಕೆ. ಹೇಳಿದರು, "ನೀವು ಸರ್‌ದಾರ್ ಅಥವಾ ಮೋನಾ ಅಂದರೆ ಅಕೇಶಿಯೋ, ಸಕೇಶಿಯೋ ಹೇಳಲಾರೆ. ಆದರೆ ನೀವು ಪಂಜಾಬಿ. ನಿಮ್ಮ ಮಾತಿನಲ್ಲಿ ಧಾರಾಳವಾಗಿ ಪಂಜಾಬಿ ಶಬ್ದಗಳಿವೆ. ಪಕ್ಕಾ ಪಂಜಾಬಿ ಧಾಟಿ ಇದೆ." ಒಪ್ಪಿಕೊಂಡ ಪ್ರತಾಪ ಸಿಂಗ್.

ನಾಲ್ಕನೆಯವ ರವಿರಾಜ್. ಅವನ ಬಗ್ಗೆ ಮಾತ್ರ ಕೆಕೆ. ಏನನ್ನೂ ಹೇಳಲಿಲ್ಲ. "ನೀವು ರವಿರಾಜ್ ಬಗ್ಗೆ ಏನನ್ನೂ ಹೇಳಲೇ ಇಲ್ಲವಲ್ಲ," ಆಗಂತುಕರಲ್ಲಿ ಒಬ್ಬ ಕೇಳಿದ. ತಲೆ ಕೆರೆದುಕೊಂಡರು ಕೆಕೆ. ಮತ್ತು ಅಂದರು. "ರವಿರಾಜ ಉತ್ತರ ಭಾರತದವನಂತೂ ಅಲ್ಲ, ದಕ್ಷಿಣ ಭಾರತದಲ್ಲಿ ಕೇರಳದವನಲ್ಲ. ತಮಿಳನೂ ಅಲ್ಲ. ಬಹುಶಃ ಆಂಧ್ರ ಅಥವಾ ಕರ್ನಾಟಕದ ಗಡಿ ಪ್ರದೇಶದವನಿರಬಹುದು."

ನಾಲ್ವರೂ ಚಪ್ಪಾಳೆ ತಟ್ಟುತ್ತ, 'ವಂಡರ್ ಫುಲ್, ವಂಡರ್ ಫುಲ್' ಎಂದು ಉದ್ಗಾರಿಸಿದರು.

"ನೀವು ಅಸಾಮಾನ್ಯರು. ಖಂಡಿತವಾಗಿಯೂ ಅಸಾಮಾನ್ಯರು. ಹ್ಯಾಟ್ಸ್ ಆಫ್ ಟು ಯು, ಸರ್ ಹ್ಯಾಟ್ಸ್ ಆಫ್ ಟು ಯು."

"ಸಾಕು ಸಾಕು, ಪ್ರಶಂಸೆಗೆ ಧನ್ಯವಾದಗಳು. ಆದರೆ ದಯವಿಟ್ಟು ಇನ್ನು ಮುಂದೆ ಸರ್, ಸರ್, ಎನ್ನಬೇಡಿ. ನನ್ನ ಪೂರ್ಣ ಹೆಸರು ಕೃಷ್ಣಕಾಂತ್ ಕಮಲಾಕಾಂತ್ ಕಾಮತ್. ಕಾಮತ್ ಎನ್ನುವುದು ನನ್ನ ಮನೆತನದ ಹೆಸರಾದರೂ ನನ್ನ ಮನೆಯಲ್ಲಿ ಪ್ರತಿಯೊಬ್ಬರ ಹೆಸರಿನ ನಂತರ ಕಾಂತ್ ಹಚ್ಚುವ ಪದ್ಧತಿ ಇದೆ - ಚಂದ್ರಕಾಂತ್, ಸೂರ್ಯಕಾಂತ್, ಶಶಿಕಾಂತ್ ಇತ್ಯಾದಿ. ನನ್ನ ಹೆಸರಿನಲ್ಲಿ ಪದೇ ಪದೇ ಬರುವ ಕೆ ಅಕ್ಷರದಿಂದಾಗಿ ನಾನು ಹೈಸ್ಕೂಲಿನಲ್ಲಿರುವಾಗಿನಿಂದಲೂ ಜನ ನನಗೆ 'ಕೆಕೆ.' ಎನ್ನುತ್ತಾರೆ. ನಾನು ಮಿಲಿಟರಿಯಲ್ಲಿ ವೈರ್‌ಲೆಸ್ ಆಪರೇಟರ್ ಆಗಿ ಸೇರಿದವನು ಸಿಗ್ನಲ್ಸ್‌ನಲ್ಲಿ. ಕ್ಯಾಪ್ಟನ್ ಎಂದು ಪ್ರಮೋಷನ್ ಆದಂದಿನಿಂದ ಕ್ಯಾಪ್ಟನ್ ಕೆಕೆ. ಆದೆ. ನೀವು ನನಗೆ ಕೆಕೆ. ಎಂದರೂ ಸಾಕು. ಇನ್ನು ನಾನು ಹೇಳಿದುದರಲ್ಲಿ ಅಸಾಮಾನ್ಯವಾದದ್ದೇನೂ ಇಲ್ಲ. ನನಗೆ ಮುಂಚಿನಿಂದಲೂ ತರ್ಕಶಾಸ್ತ್ರ ಮತ್ತು ಮನಃಶಾಸ್ತ್ರದಲ್ಲಿ ಅಭಿರುಚಿ. ಆ ವಿಷಯಗಳಿಗೆ ಸಂಬಂಧಿಸಿದಹಾಗೆ ನನ್ನ ಕೈಗೆಟುಕುವ ಎಲ್ಲ ಪುಸ್ತಕಗಳನ್ನೂ ಓದಿದ್ದೇನೆ- ಅಂದರೆ ಕಣ್ಣು ಕಳೆದುಕೊಳ್ಳುವದಕ್ಕಿಂತ ಮೊದಲು. ಇನ್ನು ನೀವು ಹೇಳಿ, ಎಲ್ಲಿಂದ ಬಂದದ್ದು? ಎಲ್ಲಿಗೆ ಹೋಗುವವರು?"

"ಸರಿ, ಅದಕ್ಕಿಂತ ಮೊದಲು ಒಂದು ಸಣ್ಣ ಪ್ರಶ್ನೆ. ನೀವು ಕಣ್ಣಿಗೆ ಕರಿಪಟ್ಟಿ ಕಟ್ಟಿದ್ದೇಕೆ?" ಆಗಂತುಕರಲ್ಲಿ ಒಬ್ಬ ಪ್ರಶ್ನಿಸಿದ.

"ಸಮಂಜಸವಾಗಿದೆ ನಿಮ್ಮ ಪ್ರಶ್ನೆ. ಕುರುಡನು ಕಣ್ಣಿನ ಪಟ್ಟಿ ಕಟ್ಟಿದರೇನು, ಬಿಟ್ಟರೇನು ಅಲ್ಲವೆ? ಔಷಧಿ ಹಾಕಿದ ಮೇಲೆ ಪಟ್ಟಿ ಕಟ್ಟಲೇಬೇಕಂತೆ. ಡಾಕ್ಟರ್ ಹೇಳಿದ್ದು. ಆರು ತಾಸಿನ ತನಕ ಪ್ರಕಾಶ ಕಿರಣಗಳು ಕಣ್ಣನ್ನು ಸೇರಬಾರದಂತೆ. ಅದಕ್ಕೆಂದೇ ಪಟ್ಟಿ ಕಟ್ಟುವುದು. ಜನ್ನ ಗೇರಸಪ್ಪೆಗೆ ಹೋಗುವ ಮೊದಲು ಔಷಧಿ ಹಾಕಿ ಪಟ್ಟಿಕಟ್ಟಿ ಹೋಗಿದ್ದಾನೆ. ಈಗ ಇದನ್ನು ರಾತ್ರಿ ಮಗಲುವ ಮೊದಲು ದೀಪ ಆರಿಸಿದ ನಂತರವೇ ತೆಗೆಯುವುದು."

"ನಿಮಗೆ ಸಮಯ ಗೊತ್ತಾಗುವುದು ಹೇಗೆ?" ಇನ್ನೊಬ್ಬ ಕೇಳಿದ.

"ಒಂದು ನಿಮಿಷ ಮೌನವಾಗಿರಿ. ನೀವೇ ತಿಳಿದುಕೊಳ್ಳುವಿರಂತೆ."

ಹಾಲಿನಲ್ಲೆಲ್ಲ ಮೌನ ಆವರಿಸುತ್ತದೆ. 'ನೈನ್‌ಟೀನ್ ಟ್ವೆಂಟಿಫೈವ್' ಎನ್ನುವ ಅಶರೀರವಾಣಿಯೊಂದು ಕೇಳಿಸುತ್ತದೆ. ಆಗಂತುಕರು ಮೇಲೆ ಕೆಳಗೆ, ಸುತ್ತ-ಮುತ್ತ ನೋಡುತ್ತಾರೆ. ಮೂಲೆಯಲ್ಲಿ ಗೋಡೆಗೆ ವಿಚಿತ್ರ ಆಕೃತಿಯ ಗಡಿಯಾರದಂತಿರುವ ವಸ್ತು ಕಾಣಸುತ್ತದೆ. ಅದರಿಂದಲೇ ಶಬ್ದ ಬಂದದ್ದು. ಅದು ಗಡಿಯಾರವೇ. ಅದು ೭.೨೫ ತೋರಿಸುತ್ತಿತ್ತು. ಮತ್ತೆ ಅದೇ ಗಡಿಯಾರದಿಂದ

ನೈನ್‌ಟೀನ್ ಟ್ವೆಂಟಿಸಿಕ್ಸ್ ಕೇಳಿಸಿತು. ಈಗ ಅದು ೭-೨೬ ತೋರಿಸುತ್ತಿತ್ತು. ಈಗ ಕೆಕೆ. ಹೇಳುತ್ತಾರೆ, "ನೋಡಿ ಅದೊಂದು ಎಲೆಕ್ಟ್ರಾನಿಕ್ ಗಡಿಯಾರ. ಅದರಲ್ಲಿ ಪ್ರತಿಮಿನಿಟಿಗೆ ಪ್ರೋಗ್ರಾಂ ಮಾಡಿದ ಸೌಂಡ್ ಬಾಕ್ಸ್ ಅಳವಡಿಸಿದೆ. ಅದರ ರಿಮೋಟ್ ಕಂಟ್ರೋಲ್‌ಅನ್ನು ನನ್ನ ಕೈಗೆ ಕಟ್ಟಿದ್ದೇನೆ. ನನಗೆ ಸಮಯ ತಿಳಿಯಬೇಕೆನಿಸಿದಾಗ ಗುಂಡಿ ಒತ್ತಿದರೆ ಆಯಿತು. ನಾನು ಸೈನ್ಯದಲ್ಲಿರುವಾಗ ಇಂತಹ ಅನೇಕ ಪ್ರಯೋಗಗಳನ್ನು ಮಾಡಿ ಯಶಸ್ವಿಯಾಗಿದ್ದೇನೆ. ನಾನೊಂದು ಜಪಾನೀ ಕಾರು ನೋಡಿದ್ದೆ. ರಿವರ್ಸ್ ಗೇರ್ ಹಾಕಿದ ತಕ್ಷಣ, 'ಎಚ್ಚರಿಕೆ, ಈ ಕಾರು ಹಿಂದೆ ಸರಿಯುತ್ತಲಿದೆ' ಎನ್ನುವ ಶಬ್ದ ಕೇಳಿಸುತ್ತಲೇ ಇರುತ್ತಿತ್ತು. ಬ್ರೇಕ್ ಒತ್ತಿದ ತಕ್ಷಣ STOP ಎನ್ನುವ ಕೆಂಪು ಅಕ್ಷರದ ಜತೆ, 'ನಿಲ್ಲಿಸು, ನಿಲ್ಲಿಸು, ನಿಲ್ಲಿಸು...' ಎಂಬ ಶಬ್ದವೂ ಕೇಳಿಬರುತ್ತಿತ್ತು. ಅದರ ತಂತ್ರಜ್ಞಾನ ತಿಳಿದುಕೊಂಡೇ ನಾನು ಇಂತಹ ಸಾಧನಗಳನ್ನು ಸೃಷ್ಟಿಸಿದ್ದೇನೆ. ಈಗ ಇಂತಹ ಇನ್ನೊಂದು ಪ್ರಯೋಗ ತೋರಿಸುತ್ತೇನೆ. ನೀವು ಕರೆಗಂಟೆ ಒತ್ತುವ ಮೊದಲೇ ನಾನು ಬಾಗಿಲು ತೆರೆದಿದ್ದೆ. ಆದ್ದರಿಂದ ಅದನ್ನು ನೀವು ಗಮನಿಸಲಿಲ್ಲ. ನಿಮ್ಮಲ್ಲಿ ಯಾರಾದರೂ ಹೊರಗೆ ಹೋಗಿ ಕರೆಗಂಟೆ ಒತ್ತಿರಿ." ಕೆಕೆ. ಹೇಳಿದಂತೆ ರವಿರಾಜ ಮಾಡುತ್ತಾನೆ. 'ದಯವಿಟ್ಟು ತಮ್ಮ ಹೆಸರು ಹೇಳಿ' ಎನ್ನುವ ವಾಣಿಯೊಂದು ಅಲ್ಲಿ ಅಳವಡಿಸಿರುವ ಸ್ಪೀಕರ್‌ನಿಂದ ಕೇಳಿಸುತ್ತದೆ. ಅದು ಒಳಗೂ ಕೇಳಿಸುತ್ತದೆ. ಅವನು ಮೆಲ್ಲಗೆ 'ರವಿರಾಜ' ಎನ್ನುತ್ತಾನೆ. ಅದೇ ಶಬ್ದ ಒಳಗೆ ದೊಡ್ಡದಾಗಿ ಕೇಳಿಸುತ್ತದೆ.

"ಕೆಕೆ. ದಯವಿಟ್ಟು ನನ್ನನ್ನು ಹೊಗಳಬೇಡಿ. ಇದೆಲ್ಲ ವಿಜ್ಞಾನದ ದೇಣಿಗೆ. ಯಾರಾದರೊಬ್ಬರು ಮಾಡಬೇಕಾದುದನ್ನು, ಮಾಡಬಹುದಾದುದನ್ನು, ಮಾಡಲಿರುವುದನ್ನು ನಾನು ಮಾಡಿದೆ ಅಷ್ಟೆ. ಇರಲಿ ಬಿಡಿ, ನೀವು ನನ್ನ ಪ್ರಶ್ನೆಗೆ ಉತ್ತರ ಕೊಡಲೇ ಇಲ್ಲ."

"ಹಾಂ, ಸರಿ ಸರಿ. ನಾವು ಪ್ರವಾಸಿಗರು, ಜೀಪಿನಲ್ಲಿ ಪ್ರವಾಸ ಹೊರಟಿದ್ದೇವೆ. ನಿನ್ನೆ ರಾತ್ರಿ ಮುರಡೇಶ್ವರದಲ್ಲಿ ಇದ್ದೆವು. ಈದಿನ ಜೋಗ್‌ಫಾಲ್ಸ್ ನೋಡಿ ಅಲ್ಲಿಯೇ ತಂಗುವದಿತ್ತು. ನಾಳೆ ಸಂಜೆಯೊಳಗೆ ಮೈಸೂರು ಮುಟ್ಟಬೇಕು. ಅಲ್ಲಿ ಹೋಟೆಲ್ ಬುಕ್ ಆಗಿದೆ. ಆದರೆ ಈ ಜೀಪ್ ಕೈಕೊಡುತ್ತಿದೆ. ಹೊನ್ನಾವರದಿಂದ ಇಲ್ಲಿ ಬರುವಾಗ ಎರಡು ಸಲ ನಿಂತಿತು. ಅಮೀರ್‌ಚಂದನಿಗೆ ರಿಪೇರಿ ಮಾಡುವುದು ಗೊತ್ತು. ಇಲ್ಲಿ ಮತ್ತೆ ನಿಂತಿತು. ಅಮೀರ್‌ಚಂದ್ ರಿಪೇರಿಯನ್ನೇನೋ ಮಾಡಿದ. ಆದರೆ ನಮಗೆ ಸ್ವಲ್ಪ ಆಯಾಸವಾಗಿತ್ತು. ಕುಡಿಯುವ ನೀರೂ ಮುಗಿದಿತ್ತು. ನಿಮ್ಮ ಮನೆ ಕಾಣಿಸಿತು. ನಿರಾಳವಾಗಿ ಉಸಿರಾಡುವಂತೆ ಆಯಿತು."

"ಮನೆಯ ಮೇಲೆ ಮರ್ಕ್ಯುರಿ ಬಲ್ಬ್ ಹಾಕಿದ್ದು ಇದೇ ಉದ್ದೇಶಕ್ಕಾಗಿ. ವನ್ಯ ಪ್ರಾಣಿಗಳಿಂದ ರಕ್ಷಣೆಯೂ ಸಿಗುತ್ತದೆ. ಚಿಕ್ಕಂದಿನಲ್ಲಿ ನಾನು ಇದೇ ಕಾಡಿನಲ್ಲಿ ಸಾಕಷ್ಟು ಹುಲಿಗಳನ್ನು ಬೇಟೆಯಾಡಿದ್ದನ್ನು ನೋಡಿದ್ದೇನೆ. ಆನೆ ಮನುಷ್ಯರನ್ನು ತುಳಿದು ಕೊಂದಿದ್ದನ್ನು ನೋಡಿದ್ದೇನೆ."

"ನಾವು ರಾತ್ರಿಯೇ ಹೊರಡಲಿದ್ದೇವೆ. ನಿಮಗೇನೂ ತೊಂದರೆಯಾಗಿಲ್ಲವಷ್ಟೆ?"

"ರಾತ್ರಿ ಹೊರಡುವುದು ಬೇಡ. ಊಟ ಮಾಡಿ ರಾತ್ರಿ ಇಲ್ಲೇ ಇರಿ. ಬೆಳಿಗ್ಗೆ ಹೋದರಾಯಿತು. ಈ ಕುರುಡ ಹೇಗೆ ಅಡುಗೆ ಮಾಡುತ್ತಾನೆ ನೋಡಿ."

"ಇಲ್ಲ ಮಿ. ಕೆಕೆ. ಸ್ವಲ್ಪ ತಡವಾದರೂ ಸರಿ ನಾವು ಹೋಗಲೇಬೇಕು. ನಮ್ಮಲ್ಲಿ ಗನ್ ಇದೆ, ಟಾರ್ಚ್ ಇದೆ. ಏನೂ ತೊಂದರೆಯಾಗಲಿಕ್ಕಿಲ್ಲ. ನಾವು ನಾಳೆ ಸಂಜೆಯೊಳಗಾಗಿ ಮೈಸೂರು ತಲುಪಲೇಬೇಕು. ರಾತ್ರಿಯ ಊಟಕ್ಕಾಗುವಷ್ಟು ಸ್ಯಾಂಡ್‌ವಿಚ್ ಮತ್ತು ಫ್ರೈಡ್ ಚಿಕನ್ ಇದೆ. ನೀವು ಅಡಿಗೆ ಮಾಡುವುದು ಬೇಡ, ಜೀಪಿನಿಂದ ನಾವೆಲ್ಲ ತರುತ್ತೇವೆ. ನೀವು ನಮ್ಮೊಂದಿಗೆ ಊಟ ಮಾಡಿ. ನಂತರ ನಾವು ಹೊರಡುತ್ತೇವೆ."

"ನಿಮ್ಮ ಇಷ್ಟ. ಆದರೆ ನೀವು- ಗನ್ ಅಂದರೆ ರಿವಾಲ್ವರ್ ತಾನೆ? -ಅದನ್ನು ಮತ್ತು ಟಾರ್ಚ್‌ಅನ್ನು ಯಾಕೆ ಜೊತೆಗಿಟ್ಟು ಪ್ರವಾಸ ಮಾಡುತ್ತಿದ್ದೀರಿ? ನಿಮ್ಮಲ್ಲಿ ಲೈಸೆನ್ಸ್ ಇದೆ ತಾನೆ? ಇಲ್ಲಿಯ ಪೋಲೀಸರ ಕಿರಿಕಿರಿ ಬಹಳ. ದುಷ್ಕರ್ಮಿಗಳನ್ನು ಧಾರಾಳವಾಗಿ ಓಡಾಡಲು ಬಿಡುತ್ತಾರೆ. ಅಮಾಯಕರಿಗೆ

ಕಿರುಕುಳ ಕೊಡುತ್ತಾರೆ.''

"ಹೋ ಹೋ ಲೈಸೆನ್ಸ್ ಇದೆ ಎಂದೇ ಧಾರಾಡಂಗುರವಾಗಿ ತಿರುಗುತ್ತಿದ್ದೇವೆ. ಟಾರ್ಚ್ ಮಾಮೂಲು.''

"ಸರಿ ಹಾಗಾದರೆ, ಯಾರಾದರಿಬ್ಬರು ಹೋಗಿ ಜೀಪಿನಿಂದ ಆಹಾರ ತನ್ನಿ. ನನ್ನಲ್ಲಿಯೂ ತಯಾರಿಸಿದ ತರಕಾರಿ ಮತ್ತು ರೊಟ್ಟಿಗಳಿವೆ. ಬಿಸಿಮಾಡಿ ತಿನ್ನೋಣ. ಸಮಯವೂ ಆಗುತ್ತಲಿದೆ''.

"ದಯವಿಟ್ಟು ಅವಸರ ಮಾಡಬೇಡಿ ಕೆಕೆ. ಯವರೆ, ನಿಮ್ಮೊಡನೆ ಇನ್ನೂ ಇರಬೇಕು ಎನಿಸುತ್ತಲಿದೆ. ಅಂದಹಾಗೆ ಈ ಜಾಗಟೆಗಳ ಅರ್ಥ ಏನು?''

"ಅವೇ? ಅವು ದೈವ ದಯಪಾಲಿಸಿದ ಅಂಧತ್ವಕ್ಕೆ ನಾನು ಒಡ್ಡಿದ ಸವಾಲು. ಪೃಥ್ವೀರಾಜ ಚೌಹಾಣನ ಶಬ್ದವೇಧಿ ಕತೆ ಗೊತ್ತಿರಬೇಕು ನಿಮಗೆ. ಅವನನ್ನು ಮರಣದಂಡನೆಗೆ ಒಳಪಡಿಸುವ ಮೊದಲು ಸುಲ್ತಾನನಿಗೆ ಅವನ ಆ ಕಲೆಯನ್ನು ಪರೀಕ್ಷಿಸಬೇಕು ಎನಿಸುತ್ತದೆ. ಅವನನ್ನು ಕುರುಡನನ್ನಾಗಿ ಮಾಡಿರುತ್ತಾರೆ. ದರಬಾರದಲ್ಲಿ ಕೈದಿಯನ್ನು ಕರೆತಂದು ಕೈಗಳ ಶೃಂಖಲೆಯನ್ನು ಮಾತ್ರ ಬಿಚ್ಚಿ ಬಿಲ್ಲು ಬಾಣಗಳನ್ನು ಕೊಡುತ್ತಾರೆ. ಚಂದ್ ಬರದಾಯಿ ಪೃಥ್ವೀರಾಜನ ಪ್ರಾಣ ಸ್ನೇಹಿತ ಮತ್ತು ಕವಿ. ಚೌಹಾಣನನ್ನು ಹುರಿದುಂಬಿಸಲು ತನ್ನ ಕವಿತೆ ಆತ್ಮಗತ್ಯ ಎಂದು ಸುಲ್ತಾನನಿಗೆ ಮನಗಾ



ಣಿಸುತ್ತಾನೆ ಚಂದ್ ಬರದಾಯಿ. ಅನುಮತಿ ದೊರೆಯುತ್ತದೆ. ಚಂದ್ ಬರದಾಯಿ ಹಾಡುತ್ತಾನೆ. ಹಾಡಿನ ನಡುವೆ 'ಆಂಠ ಹಾತ್ ಚೌಬೀಸ್ ಗಜ, ಅಂಗುಲ್ ಅಷ್ಟ ಪ್ರಮಾಣ್. ತಾ ಊಪರ್ ಸುಲ್ತಾನ ಹೈ ಮತ್ ಚೂಕೋ ಚೌಹಾನ್' ಎಂದು ಸುಲ್ತಾನ್ ಎಲ್ಲಿ ಕುಳಿತಿದ್ದಾನೆ ಎನ್ನುವ ಸೂಚನೆ ಕೊಡುತ್ತಾನೆ. ದೂರದಲ್ಲಿ ಕಟ್ಟಿದ ಜಾಗಟೆ ಇಂತಹದೇ ಮಾದರಿಯದು. ಗುಲಾಮನೊಬ್ಬ ಜಾಗಟೆ ಬಡಿದು ದೂರ ಸರಿದು ನಿಲ್ಲುತ್ತಾನೆ. ಮರುಕ್ಷಣ ಪೃಥ್ವೀರಾಜ ಬಿಟ್ಟ ಬಾಣ ಜಾಗಟೆಯನ್ನು ಭೇದಿಸುತ್ತದೆ. ಆಶ್ಚರ್ಯ -ಆನಂದ ತಡೆಯಲಾಗದೇ ಸುಲ್ತಾನ್ 'ವಾಹ್‌ವಾ ಶಭಾಸ್' ಎಂದು ಚಪ್ಪಾಳೆ ತಟ್ಟುತ್ತಾನೆ. ಮರುಕ್ಷಣ ಪೃಥ್ವೀರಾಜನ ಇನ್ನೊಂದು ಬಾಣ ಸುಲ್ತಾನನ ಎದೆಯನ್ನು ಸೀಳುತ್ತದೆ. ಪೃಥ್ವೀರಾಜನ ಆ ವಿದ್ಯೆ ಆ ಕತೆ ಓದಿದಾಗಿನಿಂದಲೂ ನನಗೊಂದು ಆಹ್ವಾನವಾಯಿತು. ಕಣ್ಣಿಗೆ ಪಟ್ಟಿ ಕಟ್ಟಿ ಮಕ್ಕಳು ಇನ್ನೊಬ್ಬನನ್ನು ಮುಟ್ಟುವ ಆಟ ಆಡುತ್ತಾರೆ. ಈ ಇನ್ನೊಬ್ಬ ಮಾತಾಡಿದಾಗಲೇ ಅವನು ಯಾವ ದಿಕ್ಕಿನಲ್ಲಿ ಇದ್ದಾನೆ ಎನ್ನುವುದು ಗೊತ್ತಾಗುತ್ತದೆ. ಇದೂ ಒಂದು ತರಹದ ಶಬ್ದವೇಧಿ ವಿದ್ಯೆಯಲ್ಲವೆ? ಚಿಕ್ಕಂದಿನಲ್ಲಿ ನಾನು ಈ ಆಟದಲ್ಲಿ ನಿಪುಣನಾಗಿದ್ದೆ. ಕಣ್ಣು ಕಟ್ಟಿಕೊಂಡು ಕ್ಷಣಮಾತ್ರದಲ್ಲಿ ಶಬ್ದ ಬಂದ ದಿಕ್ಕಿನಲ್ಲಿ ಓಡಿ ಮುಟ್ಟುತ್ತಿದ್ದೆ. ಕುರುಡನಾದ ಮೇಲೆ ಅದನ್ನೇ ಈ ಜಾಗಟೆಗಳ ಮೂಲಕ ಅಭ್ಯಸಿಸಿದೆ. ನಿಮ್ಮಲ್ಲಿ ಯಾರಾದರೂ ಆ ಮೂಲೆಯಲ್ಲಿರುವ ಉದ್ದದ ಕೋಲಿನಿಂದ ಯಾವುದಾದರೂ ಜಾಗಟೆ ಬಡಿಯಿರಿ." ಅಮೀರ್‌ಚಂದ್ ಏಳುತ್ತಾನೆ. ಅಷ್ಟರಲ್ಲಿ ಕೆಕೆ. ಡ್ರಾಯರಿನಿಂದ ಆಟಿಗೆಯಂತಹ ಪಿಸ್ತೂಲು ತೆಗೆಯುತ್ತಾರೆ. ಅದರಲ್ಲಿ ಫೈಬರ್‌ಗ್ಲಾಸ್ ಗುಂಡುಗಳು ಇರುತ್ತವೆ. ಅಮೀರ್‌ಚಂದ್ ಜಾಗಟೆ ಬಡಿದು ದೂರಸರಿದು ನಿಲ್ಲುವಷ್ಟರಲ್ಲಿ ಕೆಕೆ. ಯವರ ಪಿಸ್ತೂಲಿನಿಂದ ಹೊರಟ ಗುಂಡು ಅದೇ ಜಾಗಟೆಯನ್ನು ಬಡಿಯುತ್ತದೆ. ಇದೇ ಪರೀಕ್ಷೆ ಅಲ್ಲಿರುವ ಎಲ್ಲ ಜಾಗಟೆಗಳಿಂದಲೂ ನಡೆಯುತ್ತದೆ. "ನೋಡಿ," ಕೆಕೆ. ಎನ್ನುತ್ತಾರೆ, "ಈ ಜಾಗಟೆಗಳು ಬೇರೆ ಬೇರೆ ಪ್ರಮಾಣದ ಧಾತುಗಳಿಂದ ನಿರ್ಮಿಸಿದವುಗಳು. ಆದ್ದರಿಂದ ಬೇರೆ ಬೇರೆ ಶಬ್ದ ಹೊರಡಿಸುತ್ತವೆ. ಈಗ ನಿಮಗೆ ಬೇಕಾದಹಾಗೆ ಸ್ಥಾನಪಲ್ಲಟ ಮಾಡಿ." ನಾಲ್ಕೂ ಜನ ಹಾಗೆಯೇ ಮಾಡುತ್ತಾರೆ. ಈಗಲೂ ಕೆಕೆ. ತಪ್ಪದೇ ಅದೇ ಜಾಗಟೆಗೆ ಗುಂಡು ಹೊಡೆಯುತ್ತಾರೆ.

"ಅದ್ಭುತ, ಅತೀ ಅದ್ಭುತ," ಉದ್ಗಾರ ತೆಗೆಯುತ್ತಾರೆ ನಾಲ್ವರೂ.

"ಇದರಲ್ಲಿ ಅದ್ಭುತವಾದುದೇನೂ ಇಲ್ಲ. ಆಸಕ್ತಿ ಇದ್ದರೆ, ಪ್ರಯತ್ನ ಮಾಡಿದರೆ ಮನುಷ್ಯ ಏನನ್ನೂ ಸಾಧಿಸಬಲ್ಲ. 'ಅವಶ್ಯಕತೆಯೇ ಆವಿಷ್ಕಾರದ ಜನನಿ' ಎಂದು ಒಂದು ಇಂಗ್ಲಿಷ್ ಗಾದೆ ಇದೆ. ಕುರುಡನಿಗೆ ಇದರ ಅವಶ್ಯಕತೆ ಇತ್ತು ಅಷ್ಟೆ. ಮೇಲಾಗಿ ಕಣ್ಣಿಲ್ಲದ ಕೊರತೆಯನ್ನು ನನ್ನ ಸ್ಪರ್ಶ, ಶ್ರವಣ ಮತ್ತು ಘ್ರಾಣೇಂದ್ರಿಯಗಳಿಂದ ನಾನು ತುಂಬಿಕೊಳ್ಳಬೇಕಿತ್ತು. ನೋಡಿ, ಇಲ್ಲಿಗೆ ಬಂದಾಗ ನೀವು ಕೈ ಕುಲುಕಿದ್ದೀರಿ. ನೀವು ಮಾತನಾಡಿದಾಗ ನನಗೆ ಈಗ ಯಾರು ಎಂದು ಗೊತ್ತಾಗಿಬಿಟ್ಟಿದೆ. ನೀವು ಮಾತನಾಡದಿದ್ದರೂ ಕೇವಲ ಕೈ ಕುಲುಕಿದರೆ ನಾನು ನಿಮ್ಮ ಹೆಸರು ಹೇಳಬಲ್ಲೆ. ಬನ್ನಿ ಒಬ್ಬೊಬ್ಬರಾಗಿ." ಅದರ ಪರೀಕ್ಷೆಯೂ ಆಯಿತು. ಪ್ರತಾಪ್‌ಸಿಂಗ್ ಕೈ ಕುಲುಕುತ್ತಿರುವಂತೆಯೇ ಕೆಕೆ. ಹೇಳಿದರು. "ನೀವು ಪ್ರತಾಪ್‌ಸಿಂಗ್, ಈಗ ನಾನು ಖಂಡಿತವಾಗಿಯೂ ಹೇಳಬಲ್ಲೆ ನೀವು ಸಕೇಶಿಯಲ್ಲ, ಮೋನಾ ಅಂದರೆ ಕ್ಲೀನ್ ಶೇವ್. ಸರಿ ತಾನೆ?"

"ಅದು ಹೇಗೆ ಹೇಳಿದಿರಿ?" ಪ್ರತಾಪ್ ಪ್ರಶ್ನೆ.

"ಪುನಃ ಅದೇ ತರ್ಕಶಾಸ್ತ್ರ. ಮೊದಲು ಕೈ ಕುಲುಕಿದಾಗ ನೀವೆಲ್ಲ ಹತ್ತಿರ ಹತ್ತಿರ ನಿಂತಿದ್ದಿರಿ. ಯಾರು ಆಫ್ಟರ್ ಶೇವ್ ಲೋಶನ್ ಹಚ್ಚಿದ್ದಾರೆಂದು ಗೊತ್ತಿರಲಿಲ್ಲ. ಈಗ ನೀವು ಒಬ್ಬೊಬ್ಬರಾಗಿ ಕೈ ಕುಲುಕಿದಿರಿ. ನೀವು ಕೈಕುಲುಕುತ್ತಿರುವಾಗ ಮಾತ್ರ ನನಗೆ ಆಫ್ಟರ್ ಶೇವ್ ಲೋಶನ್ ವಾಸನೆ ಬಂತು."

"ಅದು ಹೇಗೆ ಆಫ್ಟರ್ ಶೇವ್ ಅಂತ ತಿಳಿದಿರಿ? ಅದು ಪರ್‌ಫ್ಯೂಮ್ ಸ್ಪ್ರೇ ಕೂಡ ಆಗಿರಬಹುದಲ್ಲ?"

"ನೋ! ನೋ!! ನೋ!!! ಅದು ಖಂಡಿತ ಆಫ್ಟರ್ ಶೇವ್ ಲೋಶನ್ ಪರಿಮಳ. ನಾನದರ

ಬ್ರಾಂಡ್ ಕೂಡ ಹೇಳಬಲ್ಲೆ. ಅದು 'ಎಕ್ಸೋಟಿಕ್ ಮಸ್ಕ್'. ಆ ಕಂಪನಿಯವರು ಈ ಆಫ್ಟರ್ ಶೇವ್ ಬಿಟ್ಟರೆ ಬೇರಾವ ಪ್ರಾಡಕ್ಟನ್ನೂ ತಯಾರಿಸುವದಿಲ್ಲ."

ಪ್ರತಾಪ್‌ಸಿಂಗ್ ಆಶ್ಚರ್ಯ ಸೂಚಿಸಿ ಒಪ್ಪಿಕೊಂಡ. ಕೆಕೆ. ಮುಂದುವರಿಸಿದರು, "ನಿಮ್ಮ ನಾಲಿಗೆಯೂ ಸ್ಪರ್ಶ ಜ್ಞಾನದ ಒಂದು ಅಂಗ. ಸಕ್ಕರೆ, ಬೆಲ್ಲ, ಗ್ಲೂಕೋಸ್, ಸ್ಯಾಕರಿನ್ ಎಲ್ಲ ಸಿಹಿಯೇ. ಆದರೆ ಆ ಸಿಹಿ ಬೇರೆ ಬೇರೆ ಎನ್ನುವುದನ್ನು ಕಂಡುಹಿಡಿಯುವುದು ನಾಲಿಗೆಯೆ. ಒಮ್ಮೆ ಸೈನ್ಯದ ಉಚ್ಚ ಅಧಿಕಾರಿಗಳ ಮನೆಯಲ್ಲಿ ಪಾರ್ಟಿ ಇತ್ತು. ವಿಸ್ಕಿ ಸರ್ವ್ ಮಾಡಲಾಯಿತು. ಪಾರ್ಟಿಯ ನಡುವೆ ಮೊದಲ ದಿನ ನೋಡಿದ ಇಂಗ್ಲಿಷ್ ವಾರ್ ಚಿತ್ರ 'ಸ್ಕ್ವಾಡ್ರನ್ ೪೨' ಬಗ್ಗೆ ಮಾತು ಸಾಗಿತ್ತು. 'ವಿಸ್ಕಿ ಯಾವುದು?' ಕೇಳಿದರು ಒಬ್ಬರು. 'ರಾಯಲ್ ವ್ಯಾಟ್' ಅಂದರು ನಮ್ಮ ಆತಿಥೇಯರು. ನಾನು ಕೂಡಲೇ ನಮ್ರನಾಗಿ ಅದನ್ನು ನಿರಾಕರಿಸಿ, 'ಅದು ಮಸ್ಟಂಗ್ ಗೋಲ್ಡ್' ಎಂದೆ. ಆತಿಥೇಯರು ನನ್ನ ತರ್ಕ ಒಪ್ಪಲಿಲ್ಲ. ಕೊನೆಗೆ ಬಟ್ಲರ್‌ನನ್ನು ಕರೆಸಿದರು. ಬಟ್ಲರ್ ನಮ್ರನಾಗಿಯೇ ಹೇಳಿದ, "ಸರ್ ರಾಯಲ್ ವ್ಯಾಟ್ ಖಾಲಿಯಾಗಿತ್ತು. ಸಾಯಂಕಾಲ ಕ್ಯಾಂಟೀನ್‌ಗೆ ಹೋಗಿದ್ದೆ. ಆದರೆ ಶಿಲ್ಕಿನಲ್ಲಿ ಇದ್ದಿಲ್ಲ. ಅದಕ್ಕೊಂದೇ ಮಸ್ಟಂಗ್ ಗೋಲ್ಡ್ ಸರ್ವ್ ಮಾಡಿದೆ. ಕ್ಷಮಿಸಿ ಸರ್, ತಮಗೆ ಹೇಳುವುದು ಮರೆತುಹೋಯಿತು. 'ಅಂದ' 'ಇಟ್ಸಾಲ್ ರೈಟ್' ಎಂದರು ಆತಿಥೇಯರು ಮತ್ತು ನಮ್ಮತ್ತ ತಿರುಗಿ, 'ನಿಜವಾಗಿ ನೋಡಿದರೆ ಮಸ್ಟಂಗ್ ಗೋಲ್ಡ್ ರಾಯಲ್ ವಾಟ್‌ಗಿಂತ ಉತ್ತಮ ವಿಸ್ಕಿ. ಆದರೆ ನಾನು ತಿಳಿದಿದ್ದೆ ಮಸ್ಟಂಗ್ ಗೋಲ್ಡ್ ಮುಗಿದುಹೋಗಿದೆ ಎಂದು. ಒಂದು ಮಾತು ಮಾತ್ರ ಇಂದು ಸಾಬೀತಾಯಿತು. ಕ್ಯಾಪ್ಟನ್ ಕೆಕೆ. ರುಚಿಯಲ್ಲಿ ನಿಮ್ಮನ್ನು ಮೀರಿಸುವವರಿಲ್ಲ. ಏನಿದರ ವಿಶೇಷ?" ನಾನು ಪುನಃ ನಮ್ರನಾಗಿಯೇ ಹೇಳಿದೆ, "ಏನಿಲ್ಲ ಸರ್, ನಾನು ಕುಡಿಯುವುದಕ್ಕಿಂತ ಪರೀಕ್ಷೆ ಮಾಡುವುದೇ ಹೆಚ್ಚು. ಅದೇ ನನ್ನ ರುಚಿ ಮತ್ತು ಅಭಿರುಚಿ ಕೂಡ.' ಕೆಕೆ. ಮುಂದುವರಿಸುತ್ತಾರೆ. "ನಾನು ಹೇಳಿದೆನಲ್ಲ ಆಸಕ್ತಿಯಿದ್ದರೆ ಕಠಿಣ ಪರಿಶ್ರಮವಿದ್ದರೆ ಏನನ್ನೂ ಸಾಧಿಸಬಹುದು. ಈ ಶಬ್ದವೇಧಿ ವಿದ್ಯೆ ಸಾಧಿಸಬೇಕಾದರೆ ಎಷ್ಟು ಕಷ್ಟಪಡಬೇಕಾಯಿತು ಗೊತ್ತೆ? ಊಟ-ತಿಂಡಿ, ನಿದ್ದೆಯ ಸಮಯ ಬಿಟ್ಟರೆ ಹಗಲಿರುಳೂ ಅದನ್ನೇ ಮಾಡುತ್ತಿದ್ದೆ. ಜನ್ನ ಜಾಗಟೆ ಬಡಿದು ಬಡಿದು ಸುಸ್ತಾಗಿಬಿಡುತ್ತಿದ್ದ. ಆದರೆ ನನಗೋ ಪ್ರತಿಸಲ ಸುಲ್ತಾನನ ಎದೆ ಸೀಳಿದಂತಹ ಸಂತೋಷವಾಗುತ್ತಿತ್ತು. ಅಂದಹಾಗೆ ನಿಮ್ಮಲ್ಲಿ ಯಾರು ಕುಡಿಯುವವರು? ನನಗೆ ಊಟದ ಮೊದಲು ಒಂದು ಅಥವಾ ಎರಡು ಪೆಗ್ ಕುಡಿಯಬೇಕು."

"ನಾವೆಲ್ಲ ಕುಡಿಯುವವರೆ. ನಮ್ಮ ಜೀಪಿನಲ್ಲಿ ಒಂದೆರಡು ಬಾಟಲಿಗಳಿವೆ. ಹೋಗಿ ತರುತ್ತೇವೆ."

"ಬೇಡ ಬೇಡ, ನೀವು ತರುವದು ಬೇಡ. ನನ್ನಲ್ಲಿ ಸಾಕಷ್ಟು ಸ್ಟಾಕ್ ಇದೆ. ಗೇರಸಪ್ಪೆಯಲ್ಲಿ ಮಿಲಿಟರಿ ಕ್ಯಾಂಟೀನ್ ಇಲ್ಲ. ಪ್ರತಿ ತಿಂಗಳೂ ಹೊನ್ನಾವರಕ್ಕೆ ಜೊತೆಗೆ ಹೋಗಲು ಮಿಲಿಟರಿಯಿಂದ ರಿಟೈರ್ ಆದ ಮಿತ್ರರೊಬ್ಬರಿದ್ದಾರೆ. ಈ ಮನೆ ಕಟ್ಟುವಲ್ಲಿ ನನಗೆ ಸಹಾಯ ಮಾಡಿದವರು. ಇಬ್ಬರೂ ಒಂದು ತಿಂಗಳಿಗೂ ಆಗುವಷ್ಟು ತರುತ್ತೇವೆ." ಎಂದವರೆ ಬೀರುವಿನಿಂದ ಐದು ಗ್ಲಾಸ್ ಮತ್ತು ನೀರು ತರುತ್ತಾರೆ. "ನನ್ನಲ್ಲಿ ವಿಸ್ಕಿ, ಬ್ರಾಂಡಿ ಮತ್ತು ರಮ್ ಮಾತ್ರ ಇದೆ. ನೀವು ವೋಡ್ಕಾ ಮತ್ತು ಜಿನ್ ಕುಡಿಯುವವರಲ್ಲ ತಾನೆ?"

"ವಿಸ್ಕಿ ಆಗಬಹುದು."

"ಸರಿ." ಎಂದು ಕೆಕೆ. ವಿಸ್ಕಿಯ ಬಾಟಲು ತರುತ್ತಾರೆ ಮತ್ತು "ನಿಮಗೆ ಎಷ್ಟು ಬೇಕೋ ಅಷ್ಟು ಹಾಕಿಕೊಳ್ಳಿ. ಸೋಡಾ ಇಲ್ಲ, ನೀರು ಮಾತ್ರ." ಎಂದು ಹೇಳುತ್ತಾರೆ.

ಅನೂಪ್‌ಕುಮಾರ್ ಕೇಳುತ್ತಾನೆ, "ಬೇಕಾದಷ್ಟು ಹಾಕಿಕೊಳ್ಳಿ ಎಂದಿರಿ, ಆದರೆ ಈ ಬಾಟಲಿಯಲ್ಲಿ ಎಷ್ಟು ಇದೆ ಎಂದು ಹೇಗೆ ತಿಳಿದಿರಿ?"

"ಅದು ತೀರ ಸುಲಭ ಬಾಟಲಿ ಸ್ವಲ್ಪ ಅಲುಗಾಡಿದರೆ ಅದರಲ್ಲಿರುವ ದ್ರವದ ಪ್ರಮಾಣ ಎಷ್ಟು ಎಂಬುದು ಗೊತ್ತಾಗಿಬಿಡುತ್ತದೆ. ನಾನು ಇಂದು ರಮ್ ಕುಡಿಯುತ್ತೇನೆ. ನಿಮಗೆ ಕೊಟ್ಟ ಬಾಟಲಿಯಲ್ಲಿ ಮುಕ್ಕಾಲು ಬಾಟಲಿಗಿಂತ ಜಾಸ್ತಿ

ಇದೆ. ಸರಿತಾನೆ? ಕಡಿಮೆಯಾದರೆ ಮತ್ತೂ ಇದೆ. ನಿಸ್ಸಂಕೋಚವಾಗಿ ಕುಡಿಯಿರಿ. ನನಗೆ ಅದೇ ಸಂತೋಷ," ಎಂದವರೇ ಫ್ರಿಜ್‌ನಿಂದ ಮಂಜುಗಡ್ಡೆ ತರುತ್ತಾರೆ. "ನಾನು ಆನ್ ದಿ ರಾಕ್ಸ್" ಎಂದು ತಮ್ಮ ಗ್ಲಾಸಿನಲ್ಲಿ ಮಂಜುಗಡ್ಡೆ, ರಮ್ ಹಾಕಿ ಕೈಯಲ್ಲಿ ಗ್ಲಾಸ್ ಹಿಡಿದು ಎದ್ದು ಬಂದು ಮೂಲೆಯತ್ತ ಹೋಗುತ್ತಾ, "ನೀವು ಕುಡಿಯುತ್ತಿರುವಂತೆ ಒಂದೆರಡು ಹಳೆ ಸಿನಿಮಾ ಹಾಡು ನುಡಿಸುತ್ತೇನೆ ಕೇಳಿ. ನಿಮಗಿಷ್ಟವಾದ ಹಾಡಿನ ಹೆಸರು ಹೇಳಿದರೆ ಅದನ್ನೂ ನುಡಿಸುತ್ತೇನೆ," ಎಂದು ಪಿಯಾನೋ ಬಾಗಿಲು ತೆರೆಯುತ್ತಾರೆ. ಇಷ್ಟು ದೊಡ್ಡ ಪಿಯಾನೋವನ್ನು ಆಗಂತುಕರು ಸಿನಿಮಾದಲ್ಲಿ ಮಾತ್ರ ನೋಡಿದ್ದಿರಬಹುದು. ನಾಲ್ವರೂ ಕುತೂಹಲದಿಂದ ಹತ್ತಿರ ಬರುತ್ತಾರೆ. ಕೆಲವೊಂದು ಪಿಯಾನೋ ಕೀಗಳ ಮೇಲೆ ಟೈಪ್‌ರೈಟರ್‌ನಲ್ಲಿರುವಂತಹ ಅಂಕಿ-ಅಕ್ಷರಗಳು ಅವರಿಗೆ ಕಂಡವು. ಅವುಗಳ ಬಗ್ಗೆ ಕೇಳಬೇಕೆನಿಸಿತು. ಆದರೆ ಈಗಲೇ ಕುಡಿಯಲು ಪ್ರಾರಂಭಿದ್ದರಿಂದ ಮತ್ತೆ ಮಾತು ಬೇಡ ಎಂದು ಅವರು ಸುಮ್ಮನಾದರು. ಹತ್ತಿರ ನಿಂತ ಅವರನ್ನುದ್ದೇಶಿಸಿ ಕೆಕೆ. "ನಾನು ಸ್ವಲ್ಪ ಸ್ವರ ಹೊಂದಿಸಿಕೊಳ್ಳುತ್ತೇನೆ, ನಿಮಗೆ ಬೋರಾಗಬಹುದು. ಸ್ವಲ್ಪ ಕುಳಿತುಕೊಳ್ಳಿ," ಅಂದಾಗ ಆಗಂತುಕರು ಕುಳಿತುಕೊಳ್ಳುತ್ತಾರೆ. ಮೊದಲು ಪಿಯಾನೋ ಮೇಲಿದ್ದ ಕೆಲವು ಸ್ವಿಚ್‌ಗಳನ್ನು ಮೇಲೆ, ಕೆಳಗೆ, ಆಚೆ, ಈಚೆ ಮಾಡುತ್ತಾರೆ. ನಂತರ ಪಿಯಾನೋ ಕೀಗಳ ಮೇಲೆ ಚಿತ್ರ ವಿಚಿತ್ರವಾಗಿ ಕೈಯಾಡಿಸುತ್ತಾರೆ. ಚಿತ್ರ ವಿಚಿತ್ರವಾದ ಸ್ವರಗಳನ್ನು ಹೊರಡಿಸುತ್ತಾರೆ, ಒಂದೈದು ನಿಮಿಷ ಮಾತ್ರ. ನಂತರ ಕೆಕೆ. ಸುಶ್ರಾವ್ಯವಾಗಿ ಅನೂಪ್ ಜಲೋಟಾರ 'ಮೈನಹಿ ಮಾಖನ ಖಾಯೋ' ಭಜನೆ ನುಡಿಸುತ್ತಾರೆ. ಕಿಶೋರ್‌ಕುಮಾರ್ ಅವರ 'ಝುಮರೂ', ಮುಖೇಶ್ ಅವರ 'ಜಾನೆ ಕಹಾ ಗಯೇ ಓ ದಿನ್' ನುಡಿಸುತ್ತಾರೆ. ಆಗಂತುಕರ ಅಪೇಕ್ಷೆಯ ಮೇರೆಗೆ ಮತ್ತೆ ಮೂರೋ ನಾಲ್ಕೋ ಗೀತೆಗಳು ಆಗುತ್ತವೆ. ಆಗಂತುಕರಲ್ಲಿ ಒಬ್ಬ, "ಇನ್ನು ಊಟ ಮಾಡೋಣವೇ? ನಾವು ಹೊರಡಬೇಕಲ್ಲ," ಅನ್ನುತ್ತಾರೆ.

ಪಿಯಾನೋ ಪ್ರಾರಂಭಮಾಡುವ ಮೊದಲೆ ಕೆಕೆ.ಯ ಅಪೇಕ್ಷೆಯ ಮೇರೆಗೆ ರವಿರಾಜ ಮತ್ತು ಅನೂಪ್‌ಕುಮಾರ್ ಹೋಗಿ ಸ್ಯಾಂಡ್‌ವಿಚ್ ಮತ್ತು ಫ್ರೈಡ್ ಚಿಕನ್ ತಂದಿದ್ದರು. ಕೆಕೆ. ತಮ್ಮಲ್ಲಿದ್ದ ಭಾಜಿಯನ್ನೂ ರೊಟ್ಟಿಯನ್ನೂ ಬಿಸಿ ಮಾಡಿದರು. ಚಿಕನ್ನನ್ನು ಸ್ವಲ್ಪ ಹೊತ್ತು ಡೀಪ್‌ಗ್ರಿಲ್ ಮಾಡಿದ್ದರು. ಒಂದೆರಡು ಪೆಗ್ ಕುಡಿತ. ನಂತರ ಮಸಾಲೆದಾರ್ ಊಟ. ಬಾಯಿ ಚಪ್ಪರಿಸುತ್ತಾ ಹೊಡೆದರು ಆಗಂತುಕರು. ಕೆಕೆ. ಇನ್ನೂ ಸಾವಕಾಶವಾಗಿ ಉಣ್ಣುತ್ತಿದ್ದರು.

"ನಮ್ಮದಾಯಿತು ಮಿ. ಕೆಕೆ. ನಾವಿನ್ನು ಹೊರಡಬೇಕು."

"ಈಗ ಅಪರಾತ್ರಿ, ಅಮಾವಾಸ್ಯೆ ಬೇರೆ. ನಿಮಗೆ ಹೋಗಲೇಬೇಕೋ? ಇಲ್ಲಿ ರಾತ್ರಿ ಕಳೆದು ನಾಳೆ ನಸುಕಿನಲ್ಲಿ ಹೋದರಾಗದೆ?"

"ಇಲ್ಲ ಮಿ. ಕೆಕೆ. ನಿಜ ಹೇಳಬೇಕೆಂದರೆ ನಿಮ್ಮೊಡನೆ ಕಳೆದಷ್ಟೂ ಸಮಯ ಕಡಿಮೆ ಎಂದೆನಿಸುತ್ತದೆ ನಮಗೆ. ಆದರೇನು ಮಾಡುವದು?"

"ಸರಿ ಸರಿ, ಊಟ ಮಾಡಿದ ತಕ್ಷಣ ಹೊರಡಬಾರದು. ಸ್ವಲ್ಪ ಕುಳಿತುಕೊಳ್ಳಿ. ನಾನೂ ನನ್ನ ಊಟ ಮುಗಿಸಿದೆ" ಎಂದು ಎದ್ದರು ಕೆಕೆ. ಇನ್ನೊಂದು ಹದಿನೈದು ಇಪ್ಪತ್ತು ನಿಮಿಷ ಮಾತನಾಡಿದರು. ಸ್ವಲ್ಪ ದೂರದಲ್ಲಿರುವ ಜ್ವಾಲಮ್ಮನ ಗುಡಿಯಿಂದ ರಾತ್ರಿ ಪೂಜೆ ಗಂಟೆ ಜಾಗಟೆಗಳ ಸ್ವರ ಕೇಳತೊಡಗಿತು. "ಸರಿ. ನಾವಿನ್ನು ಹೊರಡುತ್ತೇವೆ. ನಿಮ್ಮನ್ನೆಂದಿಗೂ ಮರೆಯಲಾರೆವು ಮಿ. ಕೆಕೆ. ದೇವರ ಇಚ್ಛೆಯಿದ್ದರೆ ಇನ್ನೊಮ್ಮೆ ಭೆಟ್ಟಿಯಾಗೋಣ."

"ನಿಮ್ಮ ಇಚ್ಛೆ ನೆರವೇರಲಿ, ಅದು ನನ್ನ ಇಚ್ಛೆ ಕೂಡ. ನಾನು ದೇವರಲ್ಲಿ ಪ್ರಾರ್ಥಿಸುತ್ತೇನೆ. ಹೋಗಿ ಬನ್ನಿ. ವಿಶ್ ಯು ಹ್ಯಾಪಿ ಜರ್ನಿ, ಸ್ಟೇ ಅಂಡ್ ಟೂರ್. ಬೈ ಬೈ." ಕೆಕೆ. ಒಳಗೆ ಬಂದು ಬಾಗಿಲು ಹಾಕುತ್ತಾರೆ.

ಇಚ್ಛೆ ಮರುದಿನವೇ ಪೂರ್ತಿಯಾಗಲಿದೆ ಎನ್ನುವುದನ್ನು ಕನಸುಮನಸಿನಲ್ಲಿಯೂ ಭಾವಿಸಿರಲಿಲ್ಲ ಆಗಂತುಕರು. ಅವರು ಗೇರಸಪ್ಪೆಯ ಪೋಲೀಸ್ ಸ್ಟೇಷನ್‌ನಲ್ಲಿ ಕೈಕೋಳ ತೊಡಿಸಿಕೊಂಡು ನೆಲದ ಮೇಲೆ ಕುಳಿತಿದ್ದರು. ಇನ್‌ಸ್ಪೆಕ್ಟರ್ ವೈಂಗಣಕರ್ ಅಂತರ್ ರಾಜ್ಯ ಮಟ್ಟದ ವಿಗ್ರಹಚೋರರ



ತಂಡವನ್ನು ಅರೆಸ್ಟ್ ಮಾಡಿದ ಖುಷಿಯಲ್ಲಿ ಅನೇಕ ಮೇಲಧಿಕಾರಿಗಳ ಜತೆ ಫೋನಿನಲ್ಲಿ ಮಾತನಾಡುತ್ತಿದ್ದರು. ಇನ್ನೊಂದು ಕಡೆ 'ಶರಾವತಿ ಟೈಮ್ಸ್', 'ಕರಾವಳಿ ಎಕ್ಸ್‌ಪ್ರೆಸ್,' 'ಸಹ್ಯಾದ್ರಿ ಸಮಾಚಾರ' ಪತ್ರಿಕೆಗಳ ವರದಿಗಾರರು ಕುಳಿತುಕೊಂಡಿದ್ದರು. ಮತ್ತೊಂದು ಕಡೆ ಗೇರಸಪ್ಪೆಯ ಗಣ್ಯ ವ್ಯಕ್ತಿಗಳು ಕುಳಿತಿದ್ದರು. ಹೊರಗೆ ಕುತೂಹಲಭರಿತ ಜನಸಂದಣಿ. ಅವರೆಲ್ಲರೂ ಯಾರದೋ ನಿರೀಕ್ಷೆಯಲ್ಲಿದ್ದರು. ಅಷ್ಟೊತ್ತಿಗೆ ಹೊರಗೆ ಥಂಡರ್ ಮೋಟರ್ ಬೈಕ್‌ನ ಸಪ್ಪಳ. ಈ ಶಬ್ದ ಗೇರಸಪ್ಪೆಯ ಜನತೆಗೆಲ್ಲ ಚಿರಪರಿಚಿತ.

ಇನ್‌ಸ್ಪೆಕ್ಟರ್ ವೈಂಗಣಕರ್ ತಟ್ಟನೆದ್ದು ಬಾಗಿಲತನಕ ಬಂದು "ಗುಡ್ ಮಾರ್ನಿಂಗ್ ಕ್ಯಾಪ್ಟನ್, ವೆಲ್‌ಕಮ್ ಟು ಯು," ಅನ್ನುತ್ತಾರೆ.

ಒಳಗೆಬಂದ ವ್ಯಕ್ತಿಯನ್ನು ನೋಡಿ ಆಗಂತುಕರು ದಿಗ್ಭ್ರಾಂತರಾಗುತ್ತಾರೆ. ಒಳಗೆ ಬಂದವರೇ ಕೆಕೆ. ಕೈದಿಗಳತ್ತ ತಿರುಗಿ, "ಕ್ಷಮಿಸಿ, ನಿನ್ನೆ ನಿಮ್ಮನ್ನು ನೋಡುವ ಭಾಗ್ಯ ನನ್ನದಾಗಿರಲಿಲ್ಲ, ಆದ್ದರಿಂದ ಯಾರು ಯಾರೆಂದು ಹೇಳಲಾರೆ. ನೀವು ಮಾತನಾಡಿದರೆ ಅಥವಾ ಕೈಕುಲುಕಿದರೆ ಹೇಳಬಲ್ಲೆ," ಎಂದಾಗ ಆಗಂತುಕರು ತಲೆತಗ್ಗಿಸುತ್ತಾರೆ.

ಇನ್‌ಸ್ಪೆಕ್ಟರ್ ಶುರುಮಾಡುತ್ತಾರೆ, "ಇನ್ನು ಕಾಯಲಾರೆವು ಕ್ಯಾಪ್ಟನ್. ವರದಿಗಾರರು, ನಮ್ಮ ಸಿಬ್ಬಂದಿ ಸಹಿತವಾಗಿ ಎಲ್ಲರೂ ನಿಮ್ಮ ವಿವರಣೆಗಾಗಿ ಕಾದಿದ್ದೇವೆ," ಎನ್ನುತ್ತಾರೆ.

ಕೆಕೆ. ಗಂಟಲು ಸರಿಪಡಿಸಿಕೊಂಡು ಹೇಳತೊಡಗುತ್ತಾರೆ, "ನೋಡಿ, ಈಗ್ಗೆ ಕೆಲವು ದಿನಗಳ ಹಿಂದೆ ಗೇರಸಪ್ಪೆಯ ಬಸ್ತೀ ಕಾಡಿನ ಜ್ವಾಲಮ್ಮ ದೇವಸ್ಥಾನದ ಬಗ್ಗೆ ಸಚಿತ್ರವಾದ ಲೇಖನ ದೇಶದ ಪ್ರಮುಖ ಪತ್ರಿಕೆಯೊಂದರಲ್ಲಿ ಪ್ರಕಟವಾಗಿತ್ತು. ಆ ಲೇಖನದಲ್ಲಿ ಗೇರಸಪ್ಪೆಯ ಇತಿಹಾಸ, ರಾಣಿ ಭೈರಾದೇವಿಯ ಆಳ್ವಿಕೆ, ಜೈನರ ಬಸದಿ ಇವುಗಳ ಬಗ್ಗೆ ವಿವರವಾಗಿ ಬರೆಯಲಾಗಿತ್ತು. ಅದೇ ಲೇಖನದಲ್ಲಿ ಜಾಲಮ್ಮನ ಮೂರ್ತಿ ಸಾವಿರಾರು ವರ್ಷಗಳಷ್ಟು ಪುರಾತನವಾದದ್ದೆಂದೂ, ಅತ್ಯಮೂಲ್ಯ ಧಾತುಗಳಿಂದ ಮಾಡಿದ್ದೆಂದೂ ಬರೆಯಲಾಗಿತ್ತು. ಅದೇ ದಿನಗಳಲ್ಲಿ ರಾಜ್ಯದಲ್ಲಿ ಅಂತಾರಾಷ್ಟ್ರೀಯ ಮಟ್ಟದ ವಿಗ್ರಹಚೋರರ ಗುಂಪೊಂದು ತನ್ನ ಕೈಚಳಕ ತೋರಿಸುತ್ತಿರುವ ಬಗ್ಗೆ ಸುದ್ದಿಗಳು ಬರುತ್ತಿದ್ದವು. ಅಂದಿನಿಂದಲೂ ಈ ವಿಗ್ರಹಚೋರರು ಆ ಲೇಖನವನ್ನು ಓದಿ ಜ್ವಾಲಮ್ಮನ ಮೂರ್ತಿಯನ್ನು ಕಳವು ಮಾಡುವ ಬಗ್ಗೆ ಯೋಜನೆ ಮಾಡಬಹುದು ಎಂಬ ಅನುಮಾನ ನನ್ನನ್ನು ಕಾಡುತ್ತಲೇ ಇತ್ತು. ಈ ದೇವಸ್ಥಾನ ನನ್ನ ಕಾಡಿನ ಮನೆಗಿಂತ ಸ್ವಲ್ಪವೇ ದೂರದಲ್ಲಿ ಇದೆ. ನನ್ನ ಅನುಮಾನವನ್ನು ನಾನು ಇನ್‌ಸ್ಪೆಕ್ಟರ್ ವೈಂಗಣಕರ್ ಅವರಲ್ಲಿ ವ್ಯಕ್ತಪಡಿಸಿದಾಗ ಅವರೂ ತಾವು ಜಾಗರೂಕರಾಗಿರುವಂತೆ ಹೇಳಿದರು. ಅನಂತರ ದೇವಾಲಯದ ಅರ್ಚಕರಲ್ಲಿ ಆ ಕುರಿತು ಮಾತನಾಡಿದ್ದೆ. ಬ್ರಹ್ಮಚಾರಿ ಅರ್ಚಕರು ಕಟ್ಟಕಾಡಿನ ಆ ದೇವಸ್ಥಾನದಲ್ಲಿ ಒಂಟಿಯಾಗಿ ಇರುತ್ತಾರೆ. ಅವರು ಹೊರಗೆ ಹೋಗುವದೇ ಕಡಿಮೆ. ಅವರಿಗೆ ಬೇಕಾದ ಸಾಮಾನುಗಳನ್ನು ನಾನು ಅಥವಾ ಜನ್ನ ಗೇರಸಪ್ಪೆಯಿಂದ ತರುತ್ತಿದ್ದವು. ನನ್ನ ಅನುಮಾನಕ್ಕೆ ಅರ್ಚಕರು, 'ನೀವೇನೂ ಯೋಚನೆ ಮಾಡಬೇಡಿ ಕಾಮತರೆ' ನಮ್ಮ ಜ್ವಾಲಮ್ಮ ಅಂತಿಂಥವಳಲ್ಲ. ಅವಳು ಎಂತಹ ಚೋರರನ್ನೂ ಬಲಿತೆಗೆದುಕೊಳ್ಳುತ್ತಾಳೆ," ಎಂದು ದೇವಿಯ ಬಗ್ಗೆ ಶ್ರದ್ಧೆ, ಭಕ್ತಿ ವಿಶ್ವಾಸವನ್ನು ಪ್ರಕಟಿಸಿದ್ದರು. ಈ ಮೂರ್ತಿಚೋರರ ಭಯ ಸದಾ ನನ್ನನ್ನು ಕಾಡುತ್ತಿತ್ತು. ಹೊನ್ನಾವರದಿಂದ ಜೋಗ್‌ಫಾಲ್ಸಿಗೆ ಹೋಗಲು ಎರಡು

ದಾರಿಗಳಿವೆ. ಶರಾವತಿಯ ಎಡದಂಡೆಯ ದಾರಿ ಇನ್ನೂ ಪೂರ್ತಿಯಾಗಿಲ್ಲ. ವಾಹನಗಳ ಓಡಾಟಕ್ಕೆ ಅನುಕೂಲಕರವಾಗಿಯೂ ಇಲ್ಲ. ಹೊನ್ನಾವರದಿಂದ ಸೀದಾ ಜೋಗ್‌ಫಾಲ್ಸಿಗೆ ಹೋಗುವವರೆಲ್ಲ ಶರಾವತಿಯ ಬಲಗಡೆಯ ರಸ್ತೆಯಿಂದ, ಅಂದರೆ ಬೆಂಗಳೂರು-ಹೊನ್ನಾವರ ಮಾರ್ಗವಾಗಿಯೆ ಹೋಗುತ್ತಾರೆ. ಇನ್ನು ಶರಾವತಿಯ ಎಡದಂಡೆಯ ಕೆಲವು ಊರಿನವರು ಹೊನ್ನಾವರಕ್ಕೆ ಹೋಗಿ ತಿರುಗಿ ಬಲದಂಡೆಗೆ ಬರುವುದಕ್ಕಿಂತ ಅಗಲ-ಕಿರಿದಾದ ಇಕ್ಕಟ್ಟಾದ ಆ ಕಚ್ಚಾರಸ್ತೆಯಿಂದಲೆ ಬರುತ್ತಾರೆ. ಹೀಗೆ ಬರುವವರು ಹೆಚ್ಚಾಗಿ ದಾರಿ ಗೊತ್ತಿದ್ದವರೇ ಆಗಿರುತ್ತಾರೆ. ಶರಾವತಿಯ ಎಡದಂಡೆಯ ಈ ದಾರಿ ವಿಧಿವತ್ತಾಗಿ ಇನ್ನೂ ಪ್ರಾರಂಭವಾಗಿಲ್ಲ. ಹೀಗಾಗಿ ಹೆಚ್ಚಿನ ವಾಹನಗಳು ಇಲ್ಲಿ ಬರುವುದಿಲ್ಲ.

"ನಿನ್ನೆ ರಾತ್ರಿ ಇವರ ಜೀಪ್ ನಿಂತಾಕ್ಷಣ ನನ್ನ ಅನುಮಾನ ತಕ್ಷಣ ಕೆಲಸ ಮಾಡಲು ಶುರುವಾಯಿತು. ಆ ಸಮಯದಲ್ಲಿ ನಾನು ಕಣ್ಣಿಗೆ ಪಟ್ಟಿ ಕಟ್ಟಿದ್ದೆ. ಔಷಧ ಹಾಕಿದ ತಕ್ಷಣ ಡಾಕ್ಟರರ ಸಲಹೆಯ ಮೇರೆಗೆ ಪ್ರಕಾಶ ಕಿರಣಗಳು ಹೋಗಬಾರದು ಎಂದು ಪಟ್ಟಿ ಕಟ್ಟಬೇಕು. ಈ ವಿಗ್ರಹಚೋರರು ಮಹಾಕ್ರೂರರೂ ನಿರ್ದಯಿಗಳೂ ಆಗಿರುತ್ತಾರೆ. ಯಾವುದೇ ವ್ಯಕ್ತಿ ಅನುಮಾನಾಸ್ಪದನಾಗಿ ಕಂಡರೆ ಅಥವಾ ತಮ್ಮ ರಹಸ್ಯ ಅರಿತವನೆಂದು ಅನ್ನಿಸಿದರೆ ಅಂತಹ ವ್ಯಕ್ತಿಯನ್ನು ಮುಗಿಸಿಬಿಡುತ್ತಾರೆ. ಪುರಾವೆಗಳನ್ನು ಕೊನೆಗೊಳಿಸುವಲ್ಲಿ ಇವರದು ಎತ್ತಿದ ಕೈ. ಕಾಡು ಸದಾ ನಿಶ್ಶಬ್ದವಾಗಿರುವುದರಿಂದ ದೂರದಿಂದಲೇ ಇವರು ಹಿಂದಿ ಮಾತನಾಡುವುದು ತಿಳಿಯಿತು. ಅದೂ ಶುದ್ಧ ಉತ್ತರ ಭಾರತದ ಹಿಂದಿ. ನಾನು ಜಾಗರೂಕನಾದೆ. ನಾನು ನಿರುಪದ್ರವಿ, ಅಮಾಯಕ, ಕೈಲಾಗದವನು ಎಂದು ತೋರಿಸಿಕೊಳ್ಳುವುದು ಅಗತ್ಯವಾಗಿತ್ತು. ಆದ್ದರಿಂದ ನಾನು ಕುರುಡ ಎನ್ನುವ ಭಾವನೆಯನ್ನು ಇವರಲ್ಲಿ ಬಿತ್ತಲೆತ್ನಿಸಿದೆ. ಒಂದು ವೇಳೆ ಜೀಪ್ ಕೆಟ್ಟಿದ್ದರೆ ಏನಾಗಿದೆ ಎಂದು ನೋಡಲಾದರೂ ಕೆಲ ಸಮಯ ಬೇಕಲ್ಲವೆ. ಆದರೆ ಜೀಪ್ ನಿಂತ ಕೆಲವೇ ಕ್ಷಣಗಳಲ್ಲಿ ಇವರು ನನ್ನ ಮನೆಯತ್ತ ಮಾತನಾಡುತ್ತ ಬರುತ್ತಿರುವುದು ಕೇಳಿಸಿತು. ನನ್ನ ಅನುಮಾನ ಬಲವಾಗುತ್ತಲೇ ಇತ್ತು. ನಡುವೊಮ್ಮೆ ಇವರು, 'ಅಮೀರ್‌ಚಂದ್ ಜೀಪ್ ರಿಪೇರಿ ಮಾಡಿದ,' ಎಂದರು. ಜೀಪ್ ರಿಪೇರಿಯಾದಲ್ಲಿ ಅವರು ಒಂದೇ ಗಂಟೆಯೊಳಗೆ ಜೋಗ್‌ಫಾಲ್ಸ್ ತಲುಪಬಹುದಿತ್ತು. ಇಲ್ಲಿಗೆ ಯಾಕೆ ಇಳಿದರು, ಮುಂದುವರಿಯಲಿಲ್ಲವೇಕೆ? ಪ್ರವಾಸಿಗರಾದರೆ, ಹೊನ್ನಾವರದಿಂದ ಹೊರಟವರಾದರೆ ರಾಜಮಾರ್ಗವನ್ನು ಬಿಟ್ಟು ಈ ದಾರಿಯಿಂದ ಏಕೆ ಬಂದರು ಎಂದು ನನ್ನ ಅನುಮಾನ ಪ್ರಬಲವಾಯಿತು. ಯಾರೇ ಪ್ರವಾಸಿಗರಾದರೂ ಹೊರಡುವ ಮೊದಲು ತಾವು ತಲುಪಬೇಕಾದ ಜಾಗ ಎಷ್ಟು ದೂರವಿದೆ, ರಸ್ತೆ ಹೇಗಿದೆ ಎಂದೆಲ್ಲ ವಿಚಾರಿಸುತ್ತಾರೆ. ಆದರೆ ಇವರು ಯಾಕೆ ವಿಚಾರಿಸಲಿಲ್ಲ? 'ಆಯಾಸವಾಯಿತು' ಎಂದರು. ಮುರಡೇಶ್ವರ ಅಥವಾ ಹೊನ್ನಾವರ ಆಯಾಸವಾಗುವಷ್ಟು ದೂರವೇನೂ ಇಲ್ಲ. ಇವರಲ್ಲಿ ರವಿರಾಜ ಯಾರೋ ಗೊತ್ತಿಲ್ಲ. ಅವನು ಶುದ್ಧ ಉತ್ತರ ಕನ್ನಡ ಜಿಲ್ಲೆಯವನು. ಇಲ್ಲಿಯ ಗ್ರಾಮೀಣ ಜನ ಕಲಿತಿರುವಂತಹ ಹಿಂದಿಯನ್ನು ಮಾತನಾಡುತ್ತಾನೆ. ಇವನ ಇಂಗ್ಲಿಷ್ ಶಬ್ದಗಳ ಉಚ್ಚಾರವೂ ಅಸ್ಪಷ್ಟ ಮತ್ತು ಗಡುಸು. ಈ ವ್ಯಕ್ತಿ ಉತ್ತರ ಭಾರತದ ಈ ಮೂವರಿಗೆ ಎಲ್ಲಿ ದೊರೆತ ಎನ್ನುವುದು ಮಾತ್ರ ಗೊತ್ತಾಗಲಿಲ್ಲ. ಬೇಕೆಂದೇ ರವಿರಾಜನನ್ನು ನಿನ್ನೆ ತಪ್ಪಾಗಿ ಗುರುತಿಸಿದೆ. ನನಗೆ ಮನಸ್ಸಿನಲ್ಲಿ ಖಂಡಿತ ಗೊತ್ತಿತ್ತು ಇವನು ಉತ್ತರ ಕನ್ನಡದವನೆಂದು. ಇವರ ಹೆಸರೂ ನೈಜವಾಗಿರಲಾರವು. ಈ ಜನ ಪ್ರದೇಶಕ್ಕೊಂದು ಹೆಸರಿಟ್ಟುಕೊಳ್ಳುತ್ತಾರೆ. ಇಂತಹ ಅನೇಕ ಅನುಮಾನಗಳು ನನ್ನ ಮನಸ್ಸನ್ನು ಕಾಡತೊಡಗಿದವು ಮತ್ತು ಎಲ್ಲ ಅನುಮಾನಗಳೂ ಒಂದಕ್ಕೊಂದು ಪೂರಕವಾಗಿದ್ದವು. ಒಂದನ್ನೊಂದು ಸಮರ್ಥಿಸುವಂತಿದ್ದವು. ಆದರೆ ನಾನು ಇದನ್ನು ತೋರಗೊಡಲಿಲ್ಲ. ಅವರಲ್ಲಿ ಯಾವ ಪ್ರಶ್ನೆಯನ್ನೂ ಕೇಳಿಲ್ಲ. ಅವರು ಹೇಳಿದ್ದನ್ನೆಲ್ಲ ನಂಬಿದವನಂತೆ ನಾಟಕ ಮಾಡಿದೆ."

ಟೇಬಲ್ ಮೇಲಿಟ್ಟ ನೀರು ಕುಡಿದು ಪುನಃ ಪ್ರಾರಂಭಿಸಿದರು ಕೆಕೆ. - "ನಾನು ನಿರುಪದ್ರವಿ, ಅವರ ಕೆಲಸದಲ್ಲಿ ಕಂಟಕವಾಗಲಾರೆ ಎನ್ನುವುದನ್ನು ಅವರಲ್ಲಿ ಬಿಂಬಿಸಬೇಕಿತ್ತು ನನಗೆ. ನಾನು ಯುದ್ಧದಲ್ಲಿ ದೃಷ್ಟಿ ಕಳೆದುಕೊಂಡಿದ್ದೆ. ಅನೇಕ

ವರ್ಷಗಳ ನಂತರ ನೇತ್ರದಾನಿಗಳೊಬ್ಬರ ರಕ್ತದ ಗುಂಪು ಮತ್ತು ಬೇರೆಲ್ಲ ಪರೀಕ್ಷೆಗಳೂ ಸ್ಥಿರಗೊಂಡಿದ್ದರಿಂದ ನನ್ನ ಕಣ್ಣುಗಳನ್ನು ಬದಲಿಸಿದ್ದರು. ಇದರ ನಡುವೆ ನಾನು ಅಂಧನಾಗಿಯೇ ಬಾಳಲು ಸಿದ್ಧತೆ ನಡೆಸಿದ್ದೆ. ಅದಕ್ಕಾಗಿ ಅನೇಕ ಅಭ್ಯಾಸಗಳನ್ನು ಮಾಡುತ್ತಲಿದ್ದೆ. ನನಗೆ ಹೊಸ ಕಣ್ಣನ್ನು ಜೋಡಿಸಿದ ಮೇಲೂ ನಾನು ಆ ಅಭ್ಯಾಸಗಳನ್ನು ನಿಲ್ಲಿಸಲಿಲ್ಲ ಯಾಕೆಂದರೆ ನನ್ನ ಆಪರೇಶನ್ ಮಾಡಿದ್ದ ಡಾಕ್ಟರ್ ಹೇಳಿದ್ದರು, 'ಏನಿದ್ದರೂ ಇದು ನಿಮ್ಮ ಕಣ್ಣಲ್ಲ. ಮನುಷ್ಯ ಶರೀರ ಎಷ್ಟು ಸೂಕ್ಷ್ಮವಾಗಿದೆ ಎಂದರೆ ಅದು ಯಾವುದೇ ಅನ್ಯ ಶರೀರವನ್ನು ಸುಲಭವಾಗಿ ಒಪ್ಪಿಕೊಳ್ಳುವುದಿಲ್ಲ. ಎಲ್ಲವನ್ನು ಖಚಿತಪಡಿಸಿಕೊಂಡೇ ನಾವು ಈ ಕಣ್ಣನ್ನು ಅಳವಡಿಸುತ್ತಿದ್ದೇವೆ. ಆದರೂ .....' ನನಗೆ ಡಾಕ್ಟರು ಮುಂದೆ ಹೇಳುವುದು ಅಗತ್ಯವಾಗಿರಲಿಲ್ಲ. ನಾನು ಮುಂದೆ ಕೂಡ ಕುರುಡನಾಗುವ ಸಾಧ್ಯತೆ ಇತ್ತು. ಆದ್ದರಿಂದಲೇ ದಿನದಲ್ಲಿ ಬಹಳ ಹೊತ್ತು ನಾನು ಕುರುಡನಾದಂತೆ ಬಾಳುವ ಅಭ್ಯಾಸ ಮಾಡುತ್ತಿರುತ್ತೇನೆ. ಇಂತಹ ಸಮಯದಲ್ಲೇ ಈ ಆಗಂತುಕರು ಬಂದದ್ದು. ಒಂದು ವೇಳೆ ಪಟ್ಟಿ ಬಿಚ್ಚಿದ್ದರೆ ನಾನು ಪೋಣಿಸಿದ ಅಂಧತ್ವದ ಕತೆಯ ಬಗ್ಗೆ ಆಗಂತುಕರಿಗೆ ಅನುಮಾನ ಬರುವ ಸಂಭವವಿತ್ತು. ನನ್ನ ನಿರುಪದ್ರವಿ ಮನೋಭಾವವನ್ನು ಬಿಂಬಿಸಲು ನಾನು ಕಣ್ಣಿನ ಪಟ್ಟಿ ತೆಗೆಯಲೇ ಇಲ್ಲ. ಒಂದುವೇಳೆ ನನ್ನ ಅನುಮಾನ ಹುಸಿಯಾದಲ್ಲಿ ಅದರಿಂದ ಯಾರಿಗೂ ಹಾನಿಯಾಗುತ್ತಿರಲಿಲ್ಲ. ಆಗಂತುಕರು ಅವರಷ್ಟಕ್ಕೆ ಹೋಗುತ್ತಿದ್ದರು. ನಾನು ನನ್ನಷ್ಟಕ್ಕೆ ಇರುತ್ತಿದ್ದೆ. ಹಾಗೆಯೇ ಒಂದು ವೇಳೆ ನನ್ನ ಅನುಮಾನ ನಿಜವಾಗಿದ್ದಲ್ಲಿ ಈ ಮೂರ್ತಿ ಚೋರರಿಗೆ ಈ ಕುರುಡನಿರುವ ತನಕ ಅಪಾಯವಿಲ್ಲ. ಅಕಸ್ಮಾತ್ತಾಗಿ ಇವರು ಕುರುಡರಲ್ಲದಿದ್ದರೂ ಕಣ್ಣುಗಳನ್ನು ಕಟ್ಟಿಕೊಂಡಿರುವ ತನಕ ಇವರನ್ನು ನಂಬಬಹುದು ಎನ್ನುವ ಭಾವನೆಯನ್ನು ಇವರಲ್ಲಿ ಮೂಡಿಸಬೇಕಿತ್ತು ನನಗೆ. ಹೀಗೆ ಮಾಡುವಲ್ಲಿ ನಾನು ಕಲಿತ ತರ್ಕಶಾಸ್ತ್ರ, ಮನಃಶಾಸ್ತ್ರ ಕೆಲಸಕ್ಕೆ ಬಂತು."

ಸ್ವಲ್ಪ ತಡೆದು ಮತ್ತೆ ಪ್ರಾರಂಭಿಸಿದರು ಕೆಕೆ. ಸಿಂಹದ ಸುಳಿವು ಸಿಕ್ಕರೆ ಸತ್ತ ಹಾಗೆ ಬೀಳು ಎನ್ನುವ ಹೇಳಿಕೆ ಇದೆ. ಸಿಂಹ ಸತ್ತದ್ದನ್ನು ಮುಟ್ಟುವದಿಲ್ಲ. ತಾನೇ ಕೊಂದಿದ್ದನ್ನು ಮಾತ್ರ ಭಕ್ಷಿಸುತ್ತದೆ. ಈ ವಿಗ್ರಹಚೋರರ ಸುಳಿವು ಕಂಡಾಗ ನಾನು ಇಂತಹದೇ ನಾಟಕ ಹೂಡಿದೆ. ಇವರ ಮಾತುಗಳಲ್ಲಿ ಅನೇಕ ವಿರೋಧಾಭಾಸಗಳನ್ನು ಗಮನಿಸಿದೆನಾದರೂ ತೋರಗೊಡಲಿಲ್ಲ. ಎಷ್ಟು ಹೊತ್ತಾದರೂ ಇವರು ಹೋಗುವ ಆತುರವನ್ನೇ ತೋರಲಿಲ್ಲ. ನನ್ನ ಲಕ್ಷ್ಯಕ್ಕೆ ಬಂದದ್ದು ಅಂದು ಅಮಾವಾಸ್ಯೆಯಾದ್ದರಿಂದ ದೇವಿಗೆ ಸಲ್ಲಿಸಲಿರುವ ವಿಶೇಷ ಪೂಜೆ. ಪೂಜೆ ಮುಗಿಯಲು ರಾತ್ರಿ ಬಹಳ ತಡವಾಗುತ್ತದೆ. ಯಾರದಾದರೂ ಹೇಳಿಕೆ ಇದ್ದರೆ ಒಮ್ಮೊಮ್ಮೆ ಬೇರೆ ಕಾರ್ಯಕ್ರಮವೂ ಇರುತ್ತದೆ. ಹೀಗಾಗಿ ರಾತ್ರಿ ಪೂಜೆ ಮುಗಿಯುವಾಗ ಹನ್ನೊಂದಾಗುತ್ತದೆ. ಪೂಜೆಯ ಸಮಯದಲ್ಲಿ ಮಾತ್ರ ಗರ್ಭಗುಡಿಯ ಬಾಗಿಲು ತೆಗೆಯುತ್ತಾರೆ. ಇವರೆಲ್ಲ ಅದನ್ನು ಗಮನಿಸಿಯೇ ಬಂದಿದ್ದಾರೆ. ಪೂಜಾರಿಯೊಬ್ಬನೇ ಇರುವುದರಿಂದ ಅವನ ಕೊಲೆಮಾಡಿಯೂ ಇವರು ವಿಗ್ರಹ ಒಯ್ಯುವವರೆ. ಆದರೆ ಗರ್ಭಗುಡಿಯ ಬಾಗಿಲಿಗೆ ಒಂದು ಹೊಂದಾಣಿಕೆ ಬೀಗವಿದೆ. ಅದರ ಅಂಕಿ, ಅಕ್ಷರಗಳ ಜೋಡಣೆ ಅರ್ಚಕ ಮತ್ತು ಪಾರುಪತ್ತೆಗಾರರನ್ನು ಹೊರತುಪಡಿಸಿ ಉಳಿದವರಿಗೆ ಗೊತ್ತಿಲ್ಲ. ಅರ್ಚಕರನ್ನು ಹೆದರಿಸಿ ಬಾಗಿಲು ತೆಗೆಸುವದಕ್ಕಿಂತ ಗರ್ಭಗುಡಿ ತೆಗೆದಾಗಲೆ ತಮ್ಮ ಕೈಚಳಕ ತೋರಿಸಲು ನಿರ್ಧರಿಸಿದ್ದಾರೆ. ಇದೆಲ್ಲದರ ಸೂತ್ರಧಾರ ಬಹುಶಃ ಇದೆಲ್ಲ ಗೊತ್ತಿರುವ, ಈ ಕಡೆಯವನೇ ಆದ ರವಿರಾಜ. ಇವರು ಬಂದದ್ದು ತೀರ ಬೇಗ ಆಯಿತು. ಕಾಡಿನಲ್ಲಿ ತಿರುಗುವುದಕ್ಕಿಂತ ಏನಾದರೂ ಸಬೂಬು ಹೇಳಿ ಇಲ್ಲಿ ಕಾಲ ಕಳೆದರಾಯಿತು ಎಂದುಕೊಂಡು ನನ್ನಲ್ಲಿ ಬಂದರು. ಈ ಅಪರಾತ್ರಿಯಲ್ಲಿ ಸರಿಯಾಗಿರದ ಈ ರಸ್ತೆಯಲ್ಲಿ ತಮಗೆ ಹೋಗಲೇಬೇಕು ಎಂದಾಗಂತೂ ನನ್ನ ಅನುಮಾನ ಇನ್ನೂ ಜಾಸ್ತಿಯಾಯಿತು. ನನ್ನ ಬಗ್ಗೆ ಇವರಲ್ಲಿ ಆದರ ಮೂಡಬೇಕು; ಇವರ ಅತ್ಯುತ್ತಮ ಸ್ನೇಹಿತನೆಂದೆನಿಸಿಕೊಳ್ಳಬೇಕು ಎಂಬ ಉದ್ದೇಶದಿಂದ ಇವರಿಗೆ ನಾನು ಮಾಡಿದ ಅನೇಕ ಆವಿಷ್ಕಾರಗಳನ್ನೂ ಪ್ರಯೋಗಗಳನ್ನೂ ಅಭ್ಯಾಸಗಳನ್ನೂ ಪ್ರದರ್ಶಿಸಿದೆ. ಒಂದೇ ಒಂದನ್ನು ಹೊರತು



ಪಡಿಸಿ. ಅದೇನೆಂದರೆ ನನ್ನ ಪಿಯಾನೋ. ಅದು ಕೇವಲ ಪಿಯಾನೋವಿನಂತೆ ಕಂಡರೂ ಅದರಲ್ಲಿ ಟೆಲೆಕ್ಸ್ ಮಶೀನ್ ಅಳವಡಿಸಿದ್ದೇನೆ. ಗೇರಸಪ್ಪೆಯ ಪೋಲೀಸ್ ಸ್ಟೇಷನ್‌ನಲ್ಲಿ ಟೆಲೆಕ್ಸ್ ಸೌಲಭ್ಯವಿದೆ. ಪೋಸ್ಟ್ ಆಫೀಸಿನಲ್ಲಿಯೂ ಈ ಸೌಲಭ್ಯವಿದೆ. ಆದ್ದರಿಂದ ಆಗಂತುಕರಿಗೆ ಕುಡಿಯಲು ಬಿಟ್ಟು ನಾನು ಪಿಯಾನೋ ಮೇಲೆ ಕುಳಿತು ಸ್ವರ ಹೊಂದಿಸುವ ನೆಪದಲ್ಲಿ ಟೆಲೆಕ್ಸ್ ಆಪರೇಟ್ ಮಾಡಿದೆ. ಪ್ರಿಂಟರ್ ಸ್ವಿಚ್ ಬಂದ್ ಮಾಡಿದ್ದರಿಂದ ಪ್ರಿಂಟರ್‌ನ ಸಪ್ಪಳ ಹೊರಗೆ ಕೇಳಲಿಲ್ಲ. ಹಾಗೆ ಮಾಡದಿದ್ದಲ್ಲಿ ಆಗಂತುಕರಿಗೆ ಅನುಮಾನ ಬರುವ ಸಾಧ್ಯತೆ ಇತ್ತು. ಮಾರುತ್ತರ ಕೊಡಬಾರದೆಂದೂ ಟೆಲಿಫೋನ್ ಕೂಡ ಮಾಡಬಾರದೆಂದೂ ಟೆಲೆಕ್ಸ್‌ನಲ್ಲಿ ಅವರಿಗೆ ತಿಳಿಸಿದ್ದೆ. ಸಾಮಾನ್ಯವಾಗಿ ಇಂತಹ ಕುತಂತ್ರಿಗಳು ಮಹಾ ಕುಡುಕರಿರುತ್ತಾರೆ. ಆದರೆ ಬಾಟಲಿ ಒಳಗೆ ಇಡುವಾಗ ಇವರು ಹೆಚ್ಚಿಗೆ ಕುಡಿಯಲಿಲ್ಲ ಎನ್ನುವುದನ್ನು ಕಂಡುಕೊಂಡೆ. ಅವರಿಗೆ ಅಂದು ಕಾರ್ಯ ಸಾಧಿಸಬೇಕಿತ್ತು. ನನಗಾದರೋ ಮೆಸೇಜ್ ತಲುಪಿ ಇನ್‌ಸ್ಪೆಕ್ಟರ್ ಕಾರ್ಯಗತರಾಗುವಷ್ಟು ಸಮಯ ಇವರು ನನ್ನಲ್ಲಿಯೇ ಇರುವಹಾಗೆ ನೋಡಿಕೊಳ್ಳಬೇಕಿತ್ತು. ಅದರಲ್ಲಿ ನಾನು ಯಶಸ್ವಿಯೂ ಆದೆ. ಅದೃಷ್ಟದ ಸಂಗತಿ ಎಂದರೆ ಆಗಂತುಕರು ಮನೆಯ ಹಿಂದಿನ ಗರಾಜ್‌ನಲ್ಲಿ ಇದ್ದ ನನ್ನ ಬೈಕ್ ನೋಡದೆ ಇದ್ದದ್ದು. ಇನ್ನು ಮುಂದಿನದು ವೈಂಗಣಕರರ ಕೆಲಸ. ಅದನ್ನು ಅವರೇ ಹೇಳಲಿ," ಎಂದು ಕಾಮತ್, ಇನ್‌ಸ್ಪೆಕ್ಟರ್‌ಕಡೆ ನೋಡುತ್ತಾರೆ.

ಇನ್‌ಸ್ಪೆಕ್ಟರ್ ಪ್ರಾರಂಭಿಸುತ್ತಾರೆ, "ಆದರೆ ನಮ್ಮ ಕೆಲಸವನ್ನೆಲ್ಲ ಮಾಡಿದವರೇ ನೀವು. ನಾನು ಮಾಡಿದ್ದಿಷ್ಟೇ. ನಿಮ್ಮ ಮೆಸೇಜ್ ಬಂದಾಕ್ಷಣ ಹೊನ್ನಾವರ ಮತ್ತು ಜೋಗ್‌ಫಾಲ್ಸ್ ಪೋಲೀಸ್ ಸ್ಟೇಷನ್ನುಗಳಿಗೆ ಫೋನ್ ಮಾಡಿ ವಿಷಯ ತಿಳಿಸಿ, ಎರಡೂ ಕಡೆಯಿಂದ ಶರಾವತಿಯ ಎಡಗಡೆಯ ರಸ್ತೆಯಲ್ಲಿ ಕಾವಲಿರುವಂತೆಯೂ ಪ್ರತಿಯೊಂದು ವಾಹನವನ್ನು ಪರೀಕ್ಷಿಸುವಂತೆಯೂ ಆದೇಶಿಸಿದೆ. ಇವರು ಆಯುಧಗಳಿಲ್ಲದೆ ಇಲ್ಲದೇ ಕೆಲಸ ಮಾಡುವವರಲ್ಲ; ಆದ್ದರಿಂದ ಹಣಾಹಣಿ ಕೂಡ ಆಗಬಹುದು ಎಂದೂ ತಿಳಿಸಿದ್ದೆ. ಆದ್ದರಿಂದ ಕೂಡಲೇ ನಾನು ಹತ್ತುಜನ ಸಿಬ್ಬಂದಿಯೊಂದಿಗೆ . ಮೋಟರ್ ಬೋಟ್ ಮುಖಾಂತರ ನದಿ ದಾಟಿ ಕಾಲುದಾರಿ ಹಿಡಿದು, ಮುಷ್ಟಿಯಲ್ಲಿ ಬಸ್ತಿ ಕಾಡು ತಲುಪಿದೆ. ಮೊದಲು ಗುಡಿಗೇ ಹೋಗುವುದು ಎಂದು ನಿರ್ಧರಿಸಿದೆ. ಆದರೆ ಹಣಾಹಣಿಯಾದಲ್ಲಿ ನಿರಪರಾಧಿಗಳಾದ ಭಕ್ತರು ಗಾಯಗೊಳ್ಳಬಹುದು ಅನಿಸಿತು. ಆದ್ದರಿಂದ ಸೀದಾ ರಸ್ತೆಗೆ ಹೋದೆವು. ಜೀಪ್ ಹುಡುಕುವುದು ಕಷ್ಟವಾಗಲಿಲ್ಲ. ಆಗ ಮೊದಲು ಮಾಡಿದ ಕಾರ್ಯವೆಂದರೆ ಜೀಪಿನ ಟೈರುಗಳ ಗಾಳಿ ತೆಗೆದದ್ದು. ನಂತರ ಹತ್ತಿರದಲ್ಲಿರುವ ಮರಗಳ ಹಿಂದೆ ಆಗಂತುಕರು ಬರಲಿರುವ ದಾರಿಯ ವಿರುದ್ಧ ದಿಕ್ಕಿನಲ್ಲಿ ಮರೆಯಲ್ಲಿ ನಿಂತೆವು. ದೇವಸ್ಥಾನದಲ್ಲಿ ಏನು ನಡೆಯಿತೋ ಗೊತ್ತಿಲ್ಲ. ನಂತರ ತಿಳಿದದ್ದು ಇಷ್ಟು. - ಪೂಜೆ ನಡೆಯುತ್ತಿರುವಾಗಲೆ ಇವರು ಗುಡಿ ಪ್ರವೇಶಿಸಿದರು. ಅಲ್ಲಿದ್ದ ಕೆಲವೇ ಭಕ್ತರಿಗೂ ಅರ್ಚಕರಿಗೂ ರಿವಾಲ್ವರ್‌ನಿಂದ ಹೆದರಿಸಿ ಮೂರ್ತಿಯೊಂದಿಗೆ ಜೀಪಿನತ್ತ ಓಡಿದರು. ಆದರೆ ಬೇಟೆ ರೋಮಾಂಚಕಾರಿಯಾಗಲೇ ಇಲ್ಲ ಕ್ಯಾಪ್ಟನ್. ಇವರು ನಾಲ್ಕು ಜನ, ಮುಂದಿಬ್ಬರು ಹಿಂದಿಬ್ಬರು - ಜೀಪು ಏರುತ್ತಿರುವಂತೆಯೇ ನಾವು ಅವರಮೇಲೆ ಮುಗಿಬಿದ್ದೆವು. ಅದು ಅವರಿಗೆ ಅನಿರೀಕ್ಷಿತವಾಗಿತ್ತು. ರಿವಾಲ್ವರ್ ಹಿಡಿಯುವಷ್ಟು ಕೂಡ ಪುರಸೊತ್ತು ಕೊಡಲಿಲ್ಲ ನಾವು. ನಾಲ್ಕು

ಜನರಿಗೆ ಬೆನ್ನಹಿಂದೆ ಕೈಕೊಳ ತೊಡಿಸಿ, ಸರಪಳಿಯಿಂದ ಜೋಡಿಸಿ ದಬ್ಬಿಕೊಂಡೇ ಇಲ್ಲಿಗೆ ಬಂದೆವು. ಹೇಗೂ ಕೆಲಸವಾಯಿತಲ್ಲ. ಈಗ ಫೋನ್ ಮಾಡಬಹುದು ಎಂದುಕೊಂಡ ನಿಮ್ಮನ್ನು ಸಂಪರ್ಕಿಸಿದೆವು. ನಂತರ ಹೊನ್ನಾವರ, ಜೋಗ್‌ಫಾಲ್ಸ್ ಮತ್ತು ಕಾರವಾರ ಎಸ್ಪಿ ಆಫೀಸಿಗೆ ಫೋನ್ ಮಾಡಿದೆ. ಆದರೆ ಕ್ಯಾಪ್ಟನ್, ಇವರನ್ನು ಕಳಿಸಿ ಸ್ವಲ್ಪ ಹೊತ್ತಿಗೆ ನೀವು ಗುಡಿಯ ಹತ್ತಿರ ಅಥವಾ ಜೀಪಿನ ಹತ್ತಿರ ಬರಬಹುದೆಂದು ಎಣಿಸಿದ್ದೆ.''

ಕೆಕೆ. ಹೇಳಿದರು. "ನನಗೂ ಹಾಗೆಯೇ ಮಾಡಬೇಕೆನಿಸಿತ್ತು. ಆದರೆ ನನ್ನ ಕಾರ್ಯಕ್ಷಮತೆಯ ಬಗ್ಗೆ ನನಗೇ ವಿಶ್ವಾಸವಿರಲಿಲ್ಲ. ಇಷ್ಟಕ್ಕೂ ಎಲ್ಲವನ್ನೂ ಕುರುಡನಾಗಿಯೇ ಮಾಡಿದ್ದೆನಲ್ಲವೆ. ಇವರಲ್ಲಿ ಯಾರಾದರೊಬ್ಬ ಎಲ್ಲಿ ಹೊರಗೆ ನಿಂತು ನನ್ನ ಮೇಲೆ ಕಣ್ಣಿಟ್ಟಿದ್ದರೆ, ಎನ್ನುವ ಯೋಚನೆಯೊಂದು ಬಂದು ಆ ವಿಚಾರವನ್ನು ಅಲ್ಲಿಯೇ ಬಿಡಬೇಕಾಯಿತು.''

"ಗೇರಸಪ್ಪೆಯ ಜನತೆ ತಮಗೆ ಋಣಿಗಳಾಗಿದ್ದಾರೆ ಕೆಕೆ.ಯವರೆ, ನೀವಿಲ್ಲದಿದ್ದರೆ ಇಂದು ಖಂಡಿತ ಅಮ್ಮ ನಮ್ಮ ಕೈ ಬಿಟ್ಟು ಹೋಗಿರುತ್ತಿದ್ದಳು'' ಗದ್ಗದಿತರಾಗಿ ನುಡಿದರು ದೇವಸ್ಥಾನದ ಪಾರುಪತ್ತೆಗಾರರಲ್ಲಿ ಒಬ್ಬರಾದ ರಾಜಾರಾಮ್ ಶೇಟ್.

ಕೆಕೆ. "ಹಾಗನ್ನಬೇಡಿ. ನನಗೆ ಅರ್ಚಕರ ಮಾತು ಇನ್ನೂ ನೆನಪಿದೆ. ನಮ್ಮ ಜ್ವಾಲಮ್ಮ ಅಂತಿಂಥವಳಲ್ಲ. ಅವಳು ಎಂತೆಂತಹ ಕಳ್ಳರನ್ನೂ ಬಲಿತೆಗೆದುಕೊಳ್ಳುತ್ತಾಳೆ. ನಿಮ್ಮೆಲ್ಲರ ಭಕ್ತಿ, ಶ್ರದ್ಧೆ ವಿಶ್ವಾಸಗಳಿಂದಲೇ ಇದೆಲ್ಲ ನಡೆದದ್ದು. ನಾನಿನ್ನು ಹೋಗುತ್ತೇನೆ ಇನ್‌ಸ್ಪೆಕ್ಟರ್, ನಿಮ್ಮಲ್ಲಿ ಒಂದು ಯಾಚನೆ ಇದೆ. ನಿನ್ನೆ ಇವರ ಊಟ ಮಾಡಿದ್ದೇನೆ. ಆ ಋಣಕ್ಕೋಸ್ಕರವಾಗಿಯಾದರೂ ಇವರಿಗೆ ಹಿಂಸೆ ಕೊಡಬೇಡಿ. ಇನ್ನು ಶಿಕ್ಷೆವಿಧಿಸುವುದು ನ್ಯಾಯಾಲಯದ ಕೆಲಸ.''ಎನ್ನುತ್ತ ನಡೆದುಬಿಟ್ಟರು ಕ್ಯಾಪ್ಟನ್ ಕೆಕೆ.






ಜಗತ್ತಿನಲ್ಲಿ
ಇಂಥದು
ಇದೊಂದೇ!

• ಗೋವಾ

ಮೃತ್ಯುವನ್ನು ಗೆಲ್ಲಲು ಸಾಧ್ಯವೇ ಇಲ್ಲ ಎಂದು ಅರಿತುಕೊಂಡಂದಿನಿಂದಲೇ ಮನುಷ್ಯ ತನ್ನ ಪ್ರಿಯ ವ್ಯಕ್ತಿಗಳ ನೆನಪು ಹಸಿರಾಗಿರಲೆಂದು ಸಮಾಧಿ ಸಹಿತದ ಕಟ್ಟಡಗಳನ್ನು, ಗುಂಬಜಗಳನ್ನು ಇನ್ನಿತರ ಸ್ಮಾರಕಗಳನ್ನು, ಸಮಾಧಿ ಶಿಲೆಗಳನ್ನು ನಿಲ್ಲಿಸುವತ್ತ ಹೆಚ್ಚೆಚ್ಚು ಲಕ್ಷ್ಯವಹಿಸತೊಡಗಿದ. ಇಂಥ ಸ್ಮಾರಕಗಳಲ್ಲಿ ಜಗತ್ತಿನಲ್ಲೇ ಅತಿ ಶ್ರೇಷ್ಠ ಉದಾಹರಣೆಯಾಗಿ ನಿಂತಿದೆ ತಾಜ್ ಮಹಲ್. ಅದು ಪ್ರಿಯ ಪತ್ನಿಗಾಗಿ ನಿರ್ಮಿಸಿದ ಸ್ಮಾರಕ ಎಂಬುದೂ ಗೊತ್ತು. ಆದರೆ ಮಗನೊಬ್ಬ ತನ್ನ ತಾಯಿಯ ನೆನಪಿಗೊಂದು 'ತಾಯ್ ಮಹಲ್' ಕಟ್ಟಿಸಿದನೆಂಬುದು ನಿಮಗೆ ತಿಳಿದಿದೆಯೇ? ಅದೂ ತೀರ ಇತ್ತೀಚೆಗೆ.

ಮಧ್ಯಪ್ರದೇಶದ ಶಿವಪುರಿ ಎಂಬ ಶಹರದಲ್ಲಿ 'ಛತರಿ' ಎಂದೇ ಕರೆಸಿಕೊಳ್ಳುತ್ತ, ವಿಖ್ಯಾತ ಪ್ರವಾಸಿತಾಣವಾಗಿ ನಿಂತಿರುವ ಈ ಹಳೆಯ ಮಹಲು ತಟ್ಟನೆ ನೋಡಿದರೆ ಅಮೃತಸರದ ಸ್ವರ್ಣಮಂದಿರವನ್ನೇ ನೋಡುತ್ತಿರುವ ಅನುಭವವುಂಟುಮಾಡುತ್ತದೆ.

ಮಹಾರಾಜ ಜೀಯಾಜಿ ರಾವ್ ಸಿಂಧ್ಯನಿಗೆ ಇಬ್ಬರು ಪತ್ನಿಯರು. ಸಾಖ್ಯಾ ರಾಜೇ ಆತನ ಪಟ್ಟದ ರಾಣಿ. ಜೀಜಾಬಾಯಿ ಎಂದೇ ಆಕೆ ಪ್ರಸಿದ್ಧಳು, ಪರಿಚಿತಳು. ಧಾರ್ಮಿಕ ಕಾರ್ಯಕ್ರಮಗಳು ಹಾಗೂ ಸಂಗೀತವೆಂದರೆ ಆಕೆಗೆ ಅತಿ ಗೌರವ, ಅತ್ಯಾಸಕ್ತಿ. ಪ್ರಾತಃಕಾಲದಲ್ಲಿ ಶಿವಸ್ಮರಣೆ, ಭಜನೆ, ಪೂಜೆ, ಆರತಿ. ದೈನಂದಿನ ಕೆಲಸಗಳೆಲ್ಲ ಮುಗಿದು ಸಂಜೆ

ಯಾಯಿತೆಂದರೆ ಶಾಸ್ತ್ರೀಯ ಸಂಗೀತ, ಭಕ್ತಿಗೀತೆಗಳನ್ನು ಆಲಿಸುತ್ತಲೊ, ಶ್ರೀಮದ್ ಭಗವದ್ಗೀತೆಯ ಶ್ರವಣದಲ್ಲೊ ಮೈಮರೆಯಬೇಕು. ಬದುಕು ಪೂರ್ತಿ ಆಕೆಯ ಈ ದಿನಚರಿಯಲ್ಲೇನೂ ಬದಲಾವಣೆಯೇ ಕಾಣಲಿಲ್ಲ.

ಮಗ ಮಾಧೋರಾವ್ ತಾಯಿಯಿಂದ ತುಂಬ ಪ್ರಭಾವಿತನಾದ. ಬಾಲ್ಯದಿಂದಲೇ ಅಂಥ ಸಂಸ್ಕಾರವನ್ನಾಕೆ ಮಗನಿಗೆ ನೀಡಿಬಿಟ್ಟಳು. ಧರ್ಮದ ಕುರಿತು ಶ್ರದ್ಧೆ ಜೀವನದ ಕುರಿತು ನಿಸ್ಪೃಹತೆಗಳು ಮಾಧೋರಾವ್‌ಗೆ ತಾಯಿ ಕಲಿಸಿದ ಪಾಠಗಳು. ಬೆಳೆದು ನಿಂತ ಮೇಲೆ ಆತನೇ ರಾಜ್ಯದ ಯುವರಾಜ. ಆದರೂ ಎಳವೆಯ ರೂಢಿಗಳನ್ನಾತ ಬಿಟ್ಟುಕೊಡಲಿಲ್ಲ. ೧೯೧೭ರಲ್ಲಿ ಜೀಜಾಬಾಯಿ ಶಿವಪಾದ ಸೇರಿದಳು.

ಯುವರಾಜ ಇದರಿಂದ ತುಂಬ ಗಾಸಿಗೊಂಡ. ತಾಯಿ ಎಂಬ ಜೀವವೇ ಅಷ್ಟು ಪ್ರಿಯವಲ್ಲವೇ? ಅದರಲ್ಲೂ ತನಗೆ ಗುರುವೂ ಆಗಿದ್ದ ತಾಯಿಯ ಅಗಲಿಕೆ ಆತನಿಂದ ಸಹಿಸಲಾಗಲಿಲ್ಲ. ಕೊನೆಯುಸಿರೆಳೆಯುತ್ತಿದ್ದ ಹೊತ್ತಿನಲ್ಲಿ, "ಬಾಳಾ, ನಾನು ಈವರೆಗೂ ಜೀವನವಿಡಿ ಎಲ್ಲಿ ಈಶ್ವರ ನಾಮಸ್ಮರಣೆಗೈಯುತ್ತಿದ್ದೆನೊ ಅಲ್ಲಿಯೆ ನನ್ನ ಅಂತಿಮ ಸಂಸ್ಕಾರ ಮಾಡು" ಎಂಬಾಶೆಯನ್ನು ವ್ಯಕ್ತಪಡಿಸಿದ್ದಳು. ಅದನ್ನು ಆಕೆಯ ಆಶೆಯಲ್ಲ, ಆದೇಶವೆಂಬಂತೆ ಪಾಲಿಸಿದ ಮಗ.

ತಾಯಿಯ ಪಾರ್ಥಿವ ಶರೀರ ಅಗ್ನಿಗೆ ಅರ್ಪಿತವಾದ ಮೇಲಂತೂ ಮಾಧೋರಾವ್ ಅಂತರ್ಮುಖಿಯಾಗಿಬಿಟ್ಟ. 'ಅಮ್ಮ ಹೋದಳು ನಿಜ. ಆದರೆ ಆಕೆಯ ನೆನಪು ಹಾಗೆಲ್ಲ ಮಸಳಿಸುವಂಥದ್ದಲ್ಲ. ಆಕೆಯ ನೆನಪಿಗೊಂದು ಮೂರ್ತರೂಪ ಕೊಡಬೇಕು...'

ಯೋಚನೆಗೊಂದು ಸೂಚನೆಯೂ ಹೊಳೆಯಿತು.

ಶಿವಪುರಿಯ ಬಹಿರ್ವಲಯದಲ್ಲೊಂದೆಡೆ ನೆಲ ಸಮತಟ್ಟು ಮಾಡುವ ಕೆಲಸ ಯಾಕೆ ನಡೆಯುತ್ತಿದೆಯೆಂದೇ ಜನಕ್ಕೆ ತಿಳಿಯಲಿಲ್ಲ. ಎರಡು ವರ್ಷಗಳಲ್ಲೇ ಅಲ್ಲಿ ಅಮೃತಶಿಲೆಯ ಮಹಲೊಂದು ತಲೆಯೆತ್ತಿ ನಿಂತಿತು. ಸುಂದರ ಕೊಳದ ಮಧ್ಯ ನಿಂತ ಮಹಲು. ಜನ ಅದನ್ನು 'ಜೀಜಾಬಾಯಿ ಛತರಿ ಎಂದರು. ಮಾಧೋರಾವ್ ಮಾತ್ರ 'ತಾಯ್ ಮಹಲ್' ಎಂದೇ ಭಕ್ತಿಯಿಂದ ಕರೆಯತೊಡಗಿದ. ಶಾಸ್ತ್ರೋಕ್ತವಾಗಿ ಅಲ್ಲಿ ತನ್ನ ತಾಯಿಯ ಪ್ರತಿಮೆಯೊಂದರ ಪ್ರಾಣಪ್ರತಿಷ್ಠಾ ಕಾರ್ಯವನ್ನೂ ನೆರವೇರಿಸಿದ. ಅಮ್ಮನ ಸೇವೆಗೆ ಕೆಲ ಜನರನ್ನೂ ನೇಮಿಸಿದ. "ನೋಡಿ, ಅಮ್ಮನಿಗೆ ಯಾವುದೇ ರೀತಿಯ ಕಷ್ಟ-ಕೊರತೆಯುಂಟಾಗದಂತೆ ನೋಡಿಕೋಬೇಕು" ಎಂದು ಆ ಜನಕ್ಕೂ, "ನಿತ್ಯ ಬೆಳಗು-ಬೈಗುಗಳಲ್ಲಿ ಅಮ್ಮನೆದುರು ಕೂತು ಶಿವಸ್ಮರಣೆ, ಶ್ರೀಮದ್ ಭಗವದ್ಗೀತೆಯ ಪಾರಾಯಣ ನಡೆಸಬೇಕು" ಎಂದು ರಾಜಪುರೋಹಿತರಿಗೂ, ಸಂಗೀತ ಸೇವೆ ನಡೆಸುವಂತೆ ಆಸ್ಥಾನ ಗಾಯಕರಿಗೂ ಅಪ್ಪಣೆಮಾಡಿದ ಮಾಧೋರಾವ್.

ಇಂದಿಗೂ 'ತಾಯ್ ಮಹಲ್'ನಲ್ಲಿ ಈ ಎಲ್ಲ ಸೇವೆಗಳೂ ಚಾಚೂ ತಪ್ಪದಂತೆ ನಡೆಯುತ್ತಿವೆ. ಮುಂಜಾನೆ ಏಳೂವರೆಗೆ ಮಹಲಿನ ದ್ವಾರ ತೆರೆದುಕೊಂಡರೆ ಚಟುವಟಿಕೆಗಳು ಶುರು. ಆರತಿಯ ನಂತರ ದಾಸಿಯರು ಗರ್ಭಗೃಹದ ಬಾಗಿಲು ಮುಚ್ಚಿ, ಒಳಪರದೆಯನ್ನು ಹಾಕಿ ಜೀಜಾಬಾಯಿಯ ಪ್ರತಿಮೆಗೆ ಸ್ನಾನ ಮಾಡಿಸುತ್ತಾರೆ. ಆ ಮೇಲೆ ನವವಸ್ತ್ರ ತೊಡಿಸುವಿಕೆ. ಯಾವುದೇ ಮಸಾಲೆ ಇತ್ಯಾದಿಗಳಿಲ್ಲದ ಸಾದಾ ಊಟದ ತಟ್ಟೆಯನ್ನು ಪ್ರತಿಮೆಯೆದುರು ಇರಿಸುತ್ತಾರೆ. ಇಷ್ಟಾಯಿತೋ ಗರ್ಭಗೃಹದ. ಬಾಗಿಲು ಹೊರಗಿನಿಂದ ಮುಚ್ಚಿಕೊಳ್ಳುತ್ತದೆ. ಮಧ್ಯಾಹ್ನ ನಾಲ್ಕು ಗಂಟೆಗೆ ಮಾತಾಜಿಯ ವಿಶ್ರಾಂತಿ ಮುಗಿಯುತ್ತದೆ. ಆಗ ಅಮ್ಮನನ್ನು ಎಚ್ಚರಿಸುವ ಕಾರ್ಯಕ್ರಮ. ಮುಂದೆ ಅಂದರೆ ಐದು ಗಂಟೆಗೆ ಶಂಕರನ ಪೂಜೆ. ಸಂಜೆ ಏಳಕ್ಕೆ ಮತ್ತೆ ಊಟದ ತಟ್ಟೆಯಿರಿಸಿ ಉಳಿದವರು ಜಪಮಾಲೆ ಹಿಡಿದು ಕೂರುತ್ತಾರೆ. ಎಂಟು ಗಂಟೆಗೆ ಘೋಷಣೆ- "ಅಮ್ಮನ ಹಾಸಿಗೆ ಸಿದ್ಧ". ಇದರೊಂದಿಗೆ ಮತ್ತೆ ಗರ್ಭಗೃಹದ ಬಾಗಿಲು ಮುಚ್ಚಿಕೊಳ್ಳುತ್ತದೆ. ಪರಿಜನರೆಲ್ಲ ಸದ್ದುಗದ್ದಲವಿಲ್ಲದಂತೆ ಹೊರಟು ಮನೆ ಸೇರಿಕೊಳ್ಳುತ್ತಾರೆ.

ಮತ್ತೊಂದು ಕುತೂಹಲಮಯ ಪರಂಪರೆಯೂ ಇಲ್ಲಿ ಜಾರಿಯಲ್ಲಿದೆ. ಸಾಖ್ಯಾ ರಾಜೆ ಉರ್ಫ್ ಜೀಜಾಬಾಯಿಗೆ ಪಾನ್ ತಿನ್ನುವ ಶೋಕಿ ಇತ್ತು. ಸುಂದರವಾದ ಪಾನ್‌ದಾನ್‌ದಲ್ಲಿ ಸದಾ

ಹತ್ತಿಪ್ಪತ್ತು ಬೀಡಾಗಳು ಇರಲೇಬೇಕು. ಮುಂಜಾನೆ ಸ್ನಾನಮಾಡಿಸಿದ ಮೇಲೊಂದು, ಪೋಷಾಕು ಬದಲಿಸಿದ ಮೇಲಿನ್ನೊಂದು, ಊಟ ಮಾಡಿದ ಮೇಲೆ ಮಗುದೊಂದು ಹೀಗೆ ಅಮ್ಮನಿಗೆಂದು ಪಾನ್‌ಬೀಡಾಗಳನ್ನು ಜೀಜಾಬಾಯಿ ಬಳಸುತ್ತಿದ್ದ ಪಾನ್‌ದಾನ್‌ದಲ್ಲಿಡಲಾಗುತ್ತದೆ. ಜತೆಗೆ ಲವಂಗ, ಏಲಕ್ಕಿ ಇತ್ಯಾದಿ. ಏಕಾದಶಿಯಂದು ಜೀಜಾಬಾಯಿ ಉಪವಾಸವಿರುತ್ತಿದ್ದಳಂತೆ. ಹೀಗಾಗಿ ಆದಿನ ಇಲ್ಲಿ ಪ್ರತಿಮೆಗೆ ತಟ್ಟೆಯಿರಿಸುವ ಮತ್ತು ಪಾನ್‌ಬೀಡಾ ಇಡುವ ವಿಧಿಗಳು ನಡೆಯುವುದಿಲ್ಲ. ಆದರೆ, ಲವಂಗ- ಏಲಕ್ಕಿಗಳಿಗೆ ನಿಷೇಧವಿಲ್ಲ.

ಇಬ್ಬರು ದಾಸಿಯರು ಇಂದಿಗೂ 'ತಾಯ್ ಮಹಲ್'ನ ಆವಾರದಲ್ಲೇ ವಾಸಿಸುತ್ತ ಅಮ್ಮನ ಸೇವೆಯಲ್ಲಿ ತೊಡಗಿಕೊಂಡಿದ್ದಾರೆ. ಭೋಜನ ಶಾಲೆ, ಅಡಿಗೆಯವರು, ಪಹರೆದಾರರು ಎಲ್ಲರಿಗೂ ಪ್ರತ್ಯೇಕ ವಸತಿಗಳಿವೆ.

'ತಾಯ್ ಮಹಲ್'ನ ಒಂದು ಭಿತ್ತಿಯ ಮೇಲೆ ಮಹಾರಾಜಾ ಜೀಯಾಜಿ ರಾವ್‌ನ ವರ್ಣಚಿತ್ರವಿದೆ. ಛತರಿಯೆದುರಿನ ಸರೋವರ, ಅದರ ಮೇಲಿರುವ ಸೇತುವೆ ಮಧ್ಯದಲ್ಲಿನ ಮಂಟಪ, ಅದರಲ್ಲಿ ಶಿವ ಹಾಗೂ ನಂದಿಯರ ವಿಗ್ರಹಗಳು. ಪ್ರತಿಯೊಂದೂ ಸುಂದರ, ಮನಮೋಹಕ.

ಇಂಥ ತಾಣದಲ್ಲಿ ಸಂಜೆ ಸೂರ್ಯ ಮುಳುಗುವ ಹೊತ್ತಿನಲ್ಲಿ ಕೂತು ತಾಯಿಯನ್ನು ಸ್ಮರಿಸುತ್ತಿದ್ದ ಮಾಧೋರಾವ್ ಬಹಳ ಕಾಲ ಬದುಕಲಿಲ್ಲ. 'ತಾಯ್ ಮಹಲ್' ತಲೆಯೆತ್ತಿ ಹತ್ತು ವರ್ಷಗಳಾಗುವಷ್ಟರಲ್ಲೇ ಆತ ಅಸುನೀಗಿದ.

ಮಾತೃಭಕ್ತನಾದ ತನ್ನ ಅಪ್ಪನ ಸ್ಮರಣೆಗೆಂದು ಒಂದು ಮಹಲನ್ನೇಕೆ ಕಟ್ಟಿಸಬಾರದು ಎಂದು ಮಾಧೋರಾವ್‌ನ ಮಗ ಜೀವಾಜಿರಾವ್‌ಗೆ ಅನಿಸಿತು. ವಾಸ್ತುವಿದರನ್ನು ಕರಿಸಿಯೇಬಿಟ್ಟ. "ಅಜ್ಜಿಯ ಛತರಿಗಿಂತಲೂ ಭವ್ಯವಾದ ಛತರಿ ನಮ್ಮಪ್ಪನದಾಗಬೇಕು" ಎಂದು ಆಣತಿಯಿತ್ತ. ಶಿಲ್ಪಿಗಳನ್ನು ಕರೆಯಿಸಿ, "ಅಪ್ಪಾಜಿಯ ಮೂರ್ತಿ ಹ್ಯಾಗಿರಬೇಕೆಂದರೆ ಸದಾ ಕಾಲಕ್ಕೂ ಆತ ಎದುರಿಗೆ ತನ್ನ ತಾಯಿಯತ್ತಲೇ ನೋಡುತ್ತಲಿರುವಂತೆನಿಸಬೇಕು" ಎಂದು ಅಪ್ಪಣೆ ಮಾಡಿದ.

'ತಾಯ್ ಮಹಲ್'ನೆದುರಿನ ಮೈದಾನದಲ್ಲಿ ಅದಕ್ಕೆ ಅಭಿಮುಖವಾಗಿ ೧೯೩೨ ರಲ್ಲಿ ಮತ್ತೊಂದು ಛತರಿ ಎದ್ದುನಿಂತಿತು. ಇದರ ನಿರ್ಮಾಣಕ್ಕೆ ಹಿಡಿದದ್ದು ಮೂರು ವರ್ಷಗಳ ಅವಧಿ.

ತಾಯಿ-ಮಗನ ಈ ಸ್ಮಾರಕಗಳನ್ನು ಕಂಡು ಸುಪ್ರಸಿದ್ಧ ತಾರೆ ಕವಯಿತ್ರಿ ಮೀನಾಕುಮಾರಿ -ಹೇಳಿದಳಂತೆ- "ಪ್ರೇಮಿಯೊಬ್ಬ ತನ್ನ ಪ್ರಿಯೆಯ ನೆನಪಲ್ಲಿ ಅಪೂರ್ವ ಸೌಧವನ್ನು ಕಟ್ಟಿಸಬಹುದು, ಸಾಹಸಿಯಾದಾತ ಮುಗಿಲ ಮನೆಯ ದೀಪಗಳಂತಿರುವ ನಕ್ಷತ್ರಗಳನ್ನೇ ತಂದು ಪ್ರೇಯಸಿಯ ತಲೆಗೆ ಬೈತಲು ಮಣಿಯನ್ನಾಗಿಸಲೂಬಹುದು. ಆದರೆ ತಾಯಿಗಾಗಿ ಇಂಥ ಸ್ಮಾರಕಗಳನ್ನು ಕಟ್ಟಿಸುವುದು ಮಾಧೋರಾವ್‌ಗೆ ಮಾತ್ರ ಸಾಧ್ಯ. ಅಂಥ ತಾಯಿಯನ್ನು ಪಡೆದ ಆತ, ಅಂಥ ಮಗನನ್ನು ಪಡೆದ ಆಕೆ ಇಬ್ಬರೂ ಧನ್ಯರು, ಮಾನ್ಯರು ಕೂಡಾ" ಎಂದು. ಜತೆಗೆ ತನ್ನ ಅಪ್ಪನ ಮಾತೃಭಕ್ತಿಗೆ ಒಂದು ಶಾಶ್ವತ ಸ್ವರೂಪವನ್ನು ತಂದಿತ್ತ ಜೀವಾಜಿರಾವ್‌ನನ್ನೂ ಅಭಿನಂದಿಸಿದಳಂತೆ. 

## ವಿನಯ

ಫ್ರಾನ್ಸಿನ ಹೆಸರಾಂತ ಶಸ್ತ್ರಚಿಕಿತ್ಸಕ ಹಾಗೂ ಸಂಶೋಧಕ ಅಂಬ್ರೋಸ್ ಪಾರೆ ಗುಂಡು ತಗುಲಿ ಆದ ಗಾಯಕ್ಕೆ ಬರೆಹಾಕಿ ಉಪಚರಿಸುವ ಕ್ರೂರ ಪದ್ಧತಿಯನ್ನು ಕೊನೆಗೊಳಿಸಿ ಅದನ್ನು ಕಾರ್ಬಾಲಿಕ್ ಆಮ್ಲದಿಂದ ತೊಳೆದು ಔಷಧ ಹಾಕಿ ಉಪಚರಿಸುವ ಪದ್ಧತಿಯನ್ನು ಪ್ರಾರಂಭಿಸಿ ಸಾವಿರಾರು ಗಾಯಾಳುಗಳನ್ನು ಸಾವು-ನೋವುಗಳಿಂದ ಪಾರು ಮಾಡಿದ. ಒಬ್ಬ ರೋಗಿ ಆತನ ಚಿಕಿತ್ಸಾ ಪದ್ಧತಿಯನ್ನು ಮನಸಾರೆ ಹೊಗಳಿದಾಗ ಪಾರೆ "ನಾನು ರೋಗಿಗಳ ಗಾಯವನ್ನು ಶುದ್ಧಗೊಳಿಸಿ ಪಟ್ಟಿಕಟ್ಟುತ್ತೇನೆ. ದೇವರು ಅದನ್ನು ವಾಸಿಮಾಡುತ್ತಾನೆ. ಇದರಲ್ಲಿ ನನ್ನದೇನು ಹೆಚ್ಚುಗಾರಿಕೆ?" ಎಂದು ವಿನಯವನ್ನು ಪ್ರದರ್ಶಿಸಿದನಂತೆ.

**ಕೆ. ವೆಂಕಣ್ಣಾಚಾರ್**



# ಕೋಗಿಲೆ ರಹಸ್ಯದ ಅಧಿಪತಿ

• ಎ. ಆರ್. ಮಣಿಕಾಂತ್
ಚಿತ್ರಗಳು: ಸೋಮು

ನಾನಾಗ ತೀರಾ ಚಿಕ್ಕವನು. ಬೆಳಗಾಗುತ್ತಿದ್ದಂತೆಯೇ ಎದ್ದು ನಮ್ಮೂರ ಪಟೇಲರು ನಾಟಕದಲ್ಲಿ ಹಾಡುತ್ತಿದ್ದ "ಭಲಾ ಭಲಿರೆ ಭುವನ ಧೀಕರಾ..." ಎಂದು ಕೂಗಾಡುತ್ತಾ ಮನೆಯ ಮುಂದೆ ಬಿಸಿಲು ಕಾಯುತ್ತಾ ಕೂತುಬಿಡುತ್ತಿದ್ದೆ. ಬೆಳಗಿನ ತಂಗಾಳಿ ಹಿತವಾಗಿ ಬೀಸುತ್ತಿದ್ದ ಹಾಗೆಯೇ ಹತ್ತಿರದ ಮಾಮರಗಳೆಡೆಯಿಂದ, ಬೇಲಿ ಮರಗಳಿಂದ, ಬೇವಿನ, ಗೊಬ್ಬಳಿ ಮರಗಳೆಡೆಯಿಂದ. 'ಕುಹೂ' ಎಂದ ದನಿ ಬಂದರೆ ನನ್ನ ಹಾಡು 'ಏಕ್‌ದಂ' ನಿಂತು ಹೋಗುತ್ತಿತ್ತು. ಈವರೆಗೂ ನನ್ನ ಸುತ್ತಲೂ ಏನಾದರೂ ಆಡಿಕೊಂಡಿರುತ್ತಿದ್ದ ಹುಡುಗರು ಕೂಡ ಆಟ ನಿಲ್ಲಿಸಿ ಬಿಡುತ್ತಿದ್ದರು. 'ಕುಹೂ' ಎಂಬ ದನಿಗೆ ಉತ್ತರವಾಗಿ ನಾವೆಲ್ಲರೂ ಆ ದನಿಯನ್ನೇ ಅನುಕರಿಸಲು ಯತ್ನಿಸಿ ಸಿಳ್ಳೆ ಇಲ್ಲವೆ ಸಣ್ಣದಾಗಿ ಕೂಗುವ ಮೂಲಕ ಉತ್ತರ ನೀಡುತ್ತಿದ್ದೆವು. ಆ ಕ್ಷಣಕ್ಕೆ ನಮ್ಮೊಂದಿಗೆ ಸ್ಪರ್ಧೆಗಿಳಿದಂತೆ ಕೋಗಿಲೆ ಪುಂಖಾನುಪುಂಖವಾಗಿ ಹತ್ತಾರು ಬಾರಿ 'ಕೂಹೂ' ದನಿ ಹೊರಡಿಸಿಬಿಡುತ್ತಿತ್ತು.

ಬೇಸಿಗೆ ಶುರುವಾದಂತೆಲ್ಲಾ ನಮ್ಮ ಸುತ್ತಣ ಪರಿಸರ ಕೂಡ ಹಲವು ರೀತಿಯ ಬದಲಾವಣೆಗಳತ್ತ ತಿರುಗತೊಡಗುತ್ತದೆ. ಎಲ್ಲಾ ಮರಗಳಲ್ಲೂ ಹಣ್ಣೆಲೆಗಳು ಉದುರಿ ಚಿಗುರೆಲೆಗಳು ಮೂಡತೊಡಗಿದಾಗ ಅದರಿಂದ ತೇಲಿಬರುವ ಮಧುರ ವಾಸನೆ ಎಲ್ಲರನ್ನೂ ಬೇರೊಂದು ಲೋಕದಲ್ಲಿ ತೇಲಿಸಿಬಿಡುತ್ತದೆ. ಸುತ್ತಮುತ್ತಲಿನ ಪರಿಸರದ ನಿಗೂಢಮೌನ ಏಕತಾನವನ್ನೆಲ್ಲಾ ಭೇದಿಸಿ ಸಮೀಪದ ಮಾಮರದಿಂದ "ಕೂಹೂ... ಕೂಹೂ" ಎಂಬ ದನಿ ಕೇಳಿದೊಡನೆಯೇ 'ಅರೆ! ಕೋಗಿಲೆ' ಎಂಬ ಉದ್ಗಾರ ನಮಗರಿವಿಲ್ಲದೆಯೇ ಬಂದುಬಿಡುತ್ತದೆ. ಈ ಕೂಹೂ ದನಿಯಾಲಿಸಿದಾತ ಚಿತ್ರಕಾರನಾಗಿದ್ದರೆ ಕೋಗಿಲೆಯ ಚಿತ್ರವನ್ನು ಬರೆಯುತ್ತಾ, ನಿಸರ್ಗ ಪ್ರೇಮಿಯಾಗಿದ್ದರೆ ಕೋಗಿಲೆಯ ಕುರಿತು ಚಿಂತಿಸುತ್ತಾ ತನಗಾದ ಆನಂದವನ್ನು ವ್ಯಕ್ತಪಡಿಸಿದರೆ ಈ ಕೂಹೂ ದನಿಯಾಲಿಸಿದಾತ ಕವಿಯೊ, ಗಾಯಕನೋ ಆಗಿದ್ದರೆ ಒಂದು ಹಾಡನ್ನೇ ಹಾಡಿ ಬಿಡುತ್ತಾನೆ. ಕಣವಿಯವರು ಹೇಳುವಂತೆ

*ಕೆಂಪುತಳಿರು ಕೆಂಪಿನಲರು*
*ಸೂಸುತಿಹುದು ಮಾಮರಾ*
*ಅಲ್ಲಿ ಕುಳಿತು ಎಲ್ಲ ಮರೆತು*
*ಉಲಿಯುತಿರುವೆ ಸುಮಧುರಾ!*

ಮಳೆಗಾಲದಲ್ಲಿ ಆಕಸ್ಮಿಕವಾಗಿ ಮಾತ್ರ ಒಮ್ಮೊಮ್ಮೆ ಕಾಣಸಿಗುತ್ತಾ ಬೇಸಿಗೆಯಲ್ಲಿ ಮಾಮರಕ್ಕೆ ದಾಳಿ ಮಾಡಿ ತನ್ನಿರವು ಸ್ಪಷ್ಟಪಡಿಸುವ, ಮಧುರ ಕಂಠಸಿರಿಯಿಂದಲೇ ಎಲ್ಲರಿಗೂ ಪರಿಚಿತವಾದ, ಕವಿಗಳ ಸ್ಫೂರ್ತಿಯ ಮೂಲವಾಗಿರುವ ಈ ಕೋಗಿಲೆಯನ್ನು ಕಂಡಾಗಲೆಲ್ಲಾ ನನಗೆ ಅಚ್ಚರಿಯಾಗುತ್ತದೆ.

### ಬದುಕು

ಯೂಡಿನಾಮಿಸ್ ಸ್ಕೋಲ ಪೇಸಿಯ (ಲಿನಿಯಸ್) ಎಂಬ ವೈಜ್ಞಾನಿಕ ಹೆಸರಿನ ಹಕ್ಕಿ ಈ ಕೋಗಿಲೆ. ಊರುಗಳ ಬಳಿಯಿರುವ ತೋಟಗಳು, ಮಾವಿನ ತೋಪುಗಳು, ಮತ್ತಿತರ ಹಣ್ಣಿನ ಮರಗಳ ಮೇಲೆ ಸಾಮಾನ್ಯವಾಗಿ ಕಂಡು ಬರುವ ಮರದ ಎಲೆಗಳ ನಡುವೆ, ರೆಂಬೆಗಳಲ್ಲಿ ಅವಿತುಕೊಂಡೇ ಇರುವ ಕೋಗಿಲೆಯನ್ನು ಅದು ಕೂಗುವಾಗಲೋ ಮರದಿಂದ ಮರಕ್ಕೆ ಹಾರುವಾಗಲೋ ಸುಲಭವಾಗಿ ಗುರುತಿಸಬಹುದು.

ಕೋಗಿಲೆ ಗಾತ್ರದಲ್ಲಿ ಸುಮಾರಾಗಿ ಕಾಗೆಯಷ್ಟಿದೆ. ಪುಚ್ಛಮಾತ್ರ ಸ್ವಲ್ಪ ಉದ್ದ. ಹಳದಿ ಮಿಶ್ರಿತ ಹಸಿರು ಬಣ್ಣದ ಕೊಕ್ಕನ್ನೂ ಕೆಂಪು ಕಣ್ಣುಗಳನ್ನೂ ಹೊಂದಿರುವ ಕೋಗಿಲೆಗಳಲ್ಲಿ ಗಂಡು ಹಕ್ಕಿಯ ಬಣ್ಣ ಮಿರಮಿರನೆ ಮಿಂಚುವ ಕಪ್ಪಾದರೆ, ರೆಕ್ಕೆಗಳ ಮೇಲೆ ಬಿಳಿ ಚುಕ್ಕೆಗಳು ಮತ್ತು ಸಣ್ಣ ಸಣ್ಣ ಪಟ್ಟೆಗಳನ್ನು ಹೊಂದಿರುವ ಹೆಣ್ಣು ಕೋಗಿಲೆಯ ಬಣ್ಣ ಕಂದು. ಆರಳಿ, ಎಲಚಿ, ಹಿಪ್ಪುನೇರಿಳೆ, ಗಂಧದ ಮರ ಇವುಗಳಲ್ಲಿನ ಹಣ್ಣುಗಳೇ ಕೋಗಿಲೆಯ ಮುಖ್ಯ ಆಹಾರ. ಕೆಲವೊಮ್ಮೆ ಕೀಟಗಳು, ಕಂಬಳಿ ಹುಳುಗಳು, ಸಣ್ಣ ಪಕ್ಷಿಗಳ, ಮೊಟ್ಟೆಗಳು, ಕೆಲವು ಬಗೆಯ ಹೂಗಳ ಮಕರಂದವನ್ನೂ ಕೋಗಿಲೆ ಸೇವಿಸುವುದುಂಟು. ಕೇಳುಗರೆಲ್ಲರೂ ತಲೆದೂಗುವಂತೆ "ಕುಹೂ, ಕುಹೂ" ಎಂದು ಕೂಗುವುದು ಗಂಡು ಕೋಗಿಲೆ ಮಾತ್ರ. ಹೆಣ್ಣು ಕೋಗಿಲೆ ಮರದಿಂದ ಮರಕ್ಕೆ ಹಾರುವಾಗ "ಕಿಕ್...ಕಿಕ್...ಕಿಕ್" ಎಂದು ಧ್ವನಿ ಹೊರಡಿಸುತ್ತದೆ.

ಕೋಗಿಲೆ ಕಾಗೆಗಳ ಗೂಡಲ್ಲಿ ಮೊಟ್ಟೆಯಿಡುವುದರ ಮೂಲಕ ತನ್ನ ಸಂತಾನಾಭಿವೃದ್ಧಿ ಮಾಡಿಕೊಳ್ಳುವುದರಿಂದ ಕವಿಗಳು ಇದನ್ನು 'ಪರಪುಟ್ಟ' ಎಂದು ಕರೆದಿದ್ದಾರೆ. ಕಾಗೆಗಳು ಗೂಡು ರಚಿಸಿ ಮೊಟ್ಟೆಯಿಡುವುದನ್ನು ಕಾದಿದ್ದು ಅವು ಗೂಡಲ್ಲಿಲ್ಲದಾಗ ಒಂದು ಮೊಟ್ಟೆಯನ್ನು ಹೊರತೆಗೆದು ಬಿಸಾಡಿಬಿಡುವ ಅಥವಾ ತಿಂದು ಬಿಡುವ ಕೋಗಿಲೆ ಆ ಜಾಗದಲ್ಲಿ ತನ್ನ ಮೊಟ್ಟೆಯಿಟ್ಟು ನಿರುಮ್ಮಳವಾಗಿ ವಾಪಸಾಗುತ್ತದೆ. ಈ ಕುತಂತ್ರವನ್ನರಿಯದೆ ಕೋಗಿಲೆಯ ಮೊಟ್ಟೆಯನ್ನೂ ತನ್ನದೆಂದೇ ಭ್ರಮಿಸಿ, ಅದಕ್ಕೆ ಕಾವುಕೊಟ್ಟು ಮರಿಮಾಡಿ, ಗುಟುಕು ನೀಡಿ ಸಲಹುವ ಕಾಗೆ, ಹಾಗೆ ಮುಂದೊಮ್ಮೆ ಅದು ತನ್ನ ಮರಿಯಲ್ಲ ಎಂದು ಗೊತ್ತಾದೊಡನೆ ಕೋಗಿಲೆ ಮರಿಯನ್ನು ಕುಕ್ಕಿ ಓಡಿಸುತ್ತದೆ. ಕೆಲವೊಮ್ಮೆ ಕೊಲ್ಲುತ್ತದೆ ಕೂಡ! ತಮ್ಮ ಒಗ್ಗಟ್ಟು, ಆಕ್ರಮಣಶೀಲತೆ, ಹಂಚಿಕೊಂಡು ತಿನ್ನುವ ಮನೋಭಾವಗಳಿಂದ ಒಮ್ಮೊಮ್ಮೆ ಮಾನವನಿಗೂ ಪಾಠ ಕಲಿಸಿಕೊಡುವ, ಮನುಷ್ಯನ ಎಲ್ಲಾ ರೀತಿಯ ಜಾಣತನ, ಕುಯುಕ್ತಿಗಳನ್ನೂ ಹೊಂದಿರುವ ಕಾಗೆಯ ಬುದ್ಧಿವಂತಿಕೆ ಕುರಿತು ಹಲವು ಜಾನಪದ ಕತೆಗಳು ಸಿಗುತ್ತವೆ. ಉಳಿದೆಲ್ಲ ವಿಚಾರಗಳಲ್ಲೂ ಚುರುಕಾಗಿರುವ ಕಾಗೆ ಕೋಗಿಲೆಯ ಮೊಟ್ಟೆ ಗುರುತಿಸಲಾಗದೆ ಅದಕ್ಕೂ ಕಾವು ನೀಡುವ ವಿಷಯದಲ್ಲಿ ಮಾತ್ರ ಪೆದ್ದು ಅನ್ನಿಸಿಕೊಂಡಿದೆ. ಕಾಗೆಯ ಪೆದ್ದುತನ ಶತಮಾನಗಳಿಂದಲೂ ಹಾಗೆಯೇ ಉಳಿದುಕೊಂಡು ಬಂದಿದೆ! ಹಾಗೆಯೇ ಕೋಗಿಲೆಯ ಸೋಮಾರಿತನ ಕೂಡ!!

ಈ ಕೋಗಿಲೆಯ ಮತ್ತೊಂದು ಗಮನಾರ್ಹ ಅಂಶವೆಂದರೆ ಮೊಟ್ಟೆಯೊಡೆದು ಹೊರಬರುವ ಮೊದಲ ಮರಿ ಗೂಡಿನಲ್ಲಿರುವ ಇತರ ಮೊಟ್ಟೆಗಳನ್ನು ಅಥವಾ ಮರಿಗಳನ್ನು ಹೊರಗೆ ನೂಕಿ ತನ್ನ ರಕ್ಷಣೆಯ ಕಡೆಗೆ ಗಮನ ಕೊಡುತ್ತದೆ. ಕೆಲವು ವೇಳೆ ಗೂಡಿನಲ್ಲಿ ಒಂದಕ್ಕಿಂತ ಹೆಚ್ಚು ಮರಿಗಳಿದ್ದರೆ ಎಲ್ಲಕ್ಕಿಂತ ಬಲಿಷ್ಠ ಮರಿ ಮಾತ್ರ ಉಳಿದುಕೊಳ್ಳುತ್ತದೆ. ಒಂದು ವೇಳೆ ಕೋಗಿಲೆ ಒಂದೇ ಗೂಡಿನಲ್ಲಿ ಎರಡು ಮೊಟ್ಟೆಯನ್ನಿಟ್ಟಿದ್ದ ಪಕ್ಷದಲ್ಲಿ ಎರಡು ಮರಿಗಳೂ ಪರಸ್ಪರ ಒಂದೆರಡು ದಿನ ಕಚ್ಚಾಡಿ, ತೆಪ್ಪಗಾಗಿ ಒಟ್ಟಾಗಿ ಬೆಳೆಯುತ್ತವೆ. ಹೀಗೆ ಕೋಗಿಲೆ



ಗಂಡು ಕೋಗಿಲೆ

ಆರಂಭದಿಂದಲೇ ಬದುಕಲ್ಲಿ ಹೋರಾಟ ನಡೆಸುತ್ತದೆ.

ತನ್ನ ವಿಚಿತ್ರ ಬದುಕಿನಿಂದ ಎಲ್ಲರಲ್ಲೂ ಬೆರಗುಂಟು ಮಾಡುವ ಕೋಗಿಲೆಯ ಮತ್ತೊಂದು ವಿಶಿಷ್ಟ ಲಕ್ಷಣವೇನೆಂದರೆ ಈ ಕೋಗಿಲೆ ಚಳಿಗಾಲದಲ್ಲಿ ದಕ್ಷಿಣ ಭಾರತದಿಂದ ಆಫ್ರಿಕದ ಕಡೆಗೆ ವಲಸೆ ಹೋಗುವುದು. ಇದಾಗಿ ಒಂದು ತಿಂಗಳ ನಂತರ ಮರಿಗಳು ಸಹಜ ಪ್ರವೃತ್ತಿಯಿಂದ ವಲಸೆಯ ದಿಕ್ಕನ್ನು ಕಂಡುಕೊಂಡು ತಾಯಿಯನ್ನು ಹಿಂಬಾಲಿಸುತ್ತವೆ!

ಹೀಗೆ ಹತ್ತು ಹಲವು ರೀತಿಯ ಅತಂತ್ರ ಬದುಕು ಸಾಗಿಸುತ್ತಿರುವ ಕೋಗಿಲೆಗೆ ಮಧುರಕಂಠ ದೊರಕಿದ್ದಾದರೂ ಹೇಗೆ? ಎಂಬ ಜಿಜ್ಞಾಸೆ ಹಲವರನ್ನು ಕಾಡಿದೆ. ಮಾವಿನೆಲೆ ಚಿಗುರನ್ನು ತಿನ್ನುವುದರಿಂದಲೇ ಕೋಗಿಲೆಗೆ ಮಧುರ ಕಂಠ ಬಂದಿದೆ ಎಂಬ ಕೆಲವರ ವಾದವನ್ನು ಒಪ್ಪದ ಜನ ಅದೆಲ್ಲವೂ ವಿಧಿವಿಲಾಸವೆಂದೋ ದೈವಲೀಲೆಯೆಂದೋ ಹೇಳುತ್ತ ತೆಪ್ಪಗಾಗುತ್ತಾರೆ.

ಆದರೆ ಚಿಕ್ಕಂದಿನಿಂದಲೂ ಗುಟುಕುಕೊಟ್ಟು ತಾಯಿ-ತಂದೆಯಾಗಿ ಸಾಕಿದ ಸಲಹಿದ ಕಾಗೆಯೇ ಕಡೆಗೊಂದು ದಿನ ಗೂಡಿನಿಂದ ಹೊರ ತಳ್ಳಿದಾಗ ಹೊಮ್ಮುವ. ಕೋಗಿಲೆಯ ದನಿಯೇ 'ಕುಹೂ' ಎಂಬ ನರಳಿಕೆಯಾಯಿತೆ? ಯಾಕಾಗಿರಬಾರದು?? ಕೇಳುಗರನ್ನೆಲ್ಲಾ 'ಕುಹೂ' ಎಂಬ ಆರ್ತನಾದದಿಂದಲೇ ಆಕರ್ಷಿಸಿಬಿಡುವ ಕೋಗಿಲೆಯ ದನಿಯಲ್ಲಿ ಹೆಪ್ಪುಗಟ್ಟಿದ ನೋವಿನ, ಆರ್ದ್ರತೆಯ ಭಾವವೇನಾದರೂ ಇದೆಯೆ? ಇಲ್ಲ ಎಂಬುದಕ್ಕಾದರೂ ಆಧಾರವಿದೆಯೆ? ಈ ಎಲ್ಲಾ ಗೊಂದಲವನ್ನೂ ಅರಿತವರಂತೆ 'ಮೈಸೂರು ಮಲ್ಲಿಗೆ'ಯ ಖ್ಯಾತ ಕವಿ ಡಾ. ಕೆ.ಎಸ್. ನರಸಿಂಹಸ್ವಾಮಿಯವರು ತಮ್ಮ 'ಹಕ್ಕಿ ಹಾಡಿತು' ಕವನದಲ್ಲಿ ಕೋಗಿಲೆಗೆ ಕೂಹೂ ಎಂಬ ದನಿ ಹೇಗೆ ಬಂತು ಎಂದು ಬರೆಯುತ್ತಾ ಹೇಳುತ್ತಾರೆ:

ಅದರ ಕೊರಲಿನಲ್ಲಿ ಹಸಿವು
ಕೂಗಿತೇನೊ ಎಂದನೊಬ್ಬ
ಭಗ್ನವಾಗಿ ಅದರ ಒಲವು
ಅತ್ತಿತೇನೊ ಎಂದನೊಬ್ಬ.

* * * *

ರಷ್ಯಾದ ಜನ ಎಷ್ಟೊಂದು ಕ್ರಿಯಾಶೀಲರು, ಅಲ್ಲಿನ ಸಾಮಾಜಿಕ ಸ್ಥಿತಿ-ಗತಿಗಳೇನು ಎಂಬುದನ್ನು ವಿವರಿಸುವ ರಾಷ್ಟ್ರಕವಿ ಕುವೆಂಪು 'ತಮ್ಮ ಕೋಗಿಲೆ ಮತ್ತು ಸೋವಿಯಟ್ ರಷ್ಯಾ' ಕವನದಲ್ಲಿ ಹೀಗೆ ಬರೆಯುತ್ತಾರೆ. (ಕನ್ನಡನಾಡಿನ ಈ ಕವಿಯನ್ನು ಅಲ್ಲಿ ಭೇಟಿಯಾದ ಕೋಗಿಲೆ ಆಗಿನ ರಷ್ಯಾದ ಸ್ಥಿತಿಯಲ್ಲಿ ತನ್ನ ಕಷ್ಟವನ್ನು ಹೇಳಿಕೊಳ್ಳುತ್ತದೆ.)

"ಕವಿವರ್ಯ, ಇಂದು ಈ ವಿಪರೀತ ಕಾಲದಲ್ಲಿ ನನ್ನ ಮೊಟ್ಟೆಯ ಮೇಲೆ ನಾನೆ ಕಾವಿಗೆ ಕೂತು ಮರಿಮಾಡಬೇಕೆಂದು ಸೋವಿಯಟ್ ತಾಕೀತು!"

ಅಂದರೆ ರಷ್ಯಾದಲ್ಲಿ ಕೋಗಿಲೆ ಕೂಡ ಪರಾವಲಂಬಿಯಾಗಿರದೆ ತಾನೇ ಕಾವುಕೊಟ್ಟು ಮರಿಮಾಡಿಕೊಳ್ಳಬೇಕು! ಈಗ ದಯಮಾಡಿ ಚಿಂತಿಸಿ:

ಜೀವವಿಕಾಸ ಪಥದಲ್ಲಿ ಹಲವು ಬದಲಾವಣೆಗಳಾಗಿ, ಸರೀಸೃಪಗಳೇ ರೆಕ್ಕೆ ಪುಕ್ಕ ಬೆಳೆಸಿಕೊಂಡು ಬಣ್ಣ ಬಣ್ಣದ ಪಕ್ಷಿ ಸಂಕುಲ ಆಗಿ, ಮಂಗ ಧರೆಗಿಳಿದು ಮಾನವನಾಗಿ ಆಯುಧಗಳನ್ನು ಮಾಡಿ ಯಂತ್ರಮಾಡಿ, ಯಂತ್ರಗಳನ್ನು ಮಾಡುವ ಯಂತ್ರಮಾಡಿ ಮನುಷ್ಯ ತಾನೇ ಈ ಭೂಮಂಡಲದ ಏಕಮೇವಾದ್ವಿತೀಯನೆಂದು ಮೆರೆಯುತ್ತಾ ನೀಲಾಗಸದಲ್ಲಿ ಹಾರುವ ಹಕ್ಕಿ ಕಂಡು ವಿಮಾನವನ್ನೂ, ನೀರೊಳಗೆ ತೇಲಾಡುವ ವೇಗದಿಂದ ಈಜುವ ಮೀನು ಮತ್ತಿತರ ಜಲಚರಗಳನ್ನೂ ಕಂಡು ಹಡಗು, ದೋಣಿಗಳನ್ನೂ ಕಂಡುಹಿಡಿದಿದ್ದಲ್ಲದೆ ತನ್ನ ಪ್ರಚಂಡ ಶಕ್ತಿಯಿಂದ ಬಾನಿಗೂ ಲಗ್ಗೆಯಿಟ್ಟು ಎಲ್ಲೆಡೆಯೂ ತನ್ನ ಆಪತ್ಯ ಸ್ಥಾಪಿಸಿ ಎಲ್ಲರೂ ಬೆಚ್ಚುವಂತೆ ರೋಬಾಟ್‌ಗಳನ್ನು, ಪ್ರಣಾಶಿಶುಗಳನ್ನು ತಯಾರಿಸಿದಾಗಲೂ ಹಲವು ರೀತಿ ಸಹಕರಿಸಿದ ಸುತ್ತಣ ಪರಿಸರ ಕೋಗಿಲೆಗಳನ್ನು ಮಾತ್ರ ಯಾಕೆ ಪುರಾತನ ನಂಬಿಕೆಗಳಲ್ಲೇ ಉಳಿಸಿತು? ಜೀವ ವಿಕಾಸ ಪಥದ ಉಳಿದೆಲ್ಲವನ್ನೂ ರೂಪಾಂತರಗೊಳಿಸಿ ವಿಕಾಸಗೊಳಿಸಿದ ಯಾವ ಮಾಯಾಹಸ್ತ ಈ ಕೋಗಿಲೆಗೆ ತಾಯಿಯಾಗುವ ಸುಖವನ್ನೂ ಕಾಗೆಗೆ ಮೊಟ್ಟೆ ಗುರುತಿಸುವ ಜ್ಞಾನವನ್ನೂ ನೀಡದೇ ಹೋಯಿತು? ಏಕೆಂದರೆ ಮನುಷ್ಯನೂ ಸೇರಿದಂತೆ ಸಕಲ ಜೀವರಾಶಿಗಳಿಗೂ ತಾಯಿಯಾಗುವುದು ಒಂದು ರೀತಿಯ ಬಯಕೆ, ಉನ್ಮಾದ. ಹಾಗೆಯೇ ತಾಯ್ತನದ ಅನುಭವ ಒಂದು ರೀತಿಯ ಆನಂದಾನುಭೂತಿ ಕೂಡ. ಹೀಗಿರುವಾಗ ಕೋಗಿಲೆಗ ತಾನೂ ಒಮ್ಮೆಯಾದರೂ ತಾಯ್ತನದ ಸುಖ-ನೋವುಗಳ ದಟ್ಟ ಅನುಭವ ಪಡೆಯಬೇಕು ಅಂತ ಯಾಕೆ ಅನ್ನಿಸಲಿಲ್ಲ? ಕೋಗಿಲೆಗಳು ಈಗಲೂ ನಮ್ಮ ನಂಬಿಕೆಯಂತೆಯೇ ಉಳಿದಿವೆಯೆ? ಕಾಲಪ್ರವಾಹದಲ್ಲಿ ಇವು ಬದಲಾಗಿಲ್ಲ ಅನ್ನುವುದಕ್ಕೇನು ಖಾತರಿ ಇದೆ?



"ಗಂಡಸರಿಗೆ ಬಲಗಣ್ಣು ಹಾರಿದರೆ ಶುಭ ಶಕುನ ಅಂತ ಕೇಳಿದ್ದೆ..."

ಇದೊಂದು ಚಿದಂಬರ ರಹಸ್ಯ. ಜೀವವಿಕಾಸ ಪಥದಲ್ಲಿ ಹಲವಾರು ಬದಲಾವಣೆಗಳಾದರೂ ಕೋಗಿಲೆಗಳು ಮಾತ್ರ ಯಾಕೆ ಬದಲಾಗಿಲ್ಲ ಎಂಬುದು ಬ್ರಹ್ಮಾಂಡದ ರಹಸ್ಯಗಳಲ್ಲಿ ಒಂದು. ಈ ಬಗ್ಗೆ ಚಿಂತಿಸುತ್ತಾ ಹೋದಂತೆಲ್ಲಾ ನಾವು ವಾದಿಸುವ ಮಾತುಗಳು ಮಾತ್ರವೇ ಸತ್ಯವೆಂದು ಕಾಣುವುದರಿಂದ ಕಡೆಯದಾಗಿ ಮತ್ತೆ ಮತ್ತೆ ಕೋಗಿಲೆಯ ನಿಗೂಢ, ಅತಂತ್ರ, ವರ್ಣರಂಜಿತ ಬದುಕಿನೊಂದಿಗೆ ಸುಮಧುರ 'ಕೂಹೂ' ದನಿಯನ್ನೂ ಮತ್ತೆ ಮತ್ತೆ ನೆನೆಯುತ್ತಾ,

**ರಸದ ಚಿಲುಮೆ ಹರಿಸಿ ಒಲುಮೆ**
**ಸುಧೆಯ ನೀಡು ಕೋಗಿಲೆ**
**ಮೌನಧ್ಯಾನ ನಿನಗೆ ಊನ**
**ಕುಶಲ ಜಾಣ ಕೋಗಿಲೆ**

ಎಂಬ ಕಣವಿಯವರ ಕವನಕ್ಕೇ ಮೊರೆ ಹೋಗುತ್ತಿದ್ದೇನೆ. ಕ್ಷಮಿಸಿ.

---

(ಕೃತಜ್ಞತೆಗಳು: ಈ ಲೇಖನಕ್ಕೆ ಪೂರಕವಾಗಿ ಕರ್ವಾಲೋ: ಕಾದಂಬರಿಯ ಕೆಲವು ಸಾಲುಗಳನ್ನು ಬಳಸಿಕೊಳ್ಳಲು ಪ್ರೀತಿಯಿಂದ ಒಪ್ಪಿಗೆ ನೀಡಿದ ಶ್ರೀ ಕೆ.ಪಿ. ಪೂರ್ಣಚಂದ್ರ ತೇಜಸ್ವಿ ಅವರಿಗೆ.)

ವ್ಯಕ್ತಿತ್ವ

# ಸಚಿನ್ = ಪ್ರಶ್ನೆ, ಪ್ರಯತ್ನ, ಪ್ರಸಿದ್ಧಿ



"ಒಂದು ವೇಳೆ ನಾನು ೧೫ ವರ್ಷದೊಳಗಿನವರ ಟೂರ್ನಿಯಲ್ಲಿ ಅತ್ಯುತ್ತಮ ಪ್ರದರ್ಶನ ನೀಡಿದೆನೆಂದಿಟ್ಟುಕೋ... ಆಗ?"

"ಆಗ ೧೭ ವರ್ಷದವರ ಮುಂಬಯಿ ತಂಡಕ್ಕೆ ಆಯ್ಕೆದಾರರು ನಿನ್ನನ್ನು ಪರಿಗಣಿಸಬಹುದು. ನಂತರ ಪಶ್ಚಿಮ ವಲಯದ ತಂಡಕ್ಕೆ; ಆ ಮೇಲೆಯೂ ನಿನ್ನಿಂದ ಇನ್ನೂ ಉತ್ಕೃಷ್ಟ ಆಟ ಪ್ರದರ್ಶಿಸಲ್ಪಟ್ಟರೆ ೧೭ ವರ್ಷದವರ ಭಾರತೀಯ ಶಿಬಿರಕ್ಕೂ ಆಯ್ಕೆಗೊಳ್ಳಬಹುದು."

• ಕೇಶವ ಆದಿ

ಇದು ಜಗದ್ವಿಖ್ಯಾತ ಬ್ಯಾಟ್ಸ್‌ಮನ್, ಭಾರತದ ಸಿಡಿಲಮರಿ ಸಚಿನ್ ತೆಂಡೂಲ್ಕರ್ ಹಾಗೂ ಅವರ ಸಹೋದರ ಅಜಿತ್ ತೆಂಡೂಲ್ಕರ್ ಅವರ ನಡುವೆ

*ಬೆಟ್ಟದೆತ್ತರದ ಮಹತ್ವಾಕಾಂಕ್ಷೆಯ ಪುಟ್ಟ ಆಸಾಮಿ ಸಚಿನ್ ತೆಂಡೂಲ್ಕರ್. ಆತ ಬೆಳೆದು ಬಂದ ಬಗೆಯೇ ಭಿನ್ನವಾದದ್ದು. ಪ್ರಶ್ನೆ ಹಾಕಿ, ಉತ್ತರ ಪಡೆದು, ಪ್ರಯತ್ನವಾದಿಯಾಗಿ ಪ್ರಸಿದ್ಧಿಯ ಶಿಖರಕ್ಕೇರಿದ ಆತನ ಕುರಿತು ಅಣ್ಣ ಅಜಿತ್ ತೆಂಡೂಲ್ಕರ್ 'ಮೈ ಬ್ರದರ್ ಸಚಿನ್' ಪುಸ್ತಕದಲ್ಲಿ ಆತ್ಮೀಯ ಹಾಗೂ ವ್ಯಕ್ತಿಗತವಲ್ಲದ ಚಿತ್ರಣ ನೀಡಿದ್ದಾರೆ. ಅದರಿಂದಾಯ್ದ ಭಾಗವಿದು.*



ಹದಿನಾಲ್ಕರ ಎಳೆಯ

ಕೆಲ ವರ್ಷಗಳ ಹಿಂದೆ ನಡೆದ ಮಾತುಕತೆ.

ಅಣ್ಣ ಹೇಳಿದ ಆ ಮಾತು ಪ್ರೋತ್ಸಾಹದಾಯಕವಾಗಿಯೇ ಇತ್ತಾದರೂ ಅದರಿಂದ ಸಚಿನ್‌ಗೆ ಸಮಾಧಾನವಾಗಲಿಲ್ಲ. "ಒಂದು ವೇಳೆ ೧೭ ವರ್ಷದೊಳಗಿನವರ ಕ್ರಿಕೆಟ್ ಟೂರ್ನಿಯ ಪ್ರತಿಯೊಂದು ವಿಭಾಗದಲ್ಲಿ ಅತ್ಯುತ್ತಮ ಪ್ರದರ್ಶನ ನೀಡಿದರೆ....?" ಎಂಬ ಮರು ಪ್ರಶ್ನೆ.

"ಇದರಿಂದ ನಿನ್ನನ್ನು ೧೯ ವರ್ಷದವರ ತಂಡಕ್ಕೆ ತೆಗೆದುಕೊಳ್ಳುವರಲ್ಲದೆ ಟೆಸ್ಟ್ ತಂಡಕ್ಕೂ (೧೯ ವರ್ಷದೊಳಗಿನವರ) ಆಯ್ಕೆ ಮಾಡಬಹುದು," ಎಂದು ಅಜಿತ್ ಹೇಳಬೇಕಾಯಿತು. ಸೋದರ ಸಚಿನ್ ಬಗ್ಗೆ ಅಜಿತ್ ತಾವು ಬರೆದ ಪುಸ್ತಕದಲ್ಲಿ ಈ ಪ್ರಸಂಗವನ್ನು ಪ್ರಸ್ತಾಪಿಸಿದ್ದಾರೆ.

"ನಿತಿನ್ ಸವಿತಾ ಹಾಗೂ ನನ್ನ ಹೊರತಾಗಿ ಸಚಿನ್ ನಮ್ಮ ಮನೆಯಲ್ಲಿ ವಿಶಿಷ್ಟ ವಾತಾವರಣದಲ್ಲಿಯೇ ಬೆಳೆದ. ನನ್ನ ಹಾಗೂ ಸಚಿನ್

ಡೆನ್ನಿಸ್ ಲಿಲಿಯೊಂದಿಗೆ

ನಡುವೆ ವಯಸ್ಸಿನ ಅಂತರ ೧೧ ವರ್ಷಗಳಷ್ಟು. ಸಚಿನ್ ಮಗುವಾಗಿದ್ದಾಗ ನನಗೂ ನಿತಿನ್‌ಗೂ ಕ್ರಿಕೆಟ್‌ನಲ್ಲಿ ತುಂಬಾ ಆಸಕ್ತಿಯಿತ್ತು. ಕ್ರಿಕೆಟ್ ಬ್ಯಾಟ್, ಚೆಂಡು ಹಿಡಿದು ನಾವಿಬ್ಬರೂ ಹೊರಗೆ ಹೊರಟರೆ ಸಚಿನ್ ಕುತೂಹಲದಿಂದ ನೋಡುತ್ತಾ ನಿಲ್ಲುತ್ತಿದ್ದ. ನಾವು ತಿರುಗಿ ಬಂದ ನಂತರ, 'ಪಂದ್ಯದಲ್ಲಿ ಯಾರು ಗೆದ್ದರು? ನೀನು ಎಷ್ಟು ರನ್ ಹೊಡೆದೆ?' ಎಂದೆಲ್ಲ ಕೇಳುತ್ತಿದ್ದ ಸಚಿನ್‌ಗೆ ಕ್ರಿಕೆಟ್‌ನಲ್ಲಿದ್ದ ಆಸಕ್ತಿಯನ್ನು ಕಂಡು ನಮಗೇ ಆಶ್ಚರ್ಯವಾಗುತ್ತಿತ್ತು.

"ಕ್ರಿಕೆಟ್‌ನಿಂದ ಆಗಾಗ ಬಿಡುವು ಪಡೆಯುತ್ತಿದ್ದ ಸಚಿನ್‌ನ ಮತ್ತೊಂದು ಮೆಚ್ಚಿನ ಆಟ ಎಂದರೆ ಟೆನ್ನಿಸ್. ಅದರಲ್ಲೂ ಜಾನ್ ಮೆಕೆನ್ರೊ ಅಂದರಂತೂ ಕುಣಿದಾಡುತ್ತಿದ್ದ. ಮೆಕೆನ್ರೋನಂತೆಯೆ ಸರ್ವಿಸ್ ಮಾಡುತ್ತಿದ್ದ. ಸಚಿನ್‌ನ ಆಟ ಹಾಗೂ ಅವನ ಗುಂಗುರು ಕೂದಲನ್ನು ನೋಡಿದ ಆತನ ಗೆಳೆಯರು 'ಮರಿ ಮ್ಯಾಕ್'ಎಂದೇ ಕರೆಯುತ್ತಿದ್ದರು.

"ಮುಂದೆ ಖ್ಯಾತ ತರಬೇತುದಾರ ಸರ್ ಆರ್ಚೇಕರ ಅವರ ತರಬೇತಿ ಶಿಬಿರ ಸೇರಿದ ಸಚಿನ್ ಮೊದಮೊದಲು ವೇಗದ ಬೌಲಿಂಗಿಗೆ ಗಮನಕೊಟ್ಟನಾದರೂ ಕಡೆಗೆ ತನ್ನ ಮನಸ್ಸನ್ನು ಪೂರ್ಣ ಬ್ಯಾಟಿಂಗಿಗೆ ಬದಲಾಯಿಸಿಕೊಂಡ.

"ದಿನಾಲು ಬೆಳಗ್ಗೆ ೭.೩೦ರೊಳಗೆ ಮೈದಾನದಲ್ಲಿ ಹಾಜರಾಗುತ್ತಿದ್ದ ಸಚಿನ್‌ಗೆ ಒಂದೇ ಗುರಿ; ನಿನ್ನೆಯದಕ್ಕಿಂತ ಇಂದು ಉತ್ತಮ ಆಟ ಪ್ರದರ್ಶಿಸಿ ಗುರುಗಳಿಂದ ಭೇಷ್ ಎನಿಸಿಕೊಳ್ಳಬೇಕೆಂಬುದು. ತರಬೇತಿ ಮುಗಿದ ನಂತರ 'ನಾನು ಎಲ್ಲರಿಗಿಂತ ಚೆನ್ನಾಗಿ ಬ್ಯಾಟ್ ಮಾಡಿದೆ,' ಎಂದು ಆತ ಹೇಳುವಾಗ ನಮಗೋ ಎಲ್ಲಿಲ್ಲದ ಸಂತಸ.

"ಇವನ ಆಟವನ್ನು ಪ್ರತಿದಿನವೂ ವೀಕ್ಷಿಸುತ್ತಿದ್ದ ಆರ್ಚೇಕರ್ ಅವರು ಮುಂದೆ ಸಚಿನ್‌ಗೆ ಕಾಮತ್ ಮೆಮೋರಿಯಲ್ ಕ್ರಿಕೆಟ್ ಕ್ಲಬ್ಬಿನ ಕಾಯಂ ಸದಸ್ಯತ್ವ





ಸಿಕ್ಸರ್ ಗುರಿ!



ಅಜಿತ್ ತೆಂಡೂಲ್ಕರ್

ನೀಡಿದರು.”

ತನ್ನ ಶ್ರೇಷ್ಠಮಟ್ಟದ ಪ್ರದರ್ಶನದಿಂದ ಕಿರಿಯ ವಯಸ್ಸಿನಲ್ಲಿ ಹಿರಿಯ ಸಾಧನೆಯೊಂದಿಗೆ ಯಶಸ್ಸಿನ ಉತ್ತುಂಗಕ್ಕೆ ಏರಿದ ಸಚಿನ್ ತೆಂಡೂಲ್ಕರ್ ಆನಂತರ ಭಾರತದ ಹಿರಿಯರ ತಂಡದ ಉಪನಾಯಕರಾಗಿದ್ದುದು ಈಗ ಇತಿಹಾಸ.

ಅಂದುಕೊಂಡಂತೆ ಉತ್ತಮ ಪ್ರದರ್ಶನ ನೀಡಿ ಕಿರಿಯರ ತಂಡದಲ್ಲಿ ಸ್ಥಾನ ಗಿಟ್ಟಿಸಿದ್ದ ಸಚಿನ್‌ಗೆ ಸಮಾಧಾನ, ತೃಪ್ತಿ ಎಂಬುದು ಇರಲೇ ಇಲ್ಲ. ತನ್ನ ಸೋದರನೊಂದಿಗೆ ಆತನ, ‘ರೇ’ ಸಂಭಾಷಣೆ ಮತ್ತೆ ಮುಂದುವರಿಯಿತು. ೧೯ ವರ್ಷದವರ ತಂಡದಲ್ಲಿ ಸ್ಥಾನ ಪಡೆದ ನಂತರ, “ಇದರಲ್ಲಿ ನಾನು ಉತ್ತಮವಾಗಿ ಆಡಿದರೆ” ಎಂಬ ಮತ್ತೊಂದು ಪ್ರಶ್ನೆ ಸಚಿನ್‌ನಲ್ಲಿ ಸಿದ್ಧವಾಗೇಯಿತ್ತು.

‘ಇದರಲ್ಲಿ ನೀನು ಚೆನ್ನಾಗಿ ಆಡಿದೆ ಎಂದು ಆಯ್ಕೆದಾರರಿಗೆ ಅನಿಸಿದರೆ ಖಂಡಿತವಾಗಿಯೂ ಮುಂಬಯಿ ರಣಜಿ ತಂಡದಲ್ಲಿ ನಿನಗೆ ಸ್ಥಾನ ಕೊಡುವರು’ ಎಂದು ನಾನು(ಅಜಿತ್) ಉತ್ತರಿಸಬೇಕಾಯಿತು.

“ನಮ್ಮಿಬ್ಬರ ಮಧ್ಯೆ ಈ ರೀತಿ ಸಂಭಾಷಣೆ ಮೇಲಿಂದ ಮೇಲೆ ನಡೆಯುತ್ತಲೇ ಬಂತು. ಮುಖ್ಯವಾಗಿ ಪಂದ್ಯದಿಂದ ಪಂದ್ಯಕ್ಕೆ ಉತ್ತಮ ಪ್ರದರ್ಶನ ನೀಡುತ್ತಲೇ ನಡೆದ ಸಚಿನ್ ಕೇವಲ ೧೪ ವರ್ಷದವನಿದ್ದಾಗ ಪಶ್ಚಿಮ ವಲಯ ರಣಜಿ ಟ್ರೋಫಿ ಲೀಗ್ ಪಂದ್ಯಗಳಿಗೆ ‘ಮುಂಬಯಿ ತಂಡಕ್ಕೆ ಆಯ್ಕೆಯಾದ ಅತ್ಯಂತ ಕಿರಿಯ ಆಟಗಾರ’ ಎಂಬ ಹೆಗ್ಗಳಿಕೆ ಪಡೆದ.

“ಆನಂತರ ಕಾಂಗಾ ಲೀಗ್‌ನಲ್ಲಿ ಇನ್ನಷ್ಟು ಶ್ರೇಷ್ಠ ಆಟ ಪ್ರದರ್ಶಿಸಿ ಸಸಾನಿಯನ್ ಕ್ರಿಕೆಟ್ ಕ್ಲಬ್‌ಗೆ ಆಡುವ ಮೂಲಕ ‘ಬಿ’ ದರ್ಜೆ ಆಟಗಾರನಾಗಿ ಹೊರಹೊಮ್ಮಿದ. ನೋಡಲು ಎಳೆಯ ಹುಡುಗನಂತೆಯೆ ಕಾಣುತ್ತಿದ್ದ ಸಚಿನ್ ಭಾರವಾದ ಬ್ಯಾಟ್ ಎತ್ತಿಕೊಂಡು ಮೈದಾನಕ್ಕಿಳಿಯುತ್ತಿದ್ದಾಗ ಹಾಸ್ಯ ಮಾಡಿದ್ದ ಎಷ್ಟೋ ಮಂದಿ ನಂತರ ಆವನ ಭರ್ಜರಿ ಆಟ ನೋಡಿ ಬೆರುಗುಗೊಂಡಿದ್ದರು.

“ಹದಿನೇಳು ವರ್ಷದೊಳಗಿನವರ ‘ಸ್ಪೋರ್ಟ್ಸ್ ಸ್ಟಾರ್ ಟ್ರೋಫಿ’ ಪಂದ್ಯಾವಳಿಯ ಸಂದರ್ಭ. ದತ್ತು ಫಡಕರ್ ತಂಡದ ನಾಯಕತ್ವ ವಹಿಸಿಕೊಂಡಿದ್ದ ಸಚಿನ್ ಮೊದಲೆರಡು ಸುತ್ತಿನ ಪಂದ್ಯದಲ್ಲಿ ‘ಪಂದ್ಯ ಪುರುಷ’ ಪ್ರಶಸ್ತಿ ಗಿಟ್ಟಿಸಿ ಎದುರಾಳಿ ತಂಡಗಳಿಗೆ ಎಚ್ಚರಿಕೆ ನೀಡಿದ್ದ. ಇಷ್ಟಾದರೂ ಎಚ್ಚೆತ್ತುಕೊಳ್ಳದ ಉಳಿದ ತಂಡಗಳ ಬೌಲರ್‌ಗಳನ್ನು ದಂಡಿಸಿ ೧೫೮, ೬೨ ಹಾಗೂ ೨೫ ಓಟಗಳನ್ನು ಬಾರಿಸಿದ್ದ ಸಚಿನ್ ‘ಸರಣಿ ಪುರುಷ’ ಪ್ರಶಸ್ತಿ ಬಾಚಿಕೊಂಡಿದಲ್ಲದೆ ಟ್ರೋಫಿಯು ತಮ್ಮ ತಂಡದ ಮಡಿಲಿಗೇ ಬರುವಂತೆ ಮಾಡಿದ.

“ಈ ಸಾಧನೆ ೧೭ ವರ್ಷದೊಳಗಿನವರ ‘ವಿಜಯ ಹಜಾರೆ ಟೂರ್ನಿ’ಗಾಗಿ ಮುಂಬಯಿ ತಂಡದ ನಾಯಕ ಪಟ್ಟ ಕೊಡಿಸಿತು.

“ನೆಟ್ ಅಭ್ಯಾಸದಲ್ಲೂ ಗಂಭೀರವಾಗಿಯೇ ಇರುತ್ತಿದ್ದ ಸಚಿನ್ ಪ್ರತಿಯೊಂದು ಚೆಂಡನ್ನೂ ಸರಿಯಾಗಿ ಅಭ್ಯಸಿಸಿ, ಅದನ್ನು ಚೆನ್ನಾಗಿ ಶಿಕ್ಷಿಸುವಲ್ಲಿ ಎತ್ತಿದ ಕೈ. ನೆಟ್‌ನಲ್ಲಿ ಇವನ ಆಟದ ವೈಖರಿಯನ್ನು ನೋಡಿಕೊಂಡಿರುತ್ತಿದ್ದ ಎದುರಾಳಿ ತಂಡ

ಮರುದಿನ ಪಂದ್ಯದಲ್ಲಿ ತನ್ನ ಕ್ಷೇತ್ರ ರಕ್ಷಕರನ್ನು ಲಾಂಗ್ ಆನ್, ಲಾಂಗ್ ಆಫ್‌ನಲ್ಲಿ ನಿಲ್ಲಿಸುತ್ತಿತ್ತು. ಇಷ್ಟಾದರೂ ಸಚಿನ್‌ನ ಆರ್ಭಟ ನಿಲ್ಲಲೇ ಇಲ್ಲ.

"ನವಂಬರ್‌ನಲ್ಲಿ ವಿಜಯ ಹಜಾರೆ ಟೂರ್ನಿಯ ಬರೋಡಾ ವಿರುದ್ಧ ನಡೆದ ಪಂದ್ಯದ ನೆನಪು. ಸಚಿನ್ ಈ ಪಂದ್ಯದಲ್ಲಿ ೮೯ ಹಾಗೂ ಅಜೇಯ ೫೦ ರನ್ ಗಿಟ್ಟಿಸಿದ. ಈ ಆಟವನ್ನು ವೀಕ್ಷಿಸಿದ ಮುಂಬಯಿ ರಣಜಿ ಆಯ್ಕೆ ಸಮಿತಿಯ ಸದಸ್ಯರಾದ ಅಜಿತ್ ವಾಡೇಕರ್, ಸುಧೀರನಾಯಕ, ಬಾಪು ನಾಡಕರ್ಣಿ ಮತ್ತು ಸಂದೀಪ್ ಪಾಟೀಲ ೧೯೮೭ರ ನವಂಬರ್ ೧೪ರಂದು ಮುಂಬಯಿ ರಣಜಿ ತಂಡದ ೩೬ ಸಂಭವನೀಯ ಪಟ್ಟಿ ಪ್ರಕಟಿಸಿ ಸಚಿನ್‌ಗೂ ಒಂದು ಸ್ಥಾನ ನೀಡಿದ್ದರು.

"ಸಂಭವನೀಯ ಪಟ್ಟಿಯಲ್ಲಿ ತನ್ನ ಹೆಸರು ಇದೆ ಎಂದು ತಿಳಿದ ಕೂಡಲೇ ಸಚಿನ್ ಮನೆಯಲ್ಲಿ ಕೇಕೆ ಹಾಕಿ ಕುಣದಾಡಿಬಿಟ್ಟ. ಅವನ ಉತ್ಸಾಹ ನೋಡಿ ನಮಗೆಲ್ಲರಿಗೂ ತಡೆಯಲಾರದಷ್ಟು ಹರ್ಷವಾಗಿತ್ತು.

"ಇದಕ್ಕೂ ಹಿಂದಿನ ಋತುವಿನಲ್ಲಿ ಸಚಿನ್ ಎರಡು ದ್ವಿಶತಕ ಸೇರಿದಂತೆ ಒಂಭತ್ತು ಶತಕಗಳನ್ನು ಬಾರಿಸಿ ಮುಂಬಯಿ ರಣಜಿ ಬಾಗಿಲನ್ನು ತಟ್ಟಿದ್ದ.

"ಡಿಸೆಂಬರ್ ೧೯, ೧೯೮೭. ಮುಂಬಯಿ ರಣಜಿ ತಂಡದಲ್ಲಿ ಸ್ಥಾನ ಪಡೆದಿದ್ದ ಸಚಿನ್ ಬರೋಡಾ ವಿರುದ್ಧ ಆಡುವಾಗ ಕೇವಲ ೧೪ ವರ್ಷದವನಿದ್ದ. ಆದರೆ ಇದರಲ್ಲಿ ಆತ ಬದಲಿ ಕ್ಷೇತ್ರರಕ್ಷಕನಾಗಿ ಮಾತ್ರ ಮೈದಾನಕ್ಕೆ ಇಳಿಯಬೇಕಾಯಿತು. ಮುಂದೆ ನಾಕೌಟ್ ಹಂತದ ವರೆಗೆ ಸಚಿನ್‌ಗೆ ಆಡಲು ಅವಕಾಶವೇ ಸಿಗಲಿಲ್ಲ.

"ರಣಜಿಯಲ್ಲಿ ಆಡಲು ಅವಕಾಶ ದೊರೆಯಲಿಲ್ಲ ಎಂಬ ಚಿಂತೆಯಿಂದ ಸಚಿನ್ ಎಂದೂ ಕೊರಗುತ್ತಾ ಕೂಡಲಿಲ್ಲ. ಬದಲಾಗಿ ಗಿಲ್ಸ್ ಮತ್ತು ಹ್ಯಾರಿಸ್ ಶೀಲ್ಡ್ ಟೂರ್ನಿಯಲ್ಲಿ ಮತ್ತಷ್ಟು ಉತ್ತಮ ಪ್ರದರ್ಶನ ನೀಡಿ ತನ್ನ ಬ್ಯಾಟಿಂಗ್ ಗುಣಮಟ್ಟವನ್ನು ಉತ್ತಮಪಡಿಸಿಕೊಂಡ. ಈ ಟೂರ್ನಿಯಲ್ಲಿ ಸಚಿನ್ ಬ್ಯಾಟ್‌ನಿಂದ ೧೨೫, ಅಜೇಯ ೨೦೭, ಅಜೇಯ ೩೨೬, ಔಟಾಗದೆ ೧೭೨ ಹಾಗೂ ಅಜೇಯ ೩೪೬ ಓಟಗಳು ಹರಿದು ಬಂದವು.

"ಸತತ ಅರ್ಧ ಶತಕ ಇಲ್ಲವೆ ಶತಕಗಳ ನೆರವಿನಿಂದ ಪ್ರತಿಯೊಬ್ಬನ ಗಮನವನ್ನೂ ಸೆಳೆದ ಸಚಿನ್ ರಣಜಿಯಲ್ಲಿ ಸಹ ತನ್ನ ಯಶಸ್ವೀ ಪ್ರದರ್ಶನ ಮುಂದುವರಿಸಿ ತಂಡದ ಕಾಯಂ ಸದಸ್ಯನಾಗಿ ಉಳಿದುಕೊಂಡ.

"ವಿಶಿಷ್ಟ ಕಲಾತ್ಮಕ ಶೈಲಿಯ ಬ್ಯಾಟಿಂಗ್‌ನಿಂದ ಕ್ಷಿಪ್ರಗತಿಯಲ್ಲಿ ಬೆರುಗುಗೊಳಿಸುವ ಸಾಧನೆ ಗೈದ ನನ್ನ ತಮ್ಮ ಸಚಿನ್ ಅತಿ ಕಿರಿಯ ವಯಸ್ಸಿನಲ್ಲಿ ರಾಷ್ಟ್ರೀಯ ತಂಡ ಸೇರಿದ ಹೆಗ್ಗಳಿಕೆ ಹೊಂದಿದ. ಇದೇ ಸಾಧನೆ ಅಲ್ಪಾವಧಿಯಲ್ಲಿಯೇ ಆತನನ್ನು ತಂಡದ ಉಪನಾಯಕನ ಪಟ್ಟಕ್ಕೇರಿಸಿತಲ್ಲದೆ ಅಗಾಧ ಸಂಪತ್ತನ್ನೂ ನೀಡಿತು...." ★



೧೯೭೨ರಲ್ಲಿ ಪಾಕಿಸ್ತಾನದ ವಿರುದ್ಧ ಆಸ್ಟ್ರೇಲಿಯ ಪರ ಟೆಸ್ಟ್‌ಗೆ ಪದಾರ್ಪಣೆ ಮಾಡಿದ್ದ ಜೆಫ್ ಥಾಮ್ಸನ್ ಅತ್ಯಂತ ನಿರಾಶಾದಾಯಕ ಪ್ರದರ್ಶನ ನೀಡಿ ಎಲ್ಲರ ಬೇಸರಕ್ಕೆ ಕಾರಣನಾಗಿದ್ದ. ಆದರೂ ಇದನ್ನು ಅಷ್ಟಾಗಿ ತಲೆಗೆ ಹಚ್ಚಿಕೊಳ್ಳದ ಆಸ್ಟ್ರೇಲಿಯಾ ಮೈಕ್ ಡೆನಿಸ್ ನೇತೃತ್ವದ ಇಂಗ್ಲೆಂಡ್ ವಿರುದ್ಧದ ಸರಣಿಗೆ ಥಾಮ್ಸನ್‌ಗೆ ಮತ್ತೆ ಆಡಲು ಅವಕಾಶ ನೀಡಿತು.

ಇದನ್ನೇ ತವಕದಿಂದ ಕಾಯುತ್ತ ಕುಳಿತಿದ್ದ ಥಾಮ್ಸನ್ ಸರಣಿಯಲ್ಲಿ ಅತ್ಯಮೋಘ ಪ್ರದರ್ಶನ ನೀಡಿದರೆ, ಇವನ ಮಾರಕ ಬೌಲಿಂಗ್ ಇಂಗ್ಲೆಂಡ್ ಬ್ಯಾಟ್ಸ್‌ಮನ್‌ಗಳ ಮನದಲ್ಲಿ ಚಿರಸ್ಥಾಯಿಯಾಗಿ ಉಳಿಯಿತು.

ಪಾಕಿಸ್ತಾನದ ವಿರುದ್ಧ ಒಂದೂ ವಿಕೆಟ್ಟನ್ನು ಪಡೆಯದ ಥಾಮ್ಸನ್ ಈ ಸರಣಿಯಲ್ಲಿ ೩೩ ವಿಕೆಟ್‌ಗಳನ್ನು ಹೆಕ್ಕಿ ಬೌಲಿಂಗ್‌ನಲ್ಲಿ ಅಗ್ರಸ್ಥಾನ ಪಡೆದುಕೊಂಡ.

ಕ್ರಿಕೆಟ್ ಸ್ಪುಟ

● ಆದಿಶೇಶವ

ಅಂದಿನ ಆಟ !
ಇಂದಿನ ನೋಟ !

## ಮೈದಾನದಲ್ಲಿ

ಗಬ್ಬಾ ಕ್ರೀಡಾಂಗಣದಲ್ಲಿ ಮೊದಲು ಬ್ಯಾಟಿಂಗಿಗೆ ಇಳಿದ ಆಸ್ಟ್ರೇಲಿಯ ಕೇವಲ ೧೦ ರನ್ ಸೇರಿಸುವಷ್ಟರಲ್ಲಿ ಆರಂಭಿಕ ಬ್ಯಾಟ್ಸ್‌ಮನ್‌ಗಳಿಬ್ಬರನ್ನೂ ಕಳೆದುಕೊಂಡು ಒದ್ದಾಡುತ್ತಿದ್ದಾಗ ನಾಯಕ ಇಯಾನ್ ಚಾಪೆಲ್ ಮತ್ತು ಗ್ರೇಗ್ ಚಾಪೆಲ್ ಚೇತರಿಕೆಯ ಆಟ ಪ್ರದರ್ಶಿಸಿ ತಂಡದ ಮಾನವನ್ನು ಕಾಪಾಡಿದರು.

ಮೂರನೆ ವಿಕೆಟ್ ಪಾಲುಗಾರಿಕೆಯಲ್ಲಿ ಸರಿಯಾಗಿ ೧೦೦ ರನ್ ತಂದ ಇಯಾನ್ ಚಾಪೆಲ್ ೯೦ ಹಾಗೂ ಗ್ರೇಗ್ ಚಾಪೆಲ್ ೫೮ ರನ್ ಹೊಡೆದರೆ ನಂತರ ಬಂದ ಎಡ್ವರ್ಡ್ಸ್ ೩೨ ರನ್ ಗಳಿಸಿ ಆಸ್ಟ್ರೇಲಿಯದ ಮೊತ್ತವನ್ನು ೩೦೯ ರನ್‌ಗೆ ಮುಟ್ಟಿಸಿದರು. ಉಳಿದ ಘಟಾನುಘಟಿಗಳು ಬಾಬ್ ವಿಲ್ಲಿಸ್(೪-೫೬) ಹೆಂಡ್ರಿಕ್(೨-೬೪) ಹಾಗೂ ಅಂಡರ್‌ವುಡ್(೨-೫೪) ಅವರ ದಾಳಿಗೆ ಉತ್ತರಿಸಲಾಗದೆ ಸರತಿಯಂತೆ ಪೆವಿಲಿಯನ್‌ಗೆ ಪರೇಡ್ ನಡೆಸಿದರು.

ಆಸ್ಟ್ರೇಲಿಯಾವನ್ನು ಬೇಗನೇ ಔಟ್ ಮಾಡಿದ ಸಮಾಧಾನ ಇಂಗ್ಲೆಂಡ್ ಶಿಬಿರದಲ್ಲಿ ಬಹಳ ಹೊತ್ತು ಉಳಿಯಲಿಲ್ಲ. ಆಯ್ಕೆದಾರರ ಕೃಪೆಯಿಂದ ಮತ್ತೆ ತಂಡದಲ್ಲಿ ಸ್ಥಾನಗಿಟ್ಟಿಸಿದ್ದ ಹೊಸ ಹುಡುಗ ಜೆಫ್ ಥಾಮ್ಸನ್ ಮೊದಲ ವಿಕೆಟ್ಟನ್ನು ಕೇವಲ ೯ ರನ್‌ಗಳಾಗುವಷ್ಟರಲ್ಲಿ ಎಗುರಿಸಿ ತನ್ನ ಬೌಲಿಂಗಿನ ರುಚಿ ತೋರಿಸಿದ. ಮುಂದೆ ಸ್ಕೋರು ಬರೀ ೫೭ ರನ್ ಆಗಿದ್ದಾಗ ಮತ್ತೆ ಮೂವರು ಪೆವಿಲಿಯನ್ ಸೇರಿದರು.

ಥಾಮ್ಸನ್‌ನೊಂದಿಗೆ ವಾಕರ್ ಮತ್ತು ಡೆನಿಸ್ ಲಿಲ್ಲಿ ಸಹ ಎದುರಾಳಿಯ ಮೇಲೆ ಅಟ್ಟಹಾಸ ಮೆರೆಯುತ್ತಿದ್ದಾಗ ಎ.ಡಬ್ಲ್ಯೂ. ಗ್ರೇಗ್(೧೧೦)

# ಮೂವತ್ತಮೂರು ಹುದ್ದರಿ ಕೆಡವಿದ ವೀರ...

ತಂಡದ ಕುಸಿತಕ್ಕೆ ತಡೆಯೊಡ್ಡಿದ್ದಲ್ಲದೆ ಎಡ್ರಿಚ್(೪೮)ನೊಂದಿಗೆ ಐದನೆ ವಿಕೆಟ್ ಪಾಲು ಗಾರಿಕೆಯಲ್ಲಿ ಇಂಗ್ಲೆಂಡ್ ಪಾಲಿಗೆ ಅಮೂಲ್ಯ ಎನ್ನಬಹುದಾದ ೭೩ ರನ್ ಸೇರಿಸಿದ. ಮುಂದೆ ಡೆರಿಕ್ ಅಂಡರ್‌ವುಡ್ ಸ್ವಲ್ಪ ಪ್ರತಿರೋಧ ತೋರಿ ೨೫ ರನ್ ಗಳಿಸಿದ. ಒಂದು ಹಂತದಲ್ಲಿ ೨೦೦ ತಲುಪುವುದೂ ಅಸಾಧ್ಯ ಎಂಬ ಲೆಕ್ಕದಲ್ಲಿದ್ದ ಇಂಗ್ಲೆಂಡ್ ಅಂತೂ ಇಂತೂ ತನ್ನ ಇನಿಂಗ್ಸ್‌ನ್ನು ೨೬೫ಕ್ಕೆ ತಂದು ಮುಟ್ಟಿಸಿತು.

ಇಂಗ್ಲೆಂಡಿಗೆ ಮಾರಕವಾಗಿ ಕಂಡ ವಾಕರ್ ನಾಲ್ಕು ವಿಕೆಟ್ ಕಬಳಿಸಿದರೆ ಥಾಮ್ಸನ್ ಮೂರು, ಲಿಲ್ಲಿ ಎರಡು ವಿಕೆಟ್ ಬಲಿ ಹಾಕಿದರು.

ಪ್ರಥಮ ಇನಿಂಗ್ಸ್‌ನಲ್ಲಿ ಕೇವಲ ೪೪ ರನ್‌ಗಳ ಲೀಡ್ ಪಡೆದ ಆಸ್ಟ್ರೇಲಿಯಾ ಎರಡನೇ ಇನಿಂಗ್ಸ್‌ನಲ್ಲೂ ತನ್ನ ಬ್ಯಾಟಿಂಗ್ ಸುಧಾರಿಸಿಕೊಳ್ಳಲಿಲ್ಲ. ಮೊದಲ ಸುದಿಯಲ್ಲಿ ಕೇವಲ ನಾಲ್ಕು ರನ್ ಗಳಿಸಿ ಹೆಂಡ್ರಿಕ್‌ಗೆ ವಿಕೆಟ್ ಒಪ್ಪಿಸಿದ್ದ ಎಡ್ವರ್ಡ್ ಈ ಬಾರಿಯೂ ವಿಫಲಗೊಂಡು ವಿಲ್ಲಿಸ್‌ಗೆ ಆಹುತಿಯಾಗಿ ಮೊದಲ ಬಲಿಪಶುವಾದ. ಆಗ ಮೈದಾನಕ್ಕಿಳಿದ ಇಯಾನ್ ಚಾಪೆಲ್(೧೧) ಅಂಡರ್‌ವುಡ್‌ರ ಮೋಡಿಗೆ ಬಲಿಯಾದಾಗ ಆಸ್ಟ್ರೇಲಿಯಾ ಸ್ಕೋರು ೩೯. ಮುಂದೆ ೨೯ ರನ್ ಬರುವಷ್ಟರಲ್ಲಿ ಆರಂಭಿಕ ಬ್ಯಾಟ್ಸ್‌ಮನ್ ರೆಡ್ ಪಾಲ್(೨೫) ವಿಲ್ಲಿಸ್‌ಗೆ ವಿಕೆಟ್ ಒಪ್ಪಿಸಿದ.

ಆಸ್ಟ್ರೇಲಿಯಾದ ಮೂರು ಪ್ರಮುಖ ವಿಕೆಟ್‌ಗಳನ್ನು ತ್ವರಿತವಾಗಿ ಕಬಳಿಸಿ ಮೇಲುಗೈ ಪಡೆದಿದ್ದ ಇಂಗ್ಲೆಂಡಿಗೆ ಗ್ರೇಗ್ ಚಾಪೆಲ್(೭೧) ಎಡ್ವರ್ಡ್ಸ್(೫೩) ತಲೆ ನೋವಾದರು. ನಾಲ್ಕನೇ ವಿಕೆಟ್ ಪಾಲುಗಾರಿಕೆಯಲ್ಲಿ ಇವರಿಬ್ಬರು ೧೧೪ ರನ್ ಸೇರಿಸಿ ನಿರ್ಗಮಿಸಿದರು. ಅನಂತರ ವಾಲ್ಟರ್‌ನನ್ನು (ಔಟಾಗದೆ ೬೨) ಕೂಡಿಕೊಂಡ ರಾಡ್ನಿ ಮಾರ್ಷ್(ಔಟಾಗದೆ ೪೬)ಆರನೇ ವಿಕೆಟ್ ಜೊತೆಯಾಟದಲ್ಲಿ ೯೮ ರನ್ ಕೂಡಿ ಹಾಕಿ ತಂಡದ ಮೊತ್ತವನ್ನು ೨೮೮ ರನ್‌ಗೆ ತಂದಿದ್ದಾಗ ನಾಯಕ ಚಾಪೆಲ್ ಸುದಿ ಡಿಕ್ಲೇರ್ ಮಾಡಿಕೊಂಡ.

ನಿಚ್ಚಳ ಜಯ ಸಾಧಿಸಲು ೩೩೩ ರನ್‌ಗಳ ಕಠಿಣ ಸವಾಲು ಹೊಂದಿದ್ದ ಇಂಗ್ಲೆಂಡ್ ನಾಲ್ಕನೇ ದಿನದ ಆಟ ಮುಗಿದಾಗ ವಿಕೆಟ್ ಕಳೆದುಕೊಳ್ಳದೆ ೧೦ ರನ್ ಗಳಿಸಿತ್ತು.

ಡಿಸೆಂಬರ್ ೪. ಪಂದ್ಯದ ಐದನೆ ಹಾಗೂ ಅಂತಿಮ ದಿನ. ಇಂಗ್ಲೆಂಡ್ ಇಡೀ ದಿನ ಆಡಿ ಜಯಗಳಿಸಲು ೩೨೩ ರನ್ ಗಳಿಸಬೇಕಿತ್ತು.

ನಾಲ್ಕನೇ ದಿನವನ್ನು ನಿಶ್ಚಿಂತೆಯಿಂದ ಮುಗಿಸಿದ್ದ ಇಂಗ್ಲೆಂಡಿಗೆ ಮರುದಿನ ಬೆಳಿಗ್ಗೆಯೇ ಲಿಲ್ಲಿ,

**ಆಸ್ಟ್ರೇಲಿಯಾ-ಇಂಗ್ಲೆಂಡ್ ಪ್ರಥಮ ಟೆಸ್ಟ್**

**ಸ್ಥಳ: ಗಬ್ಬಾಬ್ರಿಸ್ಬೇನ್**

**ದಿನಾಂಕ: ೧೯೭೪-೭೫ ನವೆಂಬರ್ ೨೯, ೩೦, ಡಿಸೆಂಬರ್: ೧, ೩, ೪.**




ಥಾಮ್ಸನ್ ಭೂತವಾಗಿ ಕಂಡರು. ತಂಡದ ಮೊತ್ತ ೧೮ ಆಗಿದ್ದಾಗ ಲಕ್ ಹರ್ಸ್ಟ್(೩)ನ್ನು ಕೆಡವಿ ಇಂಗ್ಲೆಂಡಿನ ಪತನಕ್ಕೆ ಲಿಲ್ಲಿ ನಾಂದಿ ಹಾಡಿದ. ಒಂದು ವಿಕೆಟ್ ಬೀಳುವುದನ್ನೇ ಕಾಯುತ್ತಿದ್ದ ಥಾಮ್ಸನ್ ಎಡ್ರಿಚ್(೬), ಗ್ರೇಕ್(೨), ಅಲನ್ ನಾಟ್(೧೯), ಅಮಿಸ್(೨೫), ಡೆನಿಸ್(೨೭) ಹಾಗೂ ಹೆಂಡ್ರಿಕ್(೦) ಅವರ ವಿಕೆಟ್‌ಗಳನ್ನು ತನ್ನ ಬುಟ್ಟಿಗೆ ಹಾಕಿಕೊಂಡ.

ಇಂಗ್ಲೆಂಡ್ ಥಾಮ್ಸನ್‌ನ ಆರ್ಭಟದಿಂದ ಹೊರ ಬರಲು ವಿಫಲವಾಗಿ ೧೬೬ ರನ್‌ಗಳಿಗೆ ತನ್ನೆಲ್ಲ ವಿಕೆಟ್‌ಗಳನ್ನು ಕಳೆದುಕೊಂಡಿತು. ಆಸ್ಟ್ರೇಲಿಯಾ ೧೬೭ ರನ್‌ಗಳ ಅಮೋಘ ಜಯ ದಾಖಲಿಸಿತು.

ಪ್ರಥಮ ಇನಿಂಗ್ಸ್‌ನಲ್ಲಿ ಮೂರು ವಿಕೆಟ್ ಪಡೆದಿದ್ದ ಥಾಮ್ಸನ್ ದ್ವಿತೀಯ ಇನಿಂಗ್ಸ್‌ನಲ್ಲಿ ೧೭.೫ ಓವರು ಬಾಲ್ ಮಾಡಿ ೪೬ ರನ್‌ಗಳಿಗೆ ಆರು ಪ್ರಮುಖ ವಿಕೆಟ್‌ಗಳನ್ನು ಎಗುರಿಸಿ ತಂಡದ ಗೆಲುವಿನಲ್ಲಿ ಪ್ರಮುಖ ಪಾತ್ರ ವಹಿಸಿದ. ಉಳಿದ ನಾಲ್ಕು ವಿಕೆಟ್‌ಗಳನ್ನು ಲಿಲ್ಲಿ ಹಾಗೂ ಜೆನ್ನರ್ ತಲಾ ಎರಡರಂತೆ ಹಂಚಿಕೊಂಡರು.

ಡೆನಿಸ್ ಅಮಿಸ್ "ಆಸ್ಟ್ರೇಲಿಯಾದ ಅದ್ಭುತ ವಿಜಯದ ರೂವಾರಿ. ಜೆಫ್ ಥಾಮ್ಸನ್‌ರ ಬೌಲಿಂಗ್ ವೇಗ ನನಗೆ ಇನ್ನೂ ಕಣ್ಣಿಗೆ ಕಟ್ಟಿದಂತಿದೆ. ನಾವು ಈ ರೀತಿಯ ಬೌಲಿಂಗನ್ನು ಡೆನಿಸ್ ಲಿಲ್ಲಿಯಿಂದ ನಿರೀಕ್ಷಿಸಿದ್ದೆವು. ಆದರೆ ಥಾಮ್ಸನ್ ನಮ್ಮ ಲೆಕ್ಕಾಚಾರವನ್ನೆಲ್ಲಾ ಹುಸಿ ಮಾಡಿದ" ಎಂದು ಅಭಿಪ್ರಾಯಪಟ್ಟರು.

"ಜೆಫ್ ಥಾಮ್ಸನ್ ಸಿಡ್ನಿ ಪಂದ್ಯದ ನಿಜವಾದ ಹೀರೋ ಆಗಿದ್ದರೂ ನನ್ನ ಅಭಿಪ್ರಾಯದಂತೆ ಲಿಲ್ಲಿ ಅತ್ಯುತ್ತಮ ಬೌಲಿಂಗ್ ಮಾಡಿದ. ಈತನ ಬೌಲಿಂಗ್‌ನಲ್ಲಿ ವೇಗದ ಜೊತೆಗೆ ಬ್ಯಾಟ್ಸ್‌ಮನ್‌ಗಳನ್ನು ಗೊಂದಲದಲ್ಲಿ ಕೆಡವುವ ಶಕ್ತಿಯಿತ್ತು. ಆದರೆ ಥಾಮ್ಸನ್‌ಗಿದ್ದಷ್ಟು ಅದೃಷ್ಟ ಲಿಲ್ಲಿಗಿರಲಿಲ್ಲ. ಆಸ್ಟ್ರೇಲಿಯಾ ತಂಡದಲ್ಲಿ ಇವರಿಬ್ಬರದು ಅದ್ಭುತ ಬೌಲಿಂಗ್ ಜೋಡಿ." ಎಂದು ಮೈಕ್ ಡೆನಿಸ್ ಕೊಂಡಾಡಿದ.

"ಪ್ರಥಮ ಇನಿಂಗ್ಸ್‌ನಲ್ಲಿ ಜೆಫ್ ಥಾಮ್ಸನ್ ಬೌಲಿಂಗನ್ನು ಎದುರಿಸುವಾಗ ಇಂಗ್ಲೆಂಡಿನ ಪ್ರತಿಯೊಬ್ಬ ಬ್ಯಾಟ್ಸ್‌ಮನ್‌ನ ಮುಖದಲ್ಲಿ ಆತಂಕ-ದುಗುಡ ಇರುವುದನ್ನು ನಾನು ಕಂಡೆ. ಇದರಿಂದ ಇಂಗ್ಲೆಂಡ್ ಬೃಹತ್ ಸ್ಕೋರು ಗಳಿಸುವುದಿಲ್ಲ ಎಂಬುದು ನನಗೆ ಖಾತ್ರಿಯಾಯಿತು. ನಮ್ಮ ಈ ಅರ್ಹ ಗೆಲುವಿಗೆ ಥಾಮ್ಸನ್ ಜೊತೆಗೆ ಲಿಲ್ಲಿಯೂ ಕಾರಣ" ಎಂದು ಪ್ರಾಂಜಲವಾಗಿ ನುಡಿದ.

ಪ್ರಥಮ ಟೆಸ್ಟ್‌ನಲ್ಲಿ ಥಾಮ್ಸನ್ ಬಲದಿಂದ ಗೆದ್ದಿದ್ದ ಆಸ್ಟ್ರೇಲಿಯಾ ಮುಂದಿನ ಪಂದ್ಯಗಳಲ್ಲೂ ಅವರನ್ನೇ ನೆಚ್ಚಿಕೊಂಡು ಅದರಲ್ಲಿ ಯಶಸ್ವಿಯೂ ಆಯಿತು. ಮೂರನೇ ಪಂದ್ಯ ಡ್ರಾದಲ್ಲಿ ಮುಗಿದರೆ ಆಸ್ಟ್ರೇಲಿಯಾ ಎರಡು, ನಾಲ್ಕು ಮತ್ತು ಐದನೆ ಟೆಸ್ಟ್‌ನಲ್ಲಿ ಜಯ ದಾಖಲಿಸಿ ತನ್ನ ಪ್ರಾಬಲ್ಯ ಮೆರೆಯಿತು.

ಇಂಗ್ಲೆಂಡ್ ಆರನೇ ಟೆಸ್ಟ್ ಪಂದ್ಯವನ್ನು ತನ್ನಂತೆ ಮಾಡಿಕೊಂಡು ಸತತ ಸೋಲಿನಲ್ಲೂ ಸಮಾಧಾನಪಟ್ಟಿತು. ಪಂದ್ಯದ ಕೇವಲ ಆರು ಓವರುಗಳ ನಂತರ ಥಾಮ್ಸನ್ ಹಾಗೂ ಲಿಲ್ಲಿ ಗಾಯಗೊಂಡು ಆಡಲು ಅಸಮರ್ಥರಾಗಿದ್ದ ಇಂಗ್ಲೆಂಡಿಗೆ ಜಯಗಳಿಸಲು ಅನುಕೂಲವಾಯಿತು.

ಪಾಕಿಸ್ತಾನ ವಿರುದ್ಧ ನಿರಾಸೆಯ ಪ್ರದರ್ಶನ ನೀಡಿದ್ದ ಜೆಫ್ ಥಾಮ್ಸನ್ ಈ ಸರಣಿಯಲ್ಲಿ ಒಟ್ಟು ೩೩ ವಿಕೆಟ್‌ಗಳನ್ನು ಬಲಿ ಹಾಕಿದ. ಡೆನಿಸ್ ಲಿಲ್ಲಿಗೆ ೨೫ ವಿಕೆಟ್‌ಗಳು ದಕ್ಕಿದವು.

•

# "ಕಾಂಟಿಕಿಯ ಸಾಹಸ"

● ಬೇದ್ರೆ ಎನ್. ಮಂಜುನಾಥ್

ಶಾಂತ ಸಾಗರದ ಪೂರ್ವ ತೀರದ ಪ್ರದೇಶಗಳಲ್ಲಿ ದಿಕ್ಕಾಪಾಲಾಗಿ ಚದುರಿರುವ ದ್ವೀಪಗಳಲ್ಲಿ ಪಾಲಿನೇಷಿಯನ್ ಜನರು ನೆಲೆಸಿದ್ದಾರೆ. ಕ್ರಿಸ್ತಶಕ ೫೦೦ರ ಸುಮಾರಿಗೆ ಇವರು ದಕ್ಷಿಣ ಅಮೆರಿಕದಿಂದ ಸಾಗರ ಮಾರ್ಗವಾಗಿ ಇಲ್ಲಿಗೆ ವಲಸೆ ಬಂದರು. ಅಂದರೆ ೧೫೦೦ ವರ್ಷಗಳಿಗೂ ಹಿಂದೆ ಯಾವ ನೂತನ ವೈಜ್ಞಾನಿಕ ಸಲಕರಣೆಗಳೂ ಇಲ್ಲದೆಯೆ ಪಾಲಿನೇಷಿಯನ್ನರು ಕೇವಲ ತಮ್ಮ ಕೌಶಲ ಹಾಗೂ ಬುದ್ಧಿಶಕ್ತಿ ಬಲದಿಂದ ಸಾವಿರಾರು ಮೈಲುಗಳಷ್ಟು ಸಾಗರದಲ್ಲಿ ಹೇಗೆ ಪ್ರಯಾಣ ಮಾಡಿದರು? ಈ ದಿಶೆಯಲ್ಲಿ ಯೋಚಿಸಿದವರೂ ಇದ್ದಾರೆ. ಕ್ರಿಸ್ತಶಕ ೧೯೫೦ ರಲ್ಲಿ ನಾರ್ವೇಜಿಯನ್ ಸಾಹಸಿ ಥಾರ್ ಹೆಯರ್‌ಡಾಲ್ ಮತ್ತು ಅವನ ಐದುಜನ ಸಂಗಡಿಗರು ಪಾಲಿನೇಷಿಯ ಕಟ್ಟುತ್ತಿದ್ದ ರೀತಿಯ ತೆಪ್ಪವನ್ನೇ ಕಟ್ಟಿಕೊಂಡು ೧೯೫೦ರ ಏಪ್ರಿಲ್ ೨೮ ರಿಂದ ಆಗಸ್ಟ್ ೭ರ ವರೆಗೆ ಸತತ ನೂರಾ ಒಂದು ದಿನಗಳ ಕಾಲ ಸಾಗರಯಾನ ಮಾಡಿ ಆ ದ್ವೀಪಗಳನ್ನು ತಲುಪಿದರು. ಆ ಜನರ ಯಾನ ಅನುಭವವನ್ನು ತಿಳಿದುಕೊಂಡರು. ಇದು ಮೈನವಿರೇಳಿಸುವ 'ಕಾಂಟಕಿಯ ಸಾಹಸ'ವೆಂದು ಕರೆಯಲ್ಪಟ್ಟಿದೆ.

ಪಾಲಿನೇಷಿಯನ್ನರು ದಕ್ಷಿಣ ಅಮೆರಿಕಾದ ಇಂಕಾ ವಂಶಕ್ಕೆ ಸೇರಿದವರು. ಇಂಕಾ ರಾಜರು ಉನ್ನತವಾದ ಆಂಡೀಸ್ ಪರ್ವತಗಳ ಕಣಿವೆಗಳಲ್ಲಿ ಸಮುದ್ರ ಮಟ್ಟಕ್ಕಿಂತ ಹತ್ತರಿಂದ ಹದಿನಾಲ್ಕು ಸಾವಿರ ಅಡಿಗಳಷ್ಟು ಎತ್ತರವಾದ ಪ್ರದೇಶಗಳಲ್ಲಿ ನಾಲೆಗಳನ್ನು ನಿರ್ಮಿಸಿ, ತನ್ಮೂಲಕ ನೀರನ್ನು ಹರಿಸಿ ಕೃಷಿ ಮಾಡುತ್ತಿದ್ದರಂತೆ. ಮನುಷ್ಯಾಕೃತಿಗಳನ್ನು ಹೋಲುವ ಬೃಹತ್ ಶಿಲಾವಿಗ್ರಹಗಳನ್ನು ಕೆತ್ತುವುದರಲ್ಲೂ, ಪರ್ವತಶ್ರೇಣಿಗಳಲ್ಲಿ ಪಿರಮಿಡ್‌ಗಳನ್ನು ನಿರ್ಮಿಸುವುದರಲ್ಲೂ ಇಂಕಾ ಜನರು ಬಹಳ ನಿಪುಣರು. ಅಂದಿನ ಉನ್ನತ ಕೃಷಿ ಪ್ರದೇಶಗಳು, ಕಲ್ಲಿನಲ್ಲಿ ಕಡೆದ ಹೆಬ್ಬಾಗಿಲುಗಳು ಆಂಡೀಸ್ ಪ್ರರ್ವತಶ್ರೇಣಿಗಳಲ್ಲಿ ಇಂದಿಗೂ ಚಿತ್ತಾಕರ್ಷಕವಾಗಿ ವಿರಾಜಿಸುತ್ತಿವೆ. ಈ ಇಂಕಾ ಜನರ ಮತ್ತೊಂದು ಉತ್ಕೃಷ್ಟ ಕೃತಿಯೆಂದರೆ ಶಾಂತ ಸಾಗರವನ್ನು ದಾಟಲು ಸಮರ್ಥವಾದ ತೆಪ್ಪಗಳನ್ನು ಹಗ್ಗದ ಸಹಾಯದಿಂದ ಕಟ್ಟಿದುದು. ತೇಲುವ ಬಲವಾದ ಬಾಲ್ಸಾ ಮರಗಳಿಂದ ಕಟ್ಟಲ್ಪಟ್ಟ ಈ ತೆಪ್ಪಗಳಲ್ಲಿ ಕುಳಿತು ಶಾಂತ ಸಾಗರವನ್ನು ದಾಟುವ ಸಾಹಸವನ್ನು ಈ ಪಾಲಿನೇಷಿಯನ್ನರು ಆಗಾಗ ಮಾಡುತ್ತಲೆ ಬಂದಿದ್ದರು. ಈ ಪ್ರವೃತ್ತಿಯು ಮುಂದೆ

ಲಂಡನ್ನಿನ ಜಾರ್ಜ್ ಅಲೆನ್ ಅಂಡ್ ಅನ್‌ವಿನ್ ಲಿಮಿಟೆಡ್ ಸಂಸ್ಥೆ ಪ್ರಕಟಿಸಿದ ಥಾರ್ ಹೆಯರ್‌ಡಾಲ್ ಅವರ ಸಾಹಸಯಾತ್ರೆಯ ಇಂಗ್ಲಿಷ್ ಆವೃತ್ತಿ 'ದಿ ಕಾಂಟಿಕಿ ಎಕ್ಸ್‌ಪಿಡೇಷನ್'ನ ಕನ್ನಡ ರೂಪಾಂತರವೆ 'ಕಾಂಟಿಕಿಯ ಸಾಹಸ'. ೧೯೫೯ರ ಆಗಸ್ಟ್‌ನಲ್ಲಿ ಎಚ್.ಎಸ್. ಮಾಧವರಾವ್ ಇದನ್ನು ಸಿದ್ಧಪಡಿಸಿಕೊಟ್ಟರು. ದಕ್ಷಿಣ ಭಾರತದ ಭಾಷೆಗಳ ಪುಸ್ತಕ ಸಂಸ್ಥೆಯ 'ಭಾಷಾಂತರ ಮಾಲೆ'ಯಲ್ಲಿ ಇದು ಪ್ರಕಟವಾಯಿತು.

ಆರಂಭದಿಂದ ಅಂತ್ಯದವರೆಗೆ ಮಳೆ, ಗಾಳಿ, ಬಿರುಗಾಳಿ, ಅಲೆಗಳ ಹೊಡೆತ, ಸಮುದ್ರ ಜೀವಿಗಳೊಡನೆ ಸೆಣಸಾಟ, ಗೆಳೆತನ, ಆಹಾರಕ್ಕಾಗಿ ಮೀನುಗಳ ಬೇಟೆ, ಶಾಂತ ಜಲರಾಶಿಯ ಮಧ್ಯೆ ತೋರುವ ಪ್ರಾಣಿ ವೈವಿಧ್ಯ ಜಗತ್ತು ಇನ್ನೂ ಅರಿಯಬೇಕಾಗಿರುವ ಹಲವಾರು ಹೊಸ ಹೊಸ ಸಂಗತಿಗಳು, ಇತ್ಯಾದಿಗಳನ್ನು ೨೮೦ ಪುಟಗಳ ಈ ಪುಸ್ತಕದಲ್ಲಿ ದಾಖಲಿಸಲಾಗಿದೆ.

ಅವರು ದೇಶಭ್ರಷ್ಟರಾಗಿ ಓಡಿಹೋಗುವ ಸಂದರ್ಭದಲ್ಲಿ ಉಪಯೋಗಕ್ಕೆ ಬಂತು. ಪಾಲಿನೇಷಿಯನ್ನರು ಮೂಲತಃ ಅಮೇರಿಕನ್ ಇಂಡಿಯನ್ನರಾದ್ದರಿಂದ ಇಂಕಾ ದೊರೆಗಳು ಇವರನ್ನು ದೇಶದಿಂದ ಹೊಡೆದೋಡಿಸಿದರು. ಸುಮಾರು ಕ್ರಿಸ್ತಶಕ ೫೦೦ರ ಹೊತ್ತಿಗೆ ಪೆರು ದೇಶವನ್ನು ಬಿಟ್ಟು ಹಲವು ಪೂರ್ವತೀರದ ದ್ವೀಪಗಳ ಕಡೆಗೆ ಧಾವಿಸಿದ ಪಾಲಿನೇಷಿಯನ್ನರು ತಮ್ಮ ಸದೃಢ ತೆಪ್ಪಗಳಲ್ಲಿ ಕುಳಿತು ಸಾವಿರಾರು ಮೈಲುಗಳನ್ನು ಕ್ರಮಿಸಿದರು. ಈ ರೀತಿ ಹೊರಟ ತಂಡದ ನಾಯಕನ ಹೆಸರು "ಕಾಂಟಿಕಿ". ಈ ಪದಕ್ಕೆ "ಸೂರ್ಯ ಪುತ್ರ" ಎಂಬ ಅರ್ಥವುಂಟು. ಕಾಂಟಿಕಿಯ ನೇತೃತ್ವದಲ್ಲಿ ಹೊರಟ ಪಾಲಿನೇಷಿಯನ್ನರು ಸುಮಾರು ನಾಲ್ಕೂವರೆ ಸಾವಿರ ಮೈಲುಗಳ ಪ್ರಯಾಣ ಮಾಡಿ ಪಾಲಿನೇಷಿಯನ್ ದ್ವೀಪಗಳು ಎಂದು ಕರೆಯಲ್ಪಡುವ ದ್ವೀಪಗಳಲ್ಲಿ ನೆಲೆಸಿದರು. ಹಾಗೆ ಹೊರಟ ಸಾಹಸಿಗಳಿಗೆ ಪ್ರಯಾಣಕಾಲದಲ್ಲಿನ ವಾಯುಗುಣ, ಸಮುದ್ರದ ಸೆಳೆತ, ಪ್ರವಾಹಗಳ ಚಲನವಲನದ ಪರಿಚಯ, ಉಷ್ಣತೆಯ ಏರಿಳಿತ, ಖಗೋಳ ವಿಜ್ಞಾನದ ಮಾಹಿತಿಯಿತ್ತೆಂದು ಹೇಳಲಾಗದು. ಬಹುಶಃ ಅವರು ತಮ್ಮ ಅನುಭವದಿಂದ, ಸಾಹಸ ಪ್ರವೃತ್ತಿಯಿಂದ ಪ್ರಯತ್ನ ನಡೆಸಿ ಈ ಸಾಗರ ವಿಜಯ ಸಾಧಿಸಿರಬಹುದು.

ಥಾರ್ ಹೆಯರ್‌ದಾಲ್ ವಿಜ್ಞಾನಿ, ಸಂಶೋಧಕ ಪಾಲಿನೇಷಿಯನ್ನರ ವಲಸೆಗಳನ್ನು ಕುರಿತ ಸಿದ್ಧಾಂತಗಳನ್ನು ನೂತನವಾಗಿ, ವೈಜ್ಞಾನಿಕವಾಗಿ ರೂಪಿಸಿದವರು. ಪ್ರಾಚೀನ ಕಾಲದಲ್ಲಿ ಪಾಲಿನೇಷಿಯನ್ನರು ಕಟ್ಟುತ್ತಿದ್ದ ರೀತಿಯಲ್ಲೆ, ಮೊಳೆಗಳನ್ನು ಉಪಯೋಗಿಸದೆ ಬೆಂಗಿ ನಾರಿನಿಂದ ಹೊಸೆದ ಹುಗ್ಗಗಳಿಂದ ತೇಲುವ ಗುಣವುಳ್ಳ ಬಾಲ್ಸಾ ಮರದ ಒಂಭತ್ತು ದಿಮ್ಮಿಗಳನ್ನು ಸೇರಿಸಿ ತೆಪ್ಪವನ್ನು ಕಟ್ಟಿದರು. ಪುರಾತನ ರೀತಿಯ ಈ ತೆಪ್ಪಕ್ಕೆ "ಕಾಂಟಿಕಿ" ಎಂಬ ಹೆಸರನ್ನೇ ಇಟ್ಟರು.

ನಟ್ ಹಾವ್‌ಲ್ಯಾಂಡ್, ಎರಿಕ್ ಹೆಸೆಲ್‌ಬರ್ಗ, ಟಾರ್‌ಸ್ಟೀನ್‌ರಾಬಿ, ಹರ್ಮಾನ್ ವಾಟ್ಜಿಂಗ್ ಮತ್ತು ಬೆಂಗ್ಟ್ ಇವರೇ ಹೆಯರ್‌ದಾಲ್‌ನ ಈ ಸಾಹಸ ಯಾತ್ರೆಯ ಸಂಗಾತಿಗಳು. ದಕ್ಷಿಣ ಅಮೇರಿಕದ ಪೆರುವಿನಿಂದ ಹೊರಟು ಪಾಲಿನೇಷಿಯನ್ ದ್ವೀಪಗಳಲ್ಲಿನ 'ತಾಹಿತಿ'ಯನ್ನು ಸೇರುವವರೆಗಿನ ಸುಮಾರು ನಾಲ್ಕೂವರೆ ಸಾವಿರ ಮೈಲುಗಳ ಇವರ ಸಮುದ್ರಯಾನವನ್ನು ಬಹಳ ಜನ 'ಹುಚ್ಚು ಸಾಹಸ'ವೆಂದು ಜರೆದಿದ್ದರು. ಆದರೂ ಕೇವಲ ಹಾಯಿಪಟದ ಸಹಾಯದಿಂದ ಸಾಗರದಲ್ಲಿ ತೇಲುತ್ತಾ ಹೊರಟ 'ಕಾಂಟಿಕಿ' ಸರಿಯಾಗಿ ನೂರ ಒಂದನೆ ದಿನದಂದು ನಿಗದಿತ ಗುರಿಯನ್ನು ತಲುಪಿತು.

೧೯೪೫ರ ಏಪ್ರಿಲ್ ೨೮ ರಂದು ಪೆರು ದೇಶದ ಕರಾವಳಿಯ ಮುಖ್ಯ ಬಂದರು ಕ್ಯಾಲೊದಿಂದ ಅಪರಾಹ್ನ ಹೊರಟ ತೆಪ್ಪವನ್ನು 'ಗಾರ್ಡಿಯನ್ ರಯೋಸ್' ಎಂಬ ಜಹಜು ಸಮುದ್ರದಲ್ಲಿ ಸ್ವಲ್ಪ ದೂರದವರೆಗೆ ಎಳೆದೊಯ್ದು ಬಿಟ್ಟಿತ್ತು. ಕೆಲವು ಸಣ್ಣಪುಟ್ಟ ದೋಣಿಗಳು, ಕ್ರೀಡಾ ನೌಕೆಗಳು ಕೊಲ್ಲಿಯ ಒಳಭಾಗ ಬಿಡುವವರೆಗೂ ಕಾಂಟಿಕಿಗೆ ಜೊತೆ ನೀಡಿ ಶುಭ ಕೋರಿದ್ದವು. ತೆಪ್ಪದ ಮೇಲೆ ಇದ್ದ ಪುಟ್ಟ ಗುಡಿಸಲಿನಲ್ಲಿ ಪ್ರಯಾಣಕ್ಕೆ ಅವಶ್ಯಕವಾದ ನಕ್ಷೆಗಳು, ದೂರಸಂಪರ್ಕ ಸಾಧನ, ಸ್ಟವ್, ಪತ್ರಿಕೆಗಳು, ಬ್ಯಾಟರಿ ದೀಪ, ಎಣ್ಣೆ ಇತ್ಯಾದಿ ಎಲ್ಲಾ ಸಾಮಗ್ರಿಗಳು ತುಂಬಿದ್ದವು.

ಹಂದಿಮೀನುಗಳು, ಈಲ್‌ಗಳು, ಜಗತ್ತಿನ ಅತಿದೊಡ್ಡ ಮೀನು ವೇಲ್‌ಶಾರ್ಕ್ ಮೊದಲಾದವುಗಳ ಜೊತೆಗೆ ಸಮುದ್ರ ಮೊಸಳೆಗಳು, ತಿಮಿಂಗಲಗಳು, ಡಾಲ್ಫಿನ್‌ಗಳು, ತೆಪ್ಪದ ಹಿಂದೆ ಮುಂದೆ ಸುತ್ತುತ್ತಾ ಈ ಸಾಹಸಿಗರಿಗೆ ಸಹಚರರಂತಾಗಿದ್ದವು. ಸಾಹಸಯಾತ್ರೆಯ ನೂರೊಂದು ದಿನಗಳೂ ಹೆಚ್ಚು ಕಡಿಮೆ ಒಂದೇ ತರಹ ಎನ್ನಬಹುದು. ನಟ್ ಮತ್ತು ಟಾರ್‌ಸ್ಟೀನರು ಬ್ಯಾಟರಿಗಳೊಡನೆ ದೂರಸಂಪರ್ಕ ಸಾಧನವನ್ನು ವ್ಯವಸ್ಥಿತವಾಗಿಟ್ಟುಕೊಳ್ಳಲು ಶ್ರಮಿಸುತ್ತಿದ್ದರು. ದೊಡ್ಡದಾದ ಅಲೆಗಳು ಬ್ಯಾಟರಿಗಳನ್ನು ತೋಯಿಸುತ್ತಿದ್ದುದರಿಂದ ಅವುಗಳನ್ನು ಒಣಗಿಸಿ, ತಂತಿಗಳನ್ನು, ಕಬ್ಬಿಣದ ಕಡ್ಡಿಗಳನ್ನು ಉಂಗುರಗಳನ್ನು ಬೆಸುಗೆ ಹಾಕಬೇಕಾಗುತ್ತಿತ್ತು. ಪ್ರತಿರಾತ್ರಿಯೂ ಹವಾಮಾನ ವರದಿಯನ್ನು ಹತ್ತಿರದ ವಾಯುಮಾನ ನಿಯಂತ್ರಣ ಕೇಂದ್ರಕ್ಕೆ ಕಳಿಸಿಕೊಡುತ್ತಿದ್ದರು. ಎರಿಕ್ ರಟ್ಟುಗಳನ್ನು ಸೇರಿಸುತ್ತಲೋ, ಹಗ್ಗ ಹೊಸೆಯುತ್ತಲೋ, ಮರದಲ್ಲಿ ಕೆತ್ತುತ್ತಲೋ, ಚಿತ್ರ ವಿಚಿತ್ರವಾದ ಮೀನುಗಳ ಚಿತ್ರಗಳನ್ನು ಬರೆಯುತ್ತಲೋ ಕಾಲ

ಕಳೆಯುತ್ತಿದ್ದ. ಜೊತೆಗೆ ಪ್ರತಿ ಮಧ್ಯಾಹ್ನವೂ 'ಸೆಕ್ಸ್‌ಸ್ಟಂಟ್'ಯಂತ್ರವನ್ನು ತೆಗೆದುಕೊಂಡು ಹಿಂದಿನ ದಿನಕ್ಕಿಂತ ಈ ದಿವಸ ಎಷ್ಟು ಮುಂದೆ ಪ್ರಯಾಣ ಮಾಡಿದೇವೆಂಬುದನ್ನು ದಾಖಲಿಸುತ್ತಿದ್ದ. ಥಾರ್ ಹೆಯರ್‌ಡಾಲ್ ದಿನಚರಿಯ ಪುಸ್ತಕ, ಹವಾಮಾನ ಸ್ಥಿತಿ, ವರ್ತಮಾನಗಳನ್ನು ಬರೆದಿಡುತ್ತಿದ್ದ. ಛಾಯಾಗ್ರಹಣ, ಬೇರೆ ಬೇರೆ ಜಲಚರಗಳ ಅಧ್ಯಯನವೂ ಇವನದ್ದೇ. ಬೆಂಗ್ಟನದು ಪ್ರತಿದಿನದ ಆಹಾರ ಭತ್ಯೆಯ ಪಾರುಪತ್ಯ. ತೆಪ್ಪದ ಮೇಲ್ವಿಚಾರಣೆಯ ಜೊತೆಗೆ ಆತ ಒಂದಷ್ಟು ಪುರುಸೊತ್ತು ಮಾಡಿಕೊಂಡು ಸಮಾಜಶಾಸ್ತ್ರಕ್ಕೆ ಸಂಬಂಧಿಸಿದ ಪುಸ್ತಕಗಳನ್ನು ಓದುತ್ತಿದ್ದ. ಹೆರ್ಮಾನನು ಔದ್ಯೋಗಿಕ ನಾಯಕನಾಗಿಯೂ ಎಲ್ಲಾ ವಿಧವಾದ ವಾಯುಮಾನ ಮತ್ತು ಚಲನ ಶಾಸ್ತ್ರಗಳಿಗನುಸಾರವಾಗಿ ತೆಪ್ಪವನ್ನು ನಡೆಸಲು ಜವಾಬ್ದಾರನೂ ಆಗಿದ್ದಲ್ಲದೆ ಮುಳುಗು ಕನ್ನಡಕ ಧರಿಸಿ ತೆಪ್ಪದ ಕೆಳಭಾಗದಲ್ಲಿ ಯಾವುದಾದರೂ ಹಲಗೆ, ದಿಮ್ಮಿ ಸರಿದಿವೆಯೇ ಎಂಬುದನ್ನು ನೋಡಿ ದುರಸ್ತಿ ಮಾಡುತ್ತಿದ್ದ. ಹೀಗೆ ಪ್ರತಿಯೊಬ್ಬನೂ ತನಗೆ ಒಪ್ಪಿಸಲಾದ ಒಂದೊಂದು ಕೆಲಸದ ಜೊತೆಗೆ ಹುಟ್ಟು ಹಾಕುವ ಮತ್ತು ಕಾವಲಿನ ಕೆಲಸವನ್ನೂ ಸರದಿ ಪ್ರಕಾರ ಮಾಡಬೇಕಾಗುತ್ತಿತ್ತು.

ಪ್ರೈಮಸ್ ಸ್ಟವ್‌ನಲ್ಲಿ ಅಡಿಗೆ ಬೇಯಿಸಿಕೊಂಡು ಊಟ ಮಾಡುತ್ತಾ ಅತ್ಯಂತ ಕಠಿಣ ಕಾಲದಲ್ಲೂ ಹಾಸ್ಯ ಮನೋಭಾವವನ್ನು ತಾಳುತ್ತಿದ್ದ ಈ ಸಾಹಸಿಗಳು ನರಭಕ್ಷಕ ಶಾರ್ಕ್ ಮೀನುಗಳೊಡನೆ ಸ್ನೇಹ ಸಂಪಾದಿಸಲು ಪ್ರಯತ್ನಿಸಿದರು. ಮೊಸಳೆಗಳಿಗೂ ದೊಡ್ಡ ದೊಡ್ಡ ಮೀನುಗಳಿಗೂ ಬೆಳ್ಳೆಹಣ್ಣು ತಿನ್ನಿಸಿದರು, ಸತಾಯಿಸಿದರು. ಎಲ್ಲಕ್ಕೂ ಮಿಗಿಲಾಗಿ ಎಂತಹ ಕಠಿಣ ಪರಿಸ್ಥಿತಿಯಲ್ಲೂ ಒಗ್ಗಟ್ಟಾಗಿಯೇ ಇದ್ದರು.

ಸಾಹಸಯಾತ್ರೆಯ ಉದ್ದಕ್ಕೂ ಸಾವಿರಾರು ವಿವಿಧ ಜಾತಿಯ ಮೀನುಗಳು, ಜಲಚರಗಳನ್ನು ಗುರುತಿಸಿ ಪಟ್ಟಿಮಾಡಿರುವ ಹೆಯರ್‌ಡಾಲ್ ಹಾರುಮೀನುಗಳನ್ನು ಮತ್ತು ಹಂದಿ ಮೀನುಗಳನ್ನು ವಿಶೇಷವಾಗಿ ಉಲ್ಲೇಖಿಸುತ್ತಾನೆ. ಅವುಗಳು ಆಗೀಗ ಹಾರಿಬಂದು ಇವರ ತೆಪ್ಪದ ಮೇಲೆ ಬಿದ್ದು ಪಯಣಿಸುತ್ತಿದ್ದವರಿಗೆ ಆಹಾರವಾಗುತ್ತಿದ್ದವು. ಕೆಲವೊಮ್ಮೆ ತೆಪ್ಪವು ತೀವ್ರ ಸೆಳವಿಗೆ ಸಿಕ್ಕುವ ಸಂದರ್ಭದಲ್ಲಿ ಧೈರ್ಯದಿಂದ ಪಾರಾದ ಅವರ ಅನುಭವ ಮೈ ನವಿರೇಳಿಸುವಂಥದ್ದು.

ಪ್ರಯಾಣದ ಕೊನೆಯಲ್ಲಿ ತಾಹಿತಿಗೆ ಸಮೀಪವಾದ ಚಿಕ್ಕ ದ್ವೀಪವೊಂದಕ್ಕೆ ಕಾಂಟಿಕಿಯು ಡಿಕ್ಕಿ ಹೊಡೆದು ತೆಪ್ಪದ ಮೇಲಿನ ಎಲ್ಲ ವಸ್ತುಗಳೂ ಚಲ್ಲಾಪಿಲ್ಲಿಯಾದಾಗಲೂ ಒಬ್ಬೊಬ್ಬ ಸಾಹಸಿಯೂ ಒಂದೊಂದು ದಿಕ್ಕಿಗೆ ತೂರಲ್ಪಟ್ಟು ಪ್ರಾಣಾಪಾಯದಿಂದ ಪಾರಾಗಿ ಮತ್ತೆ ಒಟ್ಟಾಗುತ್ತಾರೆ, ಆನಂತರ ತಾಹಿತಿಯಲ್ಲಿ ಆ ದ್ವೀಪದ ಮುಖ್ಯಸ್ಥನ ಹಾಗೂ ಸ್ಥಳೀಯರ ಆತ್ಮೀಯತೆಯನ್ನು ಪಡೆಯುತ್ತಾರೆ. ಅಗಾಧ ಜಲಸಾಗರದ ನಡುವೆ 'ಬಿಂದುವಿಗಿಂತಲೂ ಕನಿಷ್ಠನಾದ ಮಾನವ ತನ್ನ ಕೌಶಲದಿಂದ ಸಾಗರದ ಮೇಲೆ ವಿಜಯ ಸಾಧಿಸುವುದು ಮತ್ತು ಎಂತಹ ಕಠಿಣ



ಪರಿಸ್ಥಿತಿಯಲ್ಲಿಯೂ ಒಗ್ಗಟ್ಟಾಗಿ ಹಿಡಿದ ಕಾರ್ಯವನ್ನು ಬಿಡದೆ ಜಯಪ್ರದನಾಗುವುದು 'ಕಾಂಟಿಕಿಯ ಸಾಹಸವು' ನಮಗೆ ಕಲಿಸಿಕೊಡುವ ಪಾಠ.

ಇತಿಹಾಸ, ವಿಜ್ಞಾನ, ಸಮಾಜಶಾಸ್ತ್ರ ಮಾನವಶಾಸ್ತ್ರ ಮೊದಲಾದ ವಿಷಯಗಳ ಹದವಾದ ಮಿಶ್ರಣವಾಗಿರುವ ಈ ಸಾಹಸ ಯಾತ್ರೆ ಪ್ರತಿಯೊಂದು ಜಲಚರದ ವಿವರ ಪರಿಚಯದೊಂದಿಗೆ ದಾರಿಯಲ್ಲಿ ಕಾಣಸಿಗುವ ಚಿಕ್ಕಪುಟ್ಟ ದ್ವೀಪಗಳ ವರ್ಣನೆ, ಆ ದ್ವೀಪಗಳಿಗೆ ಸಂಬಂಧಿಸಿದ ಐತಿಹಾಸಿಕ ಸಂಗತಿಗಳು ಹಾಗೂ ವೈಶಿಷ್ಟ್ಯಗಳನ್ನೂ ವ್ಯವಸಾಯ- ವಾಸ್ತುಶಿಲ್ಪಗಳನ್ನು ಕುರಿತ ವಿವರಣೆಗಳನ್ನೂ ನಮಗೆ ಒದಗಿಸುತ್ತದೆ.

ಸಮುದ್ರಯಾನದ ೯೭ ದಿನಗಳವರೆಗೂ ಈ ಸಾಹಸಿಗಳಿಗೆ ನೆಲದ ಮೇಲೆ ಕಾಲಿಡಲು ಅವಕಾಶವಾಗಲೇ ಇಲ್ಲ. ದೂರದಲ್ಲೆಲ್ಲೋ ಕಾಣುತ್ತಿದ್ದ ದ್ವೀಪಗಳನ್ನು ನಕ್ಷೆಗಳ ಸಹಾಯದಿಂದ ಗುರುತಿಸಿ ವಿವರಣೆಗಳನ್ನು ನೀಡುತ್ತಾರೆಯೇ ವಿನಾ ಅವುಗಳ ಮೇಲೆ ಇಳಿಯಲು ಪ್ರಯತ್ನಿಸುವುದಿಲ್ಲ. ೯೭ನೆಯ ದಿನ ಪಾಲಿನೇಷಿಯನ್ ದ್ವೀಪಗಳಲ್ಲೊಂದಾದ 'ಅಂಗಾಟೋ'ದ ಮೇಲೆ ಇಳಿಯಲು ಪ್ರಯತ್ನಿಸುತ್ತಾರೆ. ಸೂರ್ಯಾಸ್ತದ ಸಮಯದಲ್ಲಿ ನೀರಿನ ತೀವ್ರ ಸೆಳೆತದ ನಡುವೆ ಅಂಗಾಟೋದ ನಿವಾಸಿಗಳ ಸಹಾಯಪಡೆದು ದ್ವೀಪದೊಳಗೆ ಪ್ರವೇಶಿಸಲು ಪ್ರಯತ್ನಿಸುವರಾದರೂ ಹಾಗೆ ಮಾಡಲು ಸಾಧ್ಯವಾಗುವುದಿಲ್ಲ. ಮತ್ತೆ ಅವರು ನೆಲವನ್ನು ನೋಡುವುದು ೧೦೧ನೆಯ ದಿನವೇ.

ತೀರಾ ಬೇಸರವಾದಾಗ ತಮ್ಮ ಬಳಿಯಿದ್ದ ಪುಟ್ಟ ರಬ್ಬರ್ ದೋಣಿಯಲ್ಲಿ ಕುಳಿತು ತೆಪ್ಪದಿಂದ ತುಸು ದೂರದವರೆಗೆ ಅಡ್ಡಾಡಿ ಆನಂದಿಸುತ್ತಾರೆ. ಭೂಪಟದ ಸಹಾಯದಿಂದ ಹಲವಾರು ದ್ವೀಪಗಳನ್ನು ಅವು ತಮ್ಮಿಂದ ಎಷ್ಟು ದೂರ ಇವೆ ಎನ್ನುವುದನ್ನು ವಿವರಿಸುತ್ತಾರೆ. ಊಟದ ಸಮಯದಲ್ಲಿ ತೆಪ್ಪದ ಮೇಲೆ ಅವರು ನಡೆಸುವ ತಮಾಷೆ ಹಾಗೂ ಸ್ನಾನ ಮಾಡುವ ಪರಿ ಎಲ್ಲವೂ ರಂಜನೀಯವೆನಿಸುತ್ತವೆ.

ಬಾಹ್ಯಜಗತ್ತಿನ ಜೊತೆ ಸಂಪರ್ಕಕ್ಕೆ ಅವರಿಗೆ ಇದ್ದದ್ದು ದೂರಸಂಪರ್ಕ ಸಾಧನ ಮಾತ್ರ. ಅದರ ಸಹಾಯದಿಂದ ಆಗಾಗ್ಗೆ ದಿನನಿತ್ಯದ ವರ್ತಮಾನ ಹಾಗೂ ಹವಾಮಾನದ ವರದಿಗಳನ್ನು ಪಡೆಯುತ್ತಾರೆ. ತಾವು ಇರುವ ಸ್ಥಳ, ಅಲ್ಲಿನ ಹವಾಮಾನ ಕುರಿತು ೨೦೦೦ ಮೈಲುಗಳ ದೂರದಲ್ಲಿದ್ದವರಿಗೆ ತಂತಿರಹಿತ ಸಮಾಚಾರ ಕಳಿಸುತ್ತಾರೆ.

ಆಗಸ್ಟ್ ೭, ೧೯೪೦ ಈ ಸಾಹಸ ಯಾನದ ಕೊನೆಯ ದಿನ. ರಾರೋಯಿ ದ್ವೀಪದ ಸಮೀಪದ ಅನಾಮಧೇಯ ದ್ವೀಪವೊಂದರ ತೀರದಲ್ಲಿ ತೀವ್ರ ಸೆಳವಿಗೆ ಸಿಕ್ಕ ಕಾಂಟಿಕಿ ತೆಪ್ಪವು ಆ ದ್ವೀಪದ ಮೇಲೆ ಎಸೆಯಲ್ಪಡುತ್ತದೆ. ತೆಪ್ಪ ನುಚ್ಚುನೂರಾದರೂ ಸಾಹಸಿಗಳಿಗೆ ಹೆಚ್ಚಿನ ಅಪಾಯವೇನೂ ಆಗುವುದಿಲ್ಲ. ಅನಂತರ ತೆಪ್ಪದ ವಿವಿಧ ಭಾಗಗಳನ್ನು ತೀರದಲ್ಲಿ ಚದುರಿಬಿದ್ದ ಸಾಮಾನುಗಳನ್ನು ಒಟ್ಟುಗೂಡಿಸಿದ ನಂತರವೇ ಸಾಹಸಿಗಳು ವಿಶ್ರಾಂತಿ ಪಡೆಯುತ್ತಾರೆ. ಹತ್ತಿರದ ರಾರೋಯಿ ದ್ವೀಪದ ಕೆಲ ಯುವಕರು ಈ ಸಾಹಸಿಗಳನ್ನು ಗುರುತಿಸಿ ತಾವಾಗಿಯೆ ಬಂದು ಮಾತನಾಡಿಸುತ್ತಾರೆ. ಕಾಂಟಿಕಿ ತೆಪ್ಪವನ್ನು ಕಂಡು "ಪಾಯ್ ಪಾಯ್" ಎಂದು ಆಶ್ಚರ್ಯಪಡುತ್ತಾರೆ. ಈ ತೆರನಾದ ತೆಪ್ಪದ ಮೇಲೆಯೇ ತಮ್ಮ ಪೂರ್ವಜರು ೧೫೦೦ ವರ್ಷಗಳಿಗೂ ಮುಂಚೆ ಈ ಪಾಲಿನೇಷಿಯನ್ ದ್ವೀಪಗಳಿಗೆ ವಲಸೆ ಬಂದಿದ್ದರು ಎಂಬುದನ್ನು ಅವರು ಹಿರಿಯರಿಂದ ಕಥೆ ಕೇಳಿದ್ದರು. ಇದೀಗ ಇಂತಹದೇ ತೆಪ್ಪವನ್ನು ನೋಡಿ ಅವುಗಳಿಗೆ ಬಳಸಲಾಗಿದ್ದ ಬಾಲ್ಸಾ ಮರದ ದಿಮ್ಮಿಗಳನ್ನು ಪರೀಕ್ಷಿಸಿ ಕಥೆ ಸುಳ್ಳಲ್ಲ ಎಂಬುದನ್ನು ಖಚಿತಪಡಿಸಿಕೊಳ್ಳುತ್ತಾರೆ.

ಈ ಅಜ್ಞಾತ ದ್ವೀಪಕ್ಕೆ 'ಫೆನೊವ ಕಾಂಟಿಕಿ' ಅಥವಾ 'ಕಾಂಟಿಕಿ ದ್ವೀಪ' ಎಂದು ಹೆಸರಿಟ್ಟು ಅಲ್ಲಿಂದ ರಾರೋಯಿ ದ್ವೀಪಕ್ಕೆ ಬಂದು, ಅಲ್ಲಿನ ಪಾಲಿನೇಷಿಯನ್ನರ ಅತಿಥಿಗಳಾಗಿ ಈ ಆರೂಜನ ಕೆಲವು ದಿನಗಳನ್ನು ಕಳೆಯುತ್ತಾರೆ. ಆ ದ್ವೀಪದಲ್ಲಿ ಇದ್ದವರು ಬರಿ ೧೨೭ ಮಂದಿ ಮಾತ್ರ. ಅವರ ಮುಖಂಡನು ಥಾರ್ ಹೆಯರ್‌ಡಾಲ್‌ರ ಮಿತ್ರ. ಹಿಂದೊಮ್ಮೆ ಹೆಯರ್‌ಡಾಲ್ ಅಧ್ಯಯನಕ್ಕಾಗಿ ತಾಹಿತಿಗೆ ಬಂದಿದ್ದಾಗ ಅವರನ್ನು ಪರಿಚಯಿಸಿಕೊಂಡಿದ್ದ. ಹೆಯರ್‌ಡಾಲ್ ಸ್ನೇಹವನ್ನು ಚಿರಕಾಲ ಉಳಿಸಿಕೊಳ್ಳಲು ಆ

ಮುಖಂಡನು ಅವರನ್ನು ದತ್ತು ಪುತ್ರ ಎಂದು ಸ್ವೀಕರಿಸಿ "ಟೆರಾಯ್ ಮೆಟೀಟಾ" (ನೀಲಿ ಆಕಾಶ) ಎಂದು ನಾಮಕರಣ ಮಾಡಿದ್ದನು. ಇದೀಗ 'ಪಾಯ್ ಪಾಯ್' (ತೆಪ್ಪ)ದಲ್ಲಿ ಪಾಲಿನೇಷಿಯನ್ನರ ಪೂರ್ವಜರಂತೆಯೇ ಸಾಗರಯಾನ ಮಾಡಿಕೊಂಡು ಬಂದಿದ್ದರಿಂದ ಮುಖಂಡನಿಗೆ ತುಂಬಾ ಸಂತೋಷವಾಗಿತ್ತು. ಅವರೆಲ್ಲರಿಗೂ ಭರ್ಜರಿ ಔತಣ ಏರ್ಪಡಿಸಿ ಉಳಿದ ಐದು ಜನ ಸಾಹಸಿಗಳನ್ನು ಆ ದ್ವೀಪದ ದತ್ತುಪುತ್ರರೆಂದು ಸ್ವೀಕರಿಸಿ ಎಲ್ಲರಿಗೂ ಒಂದೊಂದು ಪಾಲಿನೇಷಿಯನ್ ಹೆಸರನ್ನಿಟ್ಟರು.

ಹೀಗೆ ೧೦೧ ದಿನಗಳ ಕಾಲ ನೀರಮೇಲೆ ತೇಲಿ ಬಿರುಗಾಳಿ, ಪ್ರವಾಹ, ಅಲೆಗಳ ಹೊಡೆತಗಳನ್ನು ಸಹಿಸಿ ಪ್ರಯಾಣ ಮಾಡಿದ ಬಾಲ್ಸಾ ಮರದ ದಿಮ್ಮಿಗಳ 'ಕಾಂಟಿಕಿ ತೆಪ್ಪ'ವನ್ನು 'ಕಾಂಟಿಕಿ ದ್ವೀಪ'ದ ತೀರದಿಂದ ತಾಹಿತಿಯವರೆಗೆ ಹಡಗಿನ ಮೂಲಕ ಎಳೆಸಿತಂದು ಪಾಲಿನೇಷಿಯನ್ನರ ಜಯಕಾರದ ನಡುವೆ ನಾರ್ವೇಜಿಯನ್ ಹಡಗಿಗೆ ಹತ್ತಿಸಲಾಯಿತು. ಥಾರ್ ಹೆಯರ್‌ಡಾಲ್ ಮತ್ತು ಅವರ ಐದು ಜನ ಸಂಗಡಿಗರು ಪಾಲಿನೇಷಿಯನ್ನರಿಂದ ಪುರಸ್ಕೃತರಾಗಿ ತಮ್ಮ ಮನೆಯತ್ತ ಪಯಣಿಸಲು ಹಡಗು ಹತ್ತಿದರು. ದ್ವೀಪದ ಮುಖಂಡ ಟೆರೀರೋ ಎಲ್ಲರಿಗೂ ಶುಭಾಶಯ ಕೋರಿ "ನಿಮಗೆ ಮತ್ತೊಮ್ಮೆ ತಾಹಿತಿಗೆ ಬರಬೇಕೆಂಬ ಮನಸ್ಸಿದ್ದರೆ ದೋಣಿಯು ಹೋಗುತ್ತಿರುವಾಗ ನೀವು ಮಡುವಿನೊಳಗೆ ಒಂದು ಹೂವಿನ ಹಾರವನ್ನು ಎಸೆಯಬೇಕು" ಎಂದರು.

ಹಡಗಿನ ಮೇಲೇರಿದ ಆರು ಸಾಹಸಿಗಳು ಒಂದೊಂದು ಹೂವಿನ ಹಾರವನ್ನು ನೀರಿಗೆ ಎಸೆದು ತೀರದಲ್ಲಿ ಶುಭ ಹಾರೈಸುತ್ತಾ ಕೈಬೀಸುತ್ತಿದ್ದ ಪಾಲಿನೇಷಿಯನ್ನರತ್ತ ಕೈಬೀಸುತ್ತಾ ತಾಯ್ನಾಡಿಗೆ ಮರಳಿ ಪ್ರಯಾಣ ಬೆಳೆಸಿದರು.

ಹೀಗೆ ಧೈರ್ಯ, ಸಾಹಸ, ಛಲ, ಒಗ್ಗಟ್ಟಿನಿಂದಾಗಿ ಅತ್ಯಂತ ಕಷ್ಟಸಾಧ್ಯವಾದ 'ಕಾಂಟಿಕಿಯ ಸಾಹಸ ಯಾತ್ರೆ'ಯು ಯಶಸ್ವಿಯಾಗಿ ಸಾಂಗವಾಗಿ ಈ ಶತಮಾನದ ಸ್ಮರಣೀಯ ಘಟನೆಗಳಲ್ಲಿ ಒಂದಾಯಿತು. ●




"ಬಾಯಾರಿಕೆ ಆಗಿದೆ. ಕುಡಿಯೋಕೆ ಒಂದ್ಯಾವ್ದಾದ್ರೂ ಬಾಟ್ಲೊಳಗಿಂದನ್ನು ಈ ಬಟ್ಟಗೆ ಸುರಿಯಪ್ಪ..."

ಇತಿಹಾಸ

# ಕಾಗದ ಸಂಸ್ಕೃತಿ

ಶಂಕರ ಅಜ್ಜಂಪುರ

ಇಂದು ಕಾಗದರಹಿತ ಕಚೇರಿಯ ಪ್ರಸ್ತಾಪ ನಿಧಾನವಾಗಿ ಕೇಳಿಬರುತ್ತಿದೆ. ತಂತ್ರಜ್ಞಾನ, ಆರ್ಥಿಕ ಮಟ್ಟಗಳು ಏರಿದಂತೆಲ್ಲ ಭಾರತದಲ್ಲಿಯೂ ಇದು ಸಾಕಾರವಾಗುವ ಸಾಧ್ಯತೆಗಳು ಹೆಚ್ಚಾಗಿವೆ. ಇಂಥ ಕಾಗದರಹಿತ ಕಚೇರಿಯ ಕಲ್ಪನೆಗಳಿಗೆ ಅಭಿವೃದ್ಧಿ ಹೊಂದುತ್ತಿರುವ ಕಂಪ್ಯೂಟರ್ ತಂತ್ರಜ್ಞಾನವೊಂದು ಕಾರಣವಾದರೆ, ಕಾಗದ ಉದ್ಯಮದಲ್ಲಿ ತಲೆದೋರಿರುವ ಪ್ರಾಕೃತಿಕ ಸಂಪನ್ಮೂಲಗಳ ಕೊರತೆ ಇನ್ನೊಂದು ಮುಖ್ಯ ಕಾರಣ.

ಭಾರತದಲ್ಲಿ ಕಾಗದದ ವಾರ್ಷಿಕ ಉತ್ಪಾದನೆ ೨೪ ಲಕ್ಷ ಟನ್‌ಗಳನ್ನು ಮೀರಿದ್ದು ಇದರಲ್ಲಿನ ಶೇ. ೬೧ರಷ್ಟು ಕಾಗದವನ್ನು ವೃಕ್ಷಮೂಲವಲ್ಲದ ವಸ್ತುಗಳಿಂದ ತಯಾರಿಸಲಾಗುತ್ತಿದೆ. ಪುನಃ ಇದರಲ್ಲಿನ ಶೇ. ೩೧ರಷ್ಟು ಕಾಗದವನ್ನು ರದ್ದಿಯ ಪುನರಾವರ್ತನೆಯಿಂದ ತಯಾರಿಸಲಾಗುತ್ತಿದೆ. ಈ ಅಂಕಿ ಅಂಶಗಳು ಭಾರತದಲ್ಲಿ ಅರಣ್ಯನಾಶದ ತೀವ್ರತೆಯನ್ನು ಹೇಳುವುದರ ಜೊತೆಗೆ ಬಳಸಿದ ಕಾಗದದ ಉಪಯುಕ್ತತೆಯನ್ನೂ ಎತ್ತಿತೋರುತ್ತವೆ.

"ಅತಿಯಾದ ಪರಿಚಯದಿಂದ ಉಪೇಕ್ಷೆ ಉಂಟಾಗುತ್ತದೆ, ಹೇಗೆಂದರೆ ಮಲಯಪರ್ವತದಲ್ಲಿನ ಕಾಡು ಹೆಂಗಸು ಚಂದನ ವೃಕ್ಷವನ್ನೇ ಉರುವಲಾಗಿ ಬಳಸುತ್ತಾಳೆ. ವಿಪುಲವಾಗಿ ದೊರೆಯುವ ಯಾವುದೇ ವಸ್ತು ದುರ್ಲಭವಾದಾಗಲೇ ಅದರ ಮೌಲ್ಯ ತಿಳಿದೀತು" ಎಂದು ಸಾರುವ ಸಂಸ್ಕೃತ ಸುಭಾಷಿತದ ಸಾಮತಿ ಕಾಗದ ಬಳಕೆಯ ಬಗ್ಗೆ ನಮ್ಮ ವರ್ತನೆಗೆ ಸರಿ ಹೊಂದುವಂತಿದೆ. ಗಾಂಧೀಜಿ ತಮಗೆ ಬರುತ್ತಿದ್ದ ಪತ್ರಗಳಲ್ಲಿ ಖಾಲಿ ಇರುವ ಸ್ಥಳದಲ್ಲಿ ಟಿಪ್ಪಣಿಗಳನ್ನು ಬರೆದುಕೊಂಡು ಅದರ ಸದುಪಯೋಗ ಮಾಡಿಕೊಳ್ಳುತ್ತಿದ್ದರು. ಕಾಲಿಗೊಂದು ಪುಸ್ತಕವೋ, ಕಾಗದವೋ ತಗುಲಿದರೆ ಕಣ್ಣಿಗೆ ಒತ್ತಿಕೊಳ್ಳುವಂಥ ಪೂಜ್ಯಭಾವ ನಮ್ಮಲ್ಲಿದ್ದರೂ ಕಾಗದದ ಬಳಕೆಯಲ್ಲಿ ಮಾತ್ರ ಅಲಕ್ಷ್ಯವೇ ಎದ್ದುಕಾಣುತ್ತಿದೆ. ಜಪಾನಿನಲ್ಲಿ ೧೭೫೭ರಲ್ಲಿ ಪ್ರಕಟವಾದ 'ಕಾಮಿಸುಕಿ ಚೊಹೋಕಿ'ಎಂಬ ಪುಸ್ತಕದಲ್ಲಿ ಚಿತ್ರವೊಂದಿದೆ. ಅದರಲ್ಲಿ ವ್ಯಕ್ತಿಯೊಬ್ಬನು ಕಣಿವೆಯ ಆಳಕ್ಕೆ ಇಳಿಯುತ್ತಿದ್ದಾನೆ. ಏಕೆ ಗೊತ್ತೆ? ಅಲ್ಲಿ ಬಿದ್ದಿರುವ ಹಾಳೆಯೊಂದನ್ನು ಎತ್ತಿಕೊಳ್ಳಲು!

ಕಾಗದ ಬಳಕೆಯ ಬಗೆಗಿನ ಕಾಳಜಿ ಜಪಾನಿನಲ್ಲಿ ಒಂದು ಸಂಸ್ಕೃತಿ ಎನ್ನುವಂತೆಯೇ ಬೆಳೆದು ಬರಲು ಉತ್ತಮ ಕಾಗದಕ್ಕೆ ಅಲ್ಲಿದ್ದ ದುಬಾರಿ ಬೆಲೆ ಹಾಗೂ ಕಾಗದದ ಅಭಾವಗಳೇ ಕಾರಣ. ಕಾಗದವನ್ನು ತಯಾರಿಸಲು ಬಳಸುತ್ತಿದ್ದ ಮೂಲ ವಸ್ತುಗಳೂ ದುಬಾರಿಯವೇ ಆದರೂ, ಗುಣಮಟ್ಟದಲ್ಲಿ, ಬಾಳಿಕೆಯಲ್ಲಿ ಅವಕ್ಕೆ ಸರಿಸಾಟಿಯಾದ ಕಾಗದಗಳು ಚೀನಾದಲ್ಲಿಯೂ ದೊರೆಯುತ್ತಿರಲಿಲ್ಲ. ಚೀನಾವನ್ನು ಹೊರತುಪಡಿಸಿದರೆ ಜಪಾನ್ ಜಗತ್ತಿನಲ್ಲಿಯೇ ಕಾಗದ ಉತ್ಪಾದಿಸುವ ರಾಷ್ಟ್ರಗಳಲ್ಲಿ ಎರಡನೆಯದು. ಜಪಾನ್ ಪೇಪರ್ ಅಸೋಸಿಯೇಷನ್ ಹೇಳಿಕೊಳ್ಳುವಂತೆ ತಾನು ಉತ್ಪಾದಿಸಿದ ಅರ್ಧಕ್ಕಿಂತ ಹೆಚ್ಚು ಕಾಗದವನ್ನು ಅಲ್ಲಿ ಮರುಬಳಕೆ ಮಾಡಲಾಗುತ್ತದೆ. ಅತ್ಯಲ್ಪ ಪ್ರಾಕೃತಿಕ ಸಂಪನ್ಮೂಲಗಳನ್ನು ಹೊಂದಿರುವ ಚಿಕ್ಕ ರಾಷ್ಟ್ರಗಳಲ್ಲಿ ಇದು ಅನಿವಾರ್ಯವೂ ಹೌದು. ರದ್ದಿಯ ಪುನರಾವರ್ತನೆ ಜಪಾನೀಯರಿಗೆ ಅವರ ಪೂರ್ವಜರಿಂದ ಬಂದ ಬಳುವಳಿ ಎನ್ನಬಹುದು.

ಕ್ರಿಸ್ತಪೂರ್ವ ೧೦೫ರಲ್ಲಿ ಚೀನಾದ ಹ್ಯಾನ್ ವಂಶಸ್ಥನಾದ ತ್ಸಾಯ್-ಲೂಸ್ ಎಂಬಾತನು ಮೊಟ್ಟ ಮೊದಲ ಬಾರಿಗೆ ಕಾಗದವನ್ನು ತಯಾರಿಸಿದನು. ಕ್ರಿಸ್ತಪೂರ್ವ ೬೦೦ರಲ್ಲಿ ಜಪಾನ್ ದೇಶವನ್ನು ಸಂದರ್ಶಿಸಿದ ಕೊರಿಯನ್ ಬೌದ್ಧ ಸಂತನೊಬ್ಬನು ಕಾಗದ ತಯಾರಿಕೆಯನ್ನು ಅಲ್ಲಿ ಪ್ರಚುರಗೊಳಿಸಿದನು. ಪಾಶ್ಚಿಮಾತ್ಯರು ಈ ಕಲೆಯನ್ನು ಅರಿಯಲು ಇನ್ನೊಂದು ಶತಮಾನವೇ ಕಾಯಬೇಕಾಯಿತು. ೧೪ನೇ ಶತಮಾನದ ವೇಳೆಗೆ ಕಾಗದ ಕಾರ್ಖಾನೆಗಳು ಜಗತ್ತಿನಾದ್ಯಂತ ನಾಯಿ ಕೊಡೆಗಳಂತೆ ಹಬ್ಬಿದವು. ೧೯ನೇ ಶತಮಾನದ

> ಕ್ರಿಸ್ತಪೂರ್ವ ೧೦೫ ರಿಂದ ಇಂದಿನವರೆಗೂ ಕಾಗದವು ಕಂಡಿರುವ ಅವಸ್ಥಾಂತರ ಹಾಗೂ ರೂಪಾಂತರಗಳೆಲ್ಲ ಅಚ್ಚರಿ ಹುಟ್ಟಿಸುವಂಥವು. ಅದರ ಇತಿಹಾಸವೆ ಬಲು ರೋಚಕ

ನಂತರ ಅಭಿವೃದ್ಧಿಪಡಿಸಲಾದ ವೃಕ್ಷಾಧಾರಿತ ಕಾಗದ ತಂತ್ರಜ್ಞಾನವು ಜಗತ್ತಿನ ಪ್ರಮುಖ ಅರಣ್ಯ ಪ್ರದೇಶಗಳ ನಾಶಕ್ಕೂ ಕಾರಣವಾಯಿತು.

ಚೀನಾದಿಂದ ಪಡೆದ ಕಾಗದ ತಯಾರಿಕೆಯ ತಂತ್ರಜ್ಞಾನವನ್ನು ಜಪಾನೀಯರು ತಮ್ಮ ಅವಶ್ಯಕತೆಗಳಿಗೆ ಸರಿಹೊಂದುವಂತೆ ಬದಲಾಯಿಸಿಕೊಂಡರು. ವಿಶೇಷವಾಗಿ ಸಂಸ್ಕರಿಸಲ್ಪಟ್ಟ ಎಳೆಗಳನ್ನು ಜಾಲರಿಗಳ ಮೇಲೆ ಹರಡಿ ಒಣಗಿಸುವ ಮೂಲಕ ತಯಾರಿಸುತ್ತಿದ್ದ ಸಾಂಪ್ರದಾಯಿಕ ಕಾಗದಗಳನ್ನು 'ಕೈ ಕಾಗದ' (Handmade Paper) ಎಂದು ಕರೆಯುತ್ತಿದ್ದರು. ಇಂದಿಗೂ ನಮ್ಮ ದೇಶದಲ್ಲಿ ಖಾದಿ ಮತ್ತು

ಗ್ರಾಮೋದ್ಯೋಗ ಸಂಸ್ಥೆಯವರು ಇದೇ ವಿಧಾನದಿಂದ ತಯಾರಿಸುವ ಕಾಗದ ದೊರಗು ಮೇಲ್ಮೈ ಹೊಂದಿದ್ದು, ಉಬ್ಬು-ತಗ್ಗುಗಳಿಂದ ಕೂಡಿರುತ್ತದೆ. ಬರವಣಿಗೆಗೆ ಬಳಕೆಯಾಗುವುದಕ್ಕಿಂತ ಹೆಚ್ಚಾಗಿ ಆಹ್ವಾನ ಪತ್ರಿಕೆಗಳು, ಪೋಸ್ಟರುಗಳನ್ನು ಮುದ್ರಿಸಲು ಇದನ್ನು ಬಳಸಲಾಗುತ್ತದೆ. ಪುರಾತನ ಜಪಾನಿನಲ್ಲಿಯೂ ಇದೇ ವಿಧಾನವನ್ನು ಅನುಸರಿಸಿದರೂ ಜಾಲರಿಗಳನ್ನು ಸೂಕ್ತರೀತಿಯಲ್ಲಿ ಚಲಿಸುವಂತೆ ಮಾಡುವುದರ ಮೂಲಕ ಎಳೆಗಳು ಒತ್ತೊತ್ತಾಗಿ ಸೇರಿಕೊಳ್ಳುವಂತೆ ಮಾಡಲಾಗುವುದು. ಇದಲ್ಲದೆ ಸಸ್ಯಜನ್ಯ ಅಂಟು ಪದಾರ್ಥಗಳನ್ನು ಬೆರೆಸಿ ತಯಾರಿಸಿದ ಈ ಕಾಗದಗಳು ತೆಳುವಾಗಿದ್ದರೂ ಗಟ್ಟಿಮುಟ್ಟಾಗಿರುತ್ತವೆ. ಜಪಾನಿನ ಸಾಂಪ್ರದಾಯಿಕ ಸೂಕ್ಷ್ಮತೆ, ನವಿರು-ನಾಜೂಕುಗಳು ಇಂದಿಗೂ ಅಲ್ಲಿನ ಕಾಗದಗಳಲ್ಲಿ ವ್ಯಕ್ತವಾಗುತ್ತವೆ.

ಜಪಾನಿನ ಸಾಂಪ್ರದಾಯಿಕ ಕೈಕಾಗದವನ್ನು 'ವಾಶಿ' ಎನ್ನುತ್ತಾರೆ. ಇದು ಇಂದಿನ ಆಧುನಿಕ ಕಾರ್ಖಾನೆಗಳಿಂದ ಹೊರಬರುವ ಕಾಗದಗಳಿಗಿಂತ ಭಿನ್ನವಾಗಿದ್ದು, ಬಟ್ಟೆಯ ಸಂರಚನೆಯನ್ನು ಹೋಲುತ್ತದೆ. ಅಲ್ಲಿನ ದಂತಕಥೆಯೊಂದರಲ್ಲಿನ ಸಂದರ್ಭ ಹೀಗಿದೆ. ವರ್ತಕನೊಬ್ಬನ ಮನೆಗೆ ಬೆಂಕಿ ಬಿದ್ದಿತು. ಆತ ಮೊದಲು ಮಾಡಿದ ಕೆಲಸವೆಂದರೆ ತನ್ನ ಲೆಕ್ಕದ ಪುಸ್ತಕಗಳನ್ನು ಸಮೀಪದ ಬಾವಿಯಲ್ಲಿ ಎಸೆದದ್ದು! ನೀರಿಗೆ ಬಿದ್ದರೂ ತನ್ನ ಸ್ವರೂಪವನ್ನು ಕಳೆದುಕೊಳ್ಳದ 'ವಾಶಿ'ಯ ಮೇಲೆ ಬರೆದ ಬರಹಕ್ಕೂ ಅದೇ ಗುಣವಿದೆ. 'ಸುಮಿ' ಎಂದು ಕರೆಯಲಾಗುವ ಚೀನಾದ ವಿಶಿಷ್ಟ ಮಸಿ ನೀರಿನಲ್ಲಿ ಬಿದ್ದರೂ ಕರಗುವುದಿಲ್ಲ. ವಾಶಿ ಕಾಗದ ಇಷ್ಟು ಗಟ್ಟಿಮುಟ್ಟಾಗಿರಲು ಕಾರಣವೆಂದರೆ ಅದರಲ್ಲಿ ಬಳಸಲಾಗಿರುವ ಹಿಪ್ಪುನೇರಳೆ, ಎಕ್‌ಸ್ಪ್ರೋಮಿಕಾ ಸಿಕೋಕಿನಾ ಮತ್ತು ಎಚ್‌ವರ್ಥ್ ಪೇಪರಿಫೆರಾ ಸಸ್ಯಗಳ ಎಳೆಗಳು. ಈ ಎಳೆಗಳು ಕಡಿಮೆಯೆಂದರೆ ೧೦ ಮಿ.ಮೀ. ಉದ್ದವಾಗಿರುತ್ತವೆ. ಒತ್ತಾಗಿ ಜೋಡಣೆಗೊಂಡು ಹುರಿಕಟ್ಟಾದ ಎಳೆಗಳಿಂದ ತಯಾರಿಸಿದ ಕಾಗದ ಬಲವಾಗಿರುತ್ತಿದ್ದುದು ಸ್ವಾಭಾವಿಕ.

ಪೂರ್ವಕಾಲದಿಂದಲೂ ಜಪಾನೀಯರು ಒಂದು ತುಂಡು ಕಾಗದವನ್ನೂ ವ್ಯರ್ಥಮಾಡುವವರಲ್ಲ. ಅಲ್ಲಿನ ಪೇಪರ್ ಮ್ಯೂಸಿಯಂನ ಹೆಡ್‌ಕ್ಯುರೇಟರ್ ಹಿದೆತೋಷಿ ಕೋಮಿಯಾರ್ ಪ್ರಕಾರ "ಮೂಗು ಒರೆಸಲು ಬಳಸಿದ ಕಾಗದವನ್ನೂ ಸಂರಕ್ಷಿಸಿ ಪುನಃ ಬಳಸುತ್ತಾರೆ." ಅಲ್ಲಿನ ಮ್ಯೂಸಿಯಂನಲ್ಲಿ ಪುರಾತನ ಜಪಾನೀಯರ ಕಾಗದ ತಯಾರಿಕಾ ವಿಧಾನಗಳು ಹಾಗೂ ಪುನರ್ಬಳಕೆಯ ಮಾದರಿಗಳನ್ನು ಪ್ರದರ್ಶಿಸಲಾಗಿದೆ. ಕಾಗದದ ಪುನರಾವರ್ತನೆಯೆಂದರೆ ಆತ್ಮಗಳ ಪುನರಾವರ್ತನೆ"ಯೆಂದೇ ಅವರ ನಂಬಿಕೆ. ೮ನೇ ಶತಮಾನದಲ್ಲಿ ಸೈನಾ ಚಕ್ರವರ್ತಿಯ ಆಸ್ಥಾನದಲ್ಲಿದ್ದ ಮಹಿಳೆಯೊಬ್ಬಳು, ಚಕ್ರವರ್ತಿ ತನಗೆ ಬರೆದ ಪತ್ರಗಳನ್ನು ಆತನ ಮರಣಾನಂತರ ಪುನರಾವರ್ತಿಸಿ ಹೊಸ ವಿಷಯಗಳನ್ನು ಬರೆದುಕೊಂಡಳು. 'ಶುಕುಶಿ' ಮತ್ತು 'ಕಾನ್‌ಕೊಷಿ' ಎಂದು ಕರೆಯಲಾಗುವ ಈ ಪತ್ರಗಳಲ್ಲಿ ಮೃತರ ಆತ್ಮಗಳು ನೆಲೆಗೊಂಡಿರುತ್ತವೆ ಎಂಬ ಗಾಢವಿಶ್ವಾಸ ಅವರದು. ಆವರ್ತಿತ ಕಾಗದಗಳನ್ನು 'ಉಸುಜುಮಿಗಾಮಿ' ಎನ್ನುತ್ತಾರೆ. ಕಡಿಮೆ ಚೆಲುವೆ (Bleach) ಮಾಡಲಾದ ನಸುಗುಂದು ಬಣ್ಣದ ಈ ಕಾಗದಗಳು ಶೋಕಸೂಚಕ ಭಾವಗಳನ್ನು ವ್ಯಕ್ತಪಡಿಸಲು ಅತ್ಯಂತ ಸೂಕ್ತವಾದುವು ಎಂದೂ ಅವರು ಭಾವಿಸುತ್ತಾರೆ.

ಕ್ರಿಸ್ತಶಕ ೭೯೪ ರಿಂದ ೧೧೮೫ರವರೆಗೆ ಅಸ್ತಿತ್ವದಲ್ಲಿದ್ದ ಹೈನ್ ಅರಸುಮನೆತನ ತನ್ನ ಉನ್ನತ ಅಭಿರುಚಿಗೆ ಹೆಸರುವಾಸಿಯಾದುದು. ಅದರ ಆಸ್ಥಾನಿಕರು ಬಳಸುತ್ತಿದ್ದ ಉತ್ಕೃಷ್ಟ ದರ್ಜೆಯ ಕಾಗದಗಳು ತಮ್ಮ ತೂಕಕ್ಕೆ ಸಮನಾದ ಬಂಗಾರದ ಬೆಲೆಯನ್ನೇ ಹೊಂದಿದ್ದವು! ಅಂದಿನ ಜಪಾನಿನ ಸಮುದಾಯದಲ್ಲಿ ಪ್ರಚಲಿತವಿದ್ದ ಜನಪ್ರಿಯ ಉಡುಗೊರೆಯ ಪದಾರ್ಥಗಳಲ್ಲಿ ಕಾಗದವೂ ಸೇರಿತ್ತು. ೧೧ನೇ ಶತಮಾನದವರೆಗೂ ಜಪಾನ್‌ನಲ್ಲಿ ಕಾಗದವು ಭೋಗವಸ್ತುಗಳ ಪಟ್ಟಿಯಲ್ಲೇ ಇತ್ತು. ಆಗ ಆಳುತ್ತಿದ್ದ ಈಡೋ ಜನಾಂಗದ 'ಟೋಕುಗಾವಾ' ಅರಸುಮನೆತನವು ಇಡೀ ದೇಶವನ್ನು ಎರಡು ಶತಮಾನಗಳ ಕಾಲ

ಪ್ರಪಂಚದಿಂದ ಬೇರ್ಪಡಿಸಿತ್ತು. ಈ ಅವಧಿಯಲ್ಲಿ ದೇಶದ ಒಳಗಿನ ವಾಣಿಜ್ಯ-ವ್ಯವಹಾರಗಳಿಗೆ ಉತ್ತೇಜನ ನೀಡಿದ್ದರಿಂದ ಅಲ್ಲಿನ ಮಧ್ಯಮ ವರ್ಗದ ಜನತೆಯ ಆರ್ಥಿಕ ಮಟ್ಟ ಏರಿತು. ೧೮ನೇ ಶತಮಾನದ ವೇಳೆಗೆ ಈಡೋ ಜನಾಂಗ ವೃದ್ಧಿಸಿ ಅದರ ಜನಸಂಖ್ಯೆ ಒಂದು ಮಿಲಿಯನ್ ಮೀರುವಾಗ ಕಾಗದ ಎಲ್ಲೆಡೆಯೂ ದೊರಕುತ್ತಿತ್ತು. ಕಾಗದದ ಕರವಸ್ತ್ರಗಳು, ಅಲಂಕಾರಿಕ ದಿನಚರಿಗಳು, ಪುಸ್ತಕಗಳ ರಾಶಿ ಮಾರುಕಟ್ಟೆಯನ್ನು ತುಂಬಿತ್ತು. ಇಷ್ಟಾಗಿಯೂ ಅಂದಿನ ಬಡಜನತೆಗೆ ಕಾಗದವೆಂದರೆ ಅಮೂಲ್ಯ ವಸ್ತುವೇ ಆಗಿದ್ದು ಅದನ್ನು ಹಾಳು ಮಾಡುವುದು ಅಪರಾಧವೆಂಬ ಭಾವನೆಯಿತ್ತು. ಇದರಿಂದಾಗಿ ಅಲ್ಲಿ ಕಾಗದದ ಮರುಬಳಕೆಯ ಉದ್ಯಮಕ್ಕೆ ಉತ್ತೇಜನ ದೊರೆಯಿತು. ಚಿಂದಿ ಆಯುವುದು ಇಂದು ಕನಿಷ್ಠತಮ ವೃತ್ತಿಯಾಗಿದ್ದರೆ, ಅದು ಪ್ರತಿಷ್ಠಿತರ ಉದ್ಯೋಗವೆಂದು ಪರಿಗಣಿಸಲ್ಪಟ್ಟ ದಿನಗಳವು. ಜಪಾನಿನ ಅನೇಕ ನಗರಗಳಲ್ಲಿ ಪುನರಾವರ್ತಿತ ಕಾಗದದ ಕಾರ್ಖಾನೆಗಳು ಜನ್ಮತಾಳಿದವು. 'ಅಸಾಕುಸೋ' ನಗರ ಕೂಡ ಅಂಥದ್ದೇ ಒಂದು. ತೀರ ಕಳಪೆ ಗುಣಮಟ್ಟದ ಅಲ್ಲಿನ ಕಾಗದಗಳಲ್ಲಿ ಕೂದಲು, ತಗಣೆಗಳಂಥ ಕೊಳಕು ಪದಾರ್ಥಗಳೂ ಇರುತ್ತಿದ್ದವು. ಮೂಗು ಒರೆಸುವುದರಿಂದ ಹಿಡಿದು ಪತ್ರವ್ಯವಹಾರ ನಡೆಸಲೂ ಇವೇ ಕಾಗದಗಳನ್ನು ಅಲ್ಲಿನ ಬಡಜನರು ಬಳಸುತ್ತಿದ್ದರು. ಹಾಗೆಂದು ನೋಡಲು ಕಳಪೆಯಾಗಿ ಕಾಣಿಸುವ ಈ ಕಾಗದದಿಂದ ತಯಾರಿಸಲಾದ ಪುಸ್ತಕಗಳು, ರಟ್ಟುಗಳು ೭೦೦-೮೦೦ ವರ್ಷಗಳ ನಂತರವೂ ಸುಸ್ಥಿತಿಯಲ್ಲಿರುವುದನ್ನು ಅಲ್ಲಿನ ವಸ್ತುಸಂಗ್ರಹಾಲಯಗಳಲ್ಲಿ ಕಾಣಬಹುದು.

೧೯ನೇ ಶತಮಾನದ ವೇಳೆಗೆ ಪ್ರಪಂಚದಾದ್ಯಂತ ಕಾಗದ ಕಾರ್ಖಾನೆಗಳು ಪಸರಿಸಿದ ನಂತರ, ಜಪಾನಿನ ಸಾಂಪ್ರದಾಯಿಕ ಕೈಕಾಗದಗಳು ಹಿಂದೆ ಸರಿದವು. ತೀವ್ರ ಕೈಗಾರಿಕೀಕೃತ ಅರ್ಥವ್ಯವಸ್ಥೆಯಲ್ಲಿ ಬೆಳೆದ ಜಪಾನಿಗೆ ಇಂದು ಅದರ ಕಾಗದದ ಹಸಿವನ್ನು ತಣಿಸುವುದು ದುಸ್ಸಾಧ್ಯವಾಗಿ ತೋರುತ್ತಿದೆ. ಕೊಮಿಯಾ ಹೇಳುತ್ತಾರೆ: "ಈ ಉದ್ಯಮ ಎಷ್ಟು ಕುಸಿದಿದೆಯೆಂದರೆ, ಕೈಗಾರಿಕಾ ಅಂಕಿ-ಅಂಶಗಳಲ್ಲಿ ನಮೂದಿಸಲೂ ಬಾರದಷ್ಟು ಚಿಕ್ಕ ಪ್ರಮಾಣಕ್ಕೆ ಬಂದು ನಿಂತಿದೆ. ಇಷ್ಟಾದರೂ ಸಾವಿರಾರು ವರ್ಷ ಬಾಳಬಲ್ಲ ತಮ್ಮ ಸಾಮರ್ಥ್ಯ ಮತ್ತು ವಿಶಿಷ್ಟ ಸೌಂದರ್ಯಗಳಿಂದಾಗಿ ಇಂದಿಗೂ ಜನಪ್ರಿಯವಾಗಿ ಉಳಿದಿದೆ." ★



# ಅಚ್ಚಳಿಯದ ಪುಟಗಳು

## ಹೀಗಿದ್ದರು ಕೈಲಾಸಂ!

'ಕೈಲಾಸಂ'
ಲೇಖಕರು: ಪಿ.ಜಿ. ಕೃಷ್ಣಮೂರ್ತಿ
ಪ್ರಕಾಶಕರು: ನಿರ್ದೇಶಕರು, ಪ್ರಸಾರಾಂಗ
(ಗೃಹ ಸರಸ್ವತಿ ಗ್ರಂಥಮಾಲೆ-೭೫,) ಮೈಸೂರು.
ಬೆಲೆ: ರೂ. ೧೮, ಪುಟಗಳು: ೨೦೦
ಪ್ರಥಮ ಮುದ್ರಣ: ೧೯೮೮ ಪುಟಗಳು: ೨೦೦

ಕೈಲಾಸಂ ಸ್ವಾಭಾವಿಕವಾಗಿಯೇ ವಿನೋದ ಪ್ರಿಯರು. ಇತರರನ್ನು ನೋಯಿಸುವ ಉದ್ದೇಶ ಅವರ ಹಾಸ್ಯ ನುಡಿಗಳಲ್ಲಿ ಇರುತ್ತಿರಲಿಲ್ಲ. ಅವರ ಹಾಸ್ಯಕ್ಕೆ ಇಂತಹುದೇ ವಸ್ತು ಇರಬೇಕೆಂದೂ ಇರಲಿಲ್ಲ. ಕೆಲವು ಸಲ ತಮ್ಮನ್ನೇ ಹಾಸ್ಯದ ವಸ್ತುವನ್ನಾಗಿ ಮಾಡಿಕೊಳ್ಳುತ್ತಿದ್ದರು.

ಕೈಲಾಸಂ ತಂದೆ ಶಿಸ್ತಿನ ವ್ಯಕ್ತಿ. ಸಲಿಗೆಯಿಂದ ವರ್ತಿಸದ ಬಿಗುಮಾನದ ಮನುಷ್ಯ. ಮಗನ ದುಶ್ಚಟಗಳನ್ನು ಸಹಿಸದೆ ಅವರನ್ನು ದೂರಮಾಡಿದ್ದರು. ಗೃಹ ಜೀವನದ ಸಂತೋಷವನ್ನು ಕಳೆದುಕೊಂಡಿದ್ದ ಕೈಲಾಸಂ ತಮ್ಮ ಪರಿಸ್ಥಿತಿಗೆ ತಕ್ಕಂತೆ ಇಂಗ್ಲೀಷ್ ಕವನವೊಂದನ್ನು ತಮ್ಮ ನೇರಕ್ಕೆ ಹೀಗೆ ಪರಿವರ್ತಿಸಿಕೊಂಡಿದ್ದರು.

HOME SWEET HOME
THERE IS NO PLACE LIKE
HOME

-for KAILASAM.

(ಮನೆ, ಮನೆ - ಪ್ರೀತಿಯ ಮನೆ,
ಮನೆಯಂಥ ನೆಲೆಯೇ ಇಲ್ಲ.

-ಕೈಲಾಸಂಪಾಲಿಗೆ)

ಮನೆಯಲ್ಲಿ ತಾನು ಯಾರಿಗೂ ಬೇಡವಾದ ವ್ಯಕ್ತಿ ಎಂಬ ಅರ್ಥದಲ್ಲಿ ಕೈಲಾಸಂ ``I am a black spot in the white house" ("ಬಿಳಿ ಮನೆಯಲ್ಲಿ ಕಪ್ಪು ಚುಕ್ಕೆಯಂತಿರುವೆ ನಾನು") ಎಂದು ತಮ್ಮನ್ನು ತಾವೇ ಹಾಸ್ಯ ಮಾಡಿಕೊಂಡಿದ್ದಾರೆ. ಅಂತೆಯೇ ಮನೆಯಲ್ಲಿ ತಮಗೆ ಸ್ಥಾನ ಮಾನವಿಲ್ಲ ಎಂಬುದನ್ನು ``I am not in the white house but in the out house" (ನಾನು ವೈಟ್ ಹೌಸ್‌ನಲ್ಲಿಲ್ಲ, ಔಟ್ ಹೌಸ್‌ನಲ್ಲಿದ್ದೇನೆ) ಎಂದು ವಿನೋದವಾಗಿಯೇ ಹೇಳುತ್ತಿದ್ದರು!

ಪ್ರೈಮರೀ ಸ್ಕೂಲಿನ ಸಂಸ್ಕೃತ ಮೇಸ್ಟು ಎಲ್ಲರೂ ಸಂಸ್ಕೃತದಲ್ಲೇ ಮಾತನಾಡಬೇಕು ಎಂದು ಕಟ್ಟುನಿಟ್ಟಾದ ಅಪ್ಪಣೆ ಮಾಡಿದಾಗ, ಬಾಲಕ ಕೈಲಾಸಂ ಮೇಸ್ಟ್ರ ಮುಂದೆ ಬಂದು ನಿಂತು ಕಿರುಬೆರಳನ್ನು ಎತ್ತಿ ತೋರಿಸುತ್ತಾ, "ಮೂತ್ರ ವಿಸರ್ಜನಾರ್ಥಾಯ ಬಹಿರ್ದೇಶಂಗಚ್ಛಾಮಿ", ಅಂದರಂತೆ!

ಕೈಲಾಸಂ ಅಭಿಮಾನಿಗಳೊಬ್ಬರು ಅವರ ರೂಮಿಗೆ ಬಂದಿದ್ದಾಗ, "ಇದೇನು ನಿಮ್ಮ ಕೊಠಡಿಯಲ್ಲಿ ಇಷ್ಟೊಂದು ಕಸ! ಎಂದು ಅತೃಪ್ತಿಯನ್ನು ಸೂಚಿಸಿದರು. ಕೈಲಾಸಂ ಅವರ ಅಸಮಾಧಾನವನ್ನು ಗ್ರಹಿಸಿ, "ಸ್ವಾಮಿ, ಕಸ ಅಂದರೆ ಏನು ಗೊತ್ತೆ? ಯಾವ ವಸ್ತು ಎಲ್ಲಿರಬಾರದೋ ಆ ವಸ್ತು ಅಲ್ಲಿದ್ದರೆ ಅದು ಕಸ. ನಮಗೆ ಬೇಡವಾದ ವಸ್ತು ಕಸ. ಉದಾಹರಣೆಗೆ ನನ್ನ ರೂಮಿನಲ್ಲಿ ಈಗ ನೀವು ಕಸ!" ಎಂದುಬಿಟ್ಟರು.

"ನೀನೇಕೆ ಯಾವಾಗಲೂ ಎಡೆಬಿಡದೆ ಹೊಗೆಬತ್ತಿ ಸೇದುತ್ತೀ?" ಎಂದು ಕೇಳಿದವರಿಗೆ ಕೈಲಾಸಂ "ಕೊನೆಗೆ ನನ್ನ ಮುಕ್ತಾಯವೂ ಹೊಗೆಯಲ್ಲಿಯೇ ಎಂದು ಎಡೆಬಿಡದೆ ನೆನಪಿಸಿಕೊಳ್ಳುವುದಕ್ಕಾಗಿಯೇ ನಾನು

ಹೊಗೆಬತ್ತಿಯನ್ನು ಸೇದುತ್ತೀನಿ" ಅನ್ನುತ್ತಿದ್ದರು.

ಕೈಲಾಸಂ ಮತ್ತು ಡಾ. ಶಿವರಾಂ (ರಾಶಿ) ಆಗಿನ ಕಾಲದ ಮಿತ್ರರು. ಕನ್ನಡ ಸಾಹಿತ್ಯದ ಬಗ್ಗೆ ಹಳೆಗನ್ನಡ, ನಡುಗನ್ನಡ, ಹೊಸಗನ್ನಡ ಸಾಹಿತ್ಯದ ಬಗ್ಗೆ ಶಿವರಾಂರವರ ಸಲಹೆ ಕೇಳಲು, ಕೈಲಾಸಂ ಹೋಗುತ್ತಿದ್ದರು. ಶಿವರಾಂಗೆ ಇವರ ಪ್ರಶ್ನೆಗಳಿಗೆ ಉತ್ತರ ನೀಡಲು ಸಾಧ್ಯವಾಗದೇ ಹೋಯ್ತು. ವೈದ್ಯರಾಗಲು ಓದಿದ ಶಿವರಾಂಗೆ ಕನ್ನಡ ಸಾಹಿತ್ಯ ಚರಿತ್ರೆಯ ಬಗ್ಗೆ ನಿಯಂತ್ರಣವಿರಲಿಲ್ಲ. ಕೈಲಾಸಂ ಅಸಮಾಧಾನದಿಂದ "ಅಯ್ಯಾ ಶಿವರಾಂ, ನಾನು ತಮಿಳಿನವನು. ನನಗೆ ಕನ್ನಡ ಸಾಹಿತ್ಯದ ಪರಿಚಯವಿಲ್ಲವೆಂದರೆ ಕ್ಷಮೆಯುಂಟು. ಆದರೆ ನಿನ್ನ ಮಾತೃಭಾಷೆ ಕನ್ನಡ; ನಿನ್ನ ಅತ್ತೆಯ ಭಾಷೆಯೂ ಕನ್ನಡ. ಅಂತಹುದರಲ್ಲಿ ನಿನಗೆ ಕನ್ನಡ ಸಾಹಿತ್ಯದ ಪರಿಚಯವಿಲ್ಲವೆಂದರೆ ಕ್ಷಮೆಯೇ ಇಲ್ಲ" ಎಂದು ಹೇಳಿದರು.

**ಸಂಗ್ರಹ: ಎಸ್.ವಿ. ರಾಮಚಂದ್ರ**

## ಬಾಳ್ವೆಯೇ ಬೆಳಕು

**ಡಾ. ಶಿವರಾಮ ಕಾರಂತರ 'ಬಾಳ್ವೆಯೇ ಬೆಳಕು' ಕಾದಂಬರಿಯಿಂದಾಯ್ದುಕೊಂಡ ಪುಟಗಳು**

"ಯಾವೊಬ್ಬನ ಜೀವನದ ತೀರ್ಮಾನ ಇನ್ನೊಬ್ಬರ ಬದುಕಿನ ತೀರ್ಮಾನವಾಗಲಾರದು. ಎಲ್ಲಾ ಬಗೆಯ ಜನಗಳಿಗೂ ಬಾಳ್ವೆಗಳಿಗೂ ಒಂದೇ ಉತ್ತರ ನ್ಯಾಯವಾಗಲಾರದು".

"ಬಾಳ್ವೆಯ ಪ್ರಶ್ನೆಯು ಒಬ್ಬರು ಬಾಳಿ, ಇನ್ನೊಬ್ಬರು ಉತ್ತರಿಸಿ ಮೂರನೆಯವರು ಒಪ್ಪಿ ಸಾಗುವಂಥ ಪ್ರಶ್ನೆ ಎಂದೂ ಆಗಿರಲಾರದು. ಅವನವನ ಜೀವನಕ್ಕೆ ಅವನವನೇ ದುಡಿದು ಉತ್ತರಗಳಿಸಬೇಕು. ಅರಿವುಳ್ಳ ಬದುಕು, ಸಹಾನುಭೂತಿಯುಳ್ಳ ನಡತೆ - ಇವುಗಳಿಂದ ನಮ್ಮ ಬದುಕು ಅರಳಬೇಕು".

"ಪರರ ಅನುಭವಗಳ ಪಾಠ ನಮಗೆ ಬೇಡವೆಂದು ತೀರ್ಮಾನವಲ್ಲ. ವಿಚಾರ ಸಾಮ್ಯ, ಅನುಭವ ಸಾಮ್ಯ, ಪರಿಸ್ಥಿತಿ ಸಾಮ್ಯ ಇವುಗಳಿಂದಲ್ಲದೇ ಪರರ ಅನುಭವಗಳು ನಮ್ಮ ಜೀವನಕ್ಕೆ ನೆರವಾಗವು".

"ಸಾವಿರಾರು ಅನುಭವಗಳು ಎಷ್ಟೋ ಹಿರಿಯ ಸತ್ವಗಳನ್ನು ನಮ್ಮ ಜೀವನಕ್ಕೆ ತಿಳಿಸಬಹುದು. ಅರಿವುಳ್ಳವನ ಮನಸ್ಸು, ಇಂದ್ರಿಯಗಳು, ಪ್ರತಿಯೊಂದನ್ನೂ 'ಏನು', 'ಏಕೆ', 'ಹೇಗೆ' ಎಂದು ಕೇಳಿ ತಿಳಿದು ಬದುಕನ್ನು ಸರಿಪಡಿಸಿಕೊಳ್ಳುತ್ತವೆ".

"ಕಂಡ ಸ್ವಲ್ಪ ಬಾಳ್ವೆ (ಇಹ) ನೀರಸವೂ ಅಲ್ಪವೆಂದೂ, ಕಾಣದ್ದು (ಪರ) ಸರಸವೂ ಹಿರಿದೂ ಎಂದು ತಿಳಿಯಬಾರದು. ಅಂದರೆ ತಿಳಿದುದು ತಿಳಿಯದ್ದಕ್ಕಿಂತ ಮೇಲು ಎಂದು ತಿಳಿಯಬೇಕು".

"ಯಾವಾತನು ತಾನು ಚೆನ್ನಾಗಿ ಬದುಕಿದ್ದೇನೆ ಎಂದು ಧೈರ್ಯ ಪಡಬಲ್ಲನೋ ಅವನು ಸಾವಿಗೆ ಅಂಜುವುದಿಲ್ಲ. ಚೆನ್ನಾಗಿ ಬದುಕಿದವನು ಸಾವನ್ನು ಸಹ ಸಹಜವಾಗಿ ತಿಳಿಯುತ್ತಾನೆ"

"ಜೀವನದಲ್ಲಿ ಚೈತನ್ಯ ಕೆಲಸ ಮಾಡುವುದರಿಂದ ಚಲನೆ, ಏಳು, ಬೀಳುಗಳಿವೆ. ಚೈತನ್ಯಮಯವಾಗಿರುವ ಜೀವಿ ಬೆಳೆಯಬೇಕು. ಬೆಳವಣಿಗೆಯ ದಾರಿಯಲ್ಲಿ ಇದಿರಾಗುವ ಅನುಭವಗಳಿಂದ ವಿಸ್ತರಿಸಬೇಕು. ಆವರಣಕ್ಕೆ ತಕ್ಕಂತೆ ಬದಲಾಯಿಸಬೇಕು".

"ಸಮಷ್ಟಿ ಜೀವನದ ಕಲ್ಯಾಣಕ್ಕೆ ಬೇಕಾದ ವಿಚಾರ ಶಕ್ತಿ ವ್ಯಕ್ತಿಯಲ್ಲಿ ಉಂಟಾಗಬೇಕಾದರೆ ಎಲ್ಲ ಬಗೆಯ ಮನೋದಾಸ್ಯಗಳು ಕಡಿದು ಹೋಗಬೇಕು".

ಸಂಗ್ರಹ: ಬಿ. ಸತ್ಯನಾರಾಯಣ ಅರಸ್

## ಅಭ್ಯಸಿಸಬೇಕಾದ ಪುಸ್ತಕಗಳು

# ಹೀಗಿದ್ದರು ಕೈಲಾಸಂ!

'ಕೈಲಾಸಂ'
ಲೇಖಕರು: ಪಿ.ಜಿ. ಕೃಷ್ಣಮೂರ್ತಿ
ಪ್ರಕಾಶಕರು: ನಿರ್ದೇಶಕರು, ಪ್ರಸಾರಾಂಗ
(ಗೃಹ ಸರಸ್ವತಿ ಗ್ರಂಥಮಾಲೆ-೭೫,) ಮೈಸೂರು.
ಬೆಲೆ: ರೂ. ೧೮, ಪುಟಗಳು: ೨೦೦
ಪ್ರಥಮ ಮುದ್ರಣ: ೧೯೮೮ ಪುಟಗಳು: ೨೦೦

ಕೈಲಾಸಂ ಸ್ವಾಭಾವಿಕವಾಗಿಯೇ ವಿನೋದ ಪ್ರಿಯರು. ಇತರರನ್ನು ನೋಯಿಸುವ ಉದ್ದೇಶ ಅವರ ಹಾಸ್ಯ ನುಡಿಗಳಲ್ಲಿ ಇರುತ್ತಿರಲಿಲ್ಲ. ಅವರ ಹಾಸ್ಯಕ್ಕೆ ಇಂತಹುದೇ ವಸ್ತು ಇರಬೇಕೆಂದೂ ಇರಲಿಲ್ಲ. ಕೆಲವು ಸಲ ತಮ್ಮನ್ನೇ ಹಾಸ್ಯದ ವಸ್ತುವನ್ನಾಗಿ ಮಾಡಿಕೊಳ್ಳುತ್ತಿದ್ದರು.

ಕೈಲಾಸಂ ತಂದೆ ಶಿಸ್ತಿನ ವ್ಯಕ್ತಿ. ಸಲಿಗೆಯಿಂದ ವರ್ತಿಸದ ಬಿಗುಮಾನದ ಮನುಷ್ಯ. ಮಗನ ದುಶ್ಚಟಗಳನ್ನು ಸಹಿಸದೆ ಅವರನ್ನು ದೂರಮಾಡಿದ್ದರು. ಗೃಹ ಜೀವನದ ಸಂತೋಷವನ್ನು ಕಳೆದುಕೊಂಡಿದ್ದ ಕೈಲಾಸಂ ತಮ್ಮ ಪರಿಸ್ಥಿತಿಗೆ ತಕ್ಕಂತೆ ಇಂಗ್ಲೀಷ್ ಕವನವೊಂದನ್ನು ತಮ್ಮ ನೇರಕ್ಕೆ ಹೀಗೆ ಪರಿವರ್ತಿಸಿಕೊಂಡಿದ್ದರು.

HOME SWEET HOME
THERE IS NO PLACE LIKE
HOME

-for KAILASAM.

(ಮನೆ, ಮನೆ - ಪ್ರೀತಿಯ ಮನೆ,
ಮನೆಯಂಥ ನೆಲೆಯೇ ಇಲ್ಲ.

-ಕೈಲಾಸಂಪಾಲಿಗೆ)

ಮನೆಯಲ್ಲಿ ತಾನು ಯಾರಿಗೂ ಬೇಡವಾದ ವ್ಯಕ್ತಿ ಎಂಬ ಅರ್ಥದಲ್ಲಿ ಕೈಲಾಸಂ ``I am a black spot in the white house" ("ಬಿಳಿ ಮನೆಯಲ್ಲಿ ಕಪ್ಪು ಚುಕ್ಕೆಯಂತಿರುವೆ ನಾನು") ಎಂದು ತಮ್ಮನ್ನು ತಾವೇ ಹಾಸ್ಯ ಮಾಡಿಕೊಂಡಿದ್ದಾರೆ. ಅಂತೆಯೇ ಮನೆಯಲ್ಲಿ ತಮಗೆ ಸ್ಥಾನ ಮಾನವಿಲ್ಲ ಎಂಬುದನ್ನು ``I am not in the white house but in the out house" (ನಾನು ವೈಟ್ ಹೌಸ್‌ನಲ್ಲಿಲ್ಲ, ಔಟ್ ಹೌಸ್‌ನಲ್ಲಿದ್ದೇನೆ) ಎಂದು ವಿನೋದವಾಗಿಯೇ ಹೇಳುತ್ತಿದ್ದರು!

ಪ್ರೈಮರೀ ಸ್ಕೂಲಿನ ಸಂಸ್ಕೃತ ಮೇಸ್ಟ್ರು ಎಲ್ಲರೂ ಸಂಸ್ಕೃತದಲ್ಲೇ ಮಾತನಾಡಬೇಕು . ಎಂದು ಕಟ್ಟುನಿಟ್ಟಾದ ಅಪ್ಪಣೆ ಮಾಡಿದಾಗ, ಬಾಲಕ ಕೈಲಾಸಂ ಮೇಸ್ಟ್ರ ಮುಂದೆ ಬಂದು ನಿಂತು ಕಿರುಬೆರಳನ್ನು ಎತ್ತಿ ತೋರಿಸುತ್ತಾ, "ಮೂತ್ರ ವಿಸರ್ಜನಾರ್ಥಾಯ ಬಹಿರ್ದೇಶಂಗಚ್ಛಾಮಿ", ಅಂದರಂತೆ!

ಕೈಲಾಸಂ ಅಭಿಮಾನಿಗಳೊಬ್ಬರು ಅವರ ರೂಮಿಗೆ ಬಂದಿದ್ದಾಗ, "ಇದೇನು ನಿಮ್ಮ ಕೊಠಡಿಯಲ್ಲಿ ಇಷ್ಟೊಂದು ಕಸ! ಎಂದು ಅತೃಪ್ತಿಯನ್ನು ಸೂಚಿಸಿದರು. ಕೈಲಾಸಂ ಅವರ ಅಸಮಾಧಾನವನ್ನು ಗ್ರಹಿಸಿ, "ಸ್ವಾಮಿ, ಕಸ ಅಂದರೆ ಏನು ಗೊತ್ತೆ? ಯಾವ ವಸ್ತು ಎಲ್ಲಿರಬಾರದೋ ಆ ವಸ್ತು ಅಲ್ಲಿದ್ದರೆ ಅದು ಕಸ. ನಮಗೆ ಬೇಡವಾದ ವಸ್ತು ಕಸ. ಉದಾಹರಣೆಗೆ ನನ್ನ ರೂಮಿನಲ್ಲಿ ಈಗ ನೀವು ಕಸ!" ಎಂದುಬಿಟ್ಟರು.

"ನೀನೇಕೆ ಯಾವಾಗಲೂ ಎಡೆಬಿಡದೆ ಹೊಗೆಬತ್ತಿ ಸೇದುತ್ತೀ?" ಎಂದು ಕೇಳಿದವರಿಗೆ ಕೈಲಾಸಂ "ಕೊನೆಗೆ ನನ್ನ ಮುಕ್ತಾಯವೂ ಹೊಗೆಯಲ್ಲಿಯೇ ಎಂದು ಎಡೆಬಿಡದೆ ನೆನಪಿಸಿಕೊಳ್ಳುವುದಕ್ಕಾಗಿಯೇ ನಾನು

ಹೊಗೆಬತ್ತಿಯನ್ನು ಸೇದುತ್ತೀನಿ" ಅನ್ನುತ್ತಿದ್ದರು.

ಕೈಲಾಸಂ ಮತ್ತು ಡಾ. ಶಿವರಾಂ (ರಾಶಿ) ಆಗಿನ ಕಾಲದ ಮಿತ್ರರು. ಕನ್ನಡ ಸಾಹಿತ್ಯದ ಬಗ್ಗೆ ಹಳೆಗನ್ನಡ, ನಡುಗನ್ನಡ, ಹೊಸಗನ್ನಡ ಸಾಹಿತ್ಯದ ಬಗ್ಗೆ ಶಿವರಾಂರವರ ಸಲಹೆ ಕೇಳಲು, ಕೈಲಾಸಂ ಹೋಗುತ್ತಿದ್ದರು. ಶಿವರಾಂಗೆ ಇವರ ಪ್ರಶ್ನೆಗಳಿಗೆ ಉತ್ತರ ನೀಡಲು ಸಾಧ್ಯವಾಗದೇ ಹೋಯ್ತು. ವೈದ್ಯರಾಗಲು ಓದಿದ ಶಿವರಾಂಗೆ ಕನ್ನಡ ಸಾಹಿತ್ಯ ಚರಿತ್ರೆಯ ಬಗ್ಗೆ ನಿಯಂತ್ರಣವಿರಲಿಲ್ಲ. ಕೈಲಾಸಂ ಅಸಮಾಧಾನದಿಂದ "ಅಯ್ಯಾ ಶಿವರಾಂ, ನಾನು ತಮಿಳನವನು. ನನಗೆ ಕನ್ನಡ ಸಾಹಿತ್ಯದ ಪರಿಚಯವಿಲ್ಲವೆಂದರೆ ಕ್ಷಮೆಯುಂಟು. ಆದರೆ ನಿನ್ನ ಮಾತೃಭಾಷೆ ಕನ್ನಡ; ನಿನ್ನ ಅತ್ತೆಯ ಭಾಷೆಯೂ ಕನ್ನಡ. ಅಂತಹುದರಲ್ಲಿ ನಿನಗೆ ಕನ್ನಡ ಸಾಹಿತ್ಯದ ಪರಿಚಯವಿಲ್ಲವೆಂದರೆ ಕ್ಷಮೆಯೇ ಇಲ್ಲ" ಎಂದು ಹೇಳಿದರು.

ಸಂಗ್ರಹ: ಎಸ್.ವಿ. ರಾಮಚಂದ್ರ

## ಬಾಳ್ವೆಯೇ ಬೆಳಕು

**ಡಾ. ಶಿವರಾಮ ಕಾರಂತರ 'ಬಾಳ್ವೆಯೇ ಬೆಳಕು' ಕಾದಂಬರಿಯಿಂದಾಯ್ದುಕೊಂಡ ಪುಟಗಳು**

"ಯಾವನೊಬ್ಬನ ಜೀವನದ ತೀರ್ಮಾನ ಇನ್ನೊಬ್ಬರ ಬದುಕಿನ ತೀರ್ಮಾನವಾಗಲಾರದು. ಎಲ್ಲಾ ಬಗೆಯ ಜನಗಳಿಗೂ ಬಾಳ್ವೆಗಳಿಗೂ ಒಂದೇ ಉತ್ತರ ನ್ಯಾಯವಾಗಲಾರದು".

"ಬಾಳ್ವೆಯ ಪ್ರಶ್ನೆಯು ಒಬ್ಬರು ಬಾಳಿ, ಇನ್ನೊಬ್ಬರು ಉತ್ತರಿಸಿ ಮೂರನೆಯವರು ಒಪ್ಪಿ ಸಾಗುವಂಥ ಪ್ರಶ್ನೆ ಎಂದೂ ಆಗಿರಲಾರದು. ಅವನವನ ಜೀವನಕ್ಕೆ ಅವನವನೇ ದುಡಿದು ಉತ್ತರಗಳಿಸಬೇಕು. ಅರಿವುಳ್ಳ ಬದುಕು, ಸಹಾನುಭೂತಿಯುಳ್ಳ ನಡತೆ - ಇವುಗಳಿಂದ ನಮ್ಮ ಬದುಕು ಅರಳಬೇಕು".

"ಪರರ ಅನುಭವಗಳ ಪಾಠ ನಮಗೆ ಬೇಡವೆಂದು ತೀರ್ಮಾನವಲ್ಲ. ವಿಚಾರ ಸಾಮ್ಯ, ಅನುಭವ ಸಾಮ್ಯ, ಪರಿಸ್ಥಿತಿ ಸಾಮ್ಯ ಇವುಗಳಿಂದಲ್ಲದೇ ಪರರ ಅನುಭವಗಳು ನಮ್ಮ ಜೀವನಕ್ಕೆ ನೆರವಾಗವು".

"ಸಾವಿರಾರು ಅನುಭವಗಳು ಎಷ್ಟೋ ಹಿರಿಯ ಸತ್ವಗಳನ್ನು ನಮ್ಮ ಜೀವನಕ್ಕೆ ತಿಳಿಸಬಹುದು. ಅರಿವುಳ್ಳವನ ಮನಸ್ಸು, ಇಂದ್ರಿಯಗಳು, ಪ್ರತಿಯೊಂದನ್ನೂ 'ಏನು', 'ಏಕೆ', 'ಹೇಗೆ' ಎಂದು ಕೇಳಿ ತಿಳಿದು ಬದುಕನ್ನು ಸರಿಪಡಿಸಿಕೊಳ್ಳುತ್ತವೆ".

"ಕಂಡ ಸ್ವಲ್ಪ ಬಾಳ್ವೆ (ಇಹ) ನೀರಸವೂ ಅಲ್ಪವೆಂದೂ, ಕಾಣದ್ದು (ಪರ) ಸರಸವೂ ಹಿರಿದೂ ಎಂದು ತಿಳಿಯಬಾರದು. ಅಂದರೆ ತಿಳಿದುದು ತಿಳಿಯದ್ದಕ್ಕಿಂತ ಮೇಲು ಎಂದು ತಿಳಿಯಬೇಕು".

"ಯಾವಾತನು ತಾನು ಚೆನ್ನಾಗಿ ಬದುಕಿದ್ದೇನೆ ಎಂದು ಧೈರ್ಯ ಪಡಬಲ್ಲನೋ ಅವನು ಸಾವಿಗೆ ಅಂಜುವುದಿಲ್ಲ. ಚೆನ್ನಾಗಿ ಬದುಕಿದವನು ಸಾವನ್ನು ಸಹ ಸಹಜವಾಗಿ ತಿಳಿಯುತ್ತಾನೆ"

"ಜೀವನದಲ್ಲಿ ಚೈತನ್ಯ ಕೆಲಸ ಮಾಡುವುದರಿಂದ ಚಲನೆ, ಏಳು, ಬೀಳುಗಳಿವೆ. ಚೈತನ್ಯಮಯವಾಗಿರುವ ಜೀವಿ ಬೆಳೆಯಬೇಕು. ಬೆಳವಣಿಗೆಯ ದಾರಿಯಲ್ಲಿ ಇದಿರಾಗುವ ಅನುಭವಗಳಿಂದ ವಿಸ್ತರಿಸಬೇಕು. ಆವರಣಕ್ಕೆ ತಕ್ಕಂತೆ ಬದಲಾಯಿಸಬೇಕು".

"ಸಮಷ್ಟಿ ಜೀವನದ ಕಲ್ಯಾಣಕ್ಕೆ ಬೇಕಾದ ವಿಚಾರ ಶಕ್ತಿ ವ್ಯಕ್ತಿಯಲ್ಲಿ ಉಂಟಾಗಬೇಕಾದರೆ ಎಲ್ಲ ಬಗೆಯ ಮನೋದಾಸ್ಯಗಳು ಕಡಿದು ಹೋಗಬೇಕು".

ಸಂಗ್ರಹ: ಬಿ. ಸತ್ಯನಾರಾಯಣ ಅರಸ್

# ಪ್ರಾಣಿಗಳು ನಮಗೆ ವೈದ್ಯಶಾಸ್ತ್ರ ಕಲಿಸಬಲ್ಲವೆ?

ಮುಂದುವರಿದ ರಾಷ್ಟ್ರಗಳಲ್ಲಿ ಈಚೆಗೆ ಉಷ್ಣವಲಯದ ಅಭಿವೃದ್ಧಿಶೀಲ ದೇಶಗಳ ಕಾಡುಗಳು ಮತ್ತು ಅಲ್ಲಿನ ಮೂಲನಿವಾಸಿಗಳಲ್ಲಿ ನವೀನ ಔಷಧೀಯ ಸಸ್ಯಗಳು ಮತ್ತು ಅವುಗಳ ನಿಕಟ ಪರಿಚಯ ಇದೆ ಎಂಬ ತಿಳುವಳಿಕೆ ಹೆಚ್ಚುಹೆಚ್ಚಾಗಿ ಮೂಡುತ್ತಿದೆ.

ಇಂದಿಗೂ ಶೇಕಡಾ ಇಪ್ಪತ್ತೈದಕ್ಕಿಂತ ಹೆಚ್ಚಿನ ಆಧುನಿಕ ಔಷಧಿಗಳು ನಮಗೆ ಸಸ್ಯಮೂಲದಿಂದಲೇ ಬರುತ್ತಿವೆ. ಆದರೆ ಅವುಗಳ ಆಕರ್ಷಕ ಹೊದಿಕೆಗಳು ಮೂಲವನ್ನು ಮರೆಮಾಚುತ್ತಿವೆ. ಪ್ರಪಂಚದ ಶೇಕಡಾ ಐಂಭತ್ತಕ್ಕಿಂತಲೂ ಹೆಚ್ಚಿನ ಜನರು ಇಂದಿಗೂ ಸಾಂಪ್ರದಾಯಿಕ ವೈದ್ಯವಿಧಾನಗಳ ಮೇಲೆ ನಂಬಿಕೆ ಇರಿಸಿದ್ದಾರೆ. ಆದರೆ ಉಷ್ಣವಲಯದ ಅನವರತ ಅರಣ್ಯ ನಾಶ ಮತ್ತು ಅರಣ್ಯ ನಿವಾಸಿಗಳ ಹಾಗೂ ಗುಡ್ಡಗಾಡು ಜನರ ಸಾಂಸ್ಕೃತಿಕ ಅಧಃಪತನ ಇವೆರಡೂ ಸೇರಿ ಅಮೂಲ್ಯವಾದ ಅರಣ್ಯ ಸಂಪತ್ತು ಮತ್ತು ಅದನ್ನು ಉಪಯೋಗಿಸುವ ಅನುಭವಜನ್ಯ ಜ್ಞಾನ ಇವೆರಡೂ ವಿನಾಶದ ಅಂಚಿನತ್ತ ಸಾಗುತ್ತಿವೆ.

ಪ್ರಪಂಚದ ಸಸ್ಯಗಳಲ್ಲಿ ಶೇಕಡಾ ಒಂದರಷ್ಟನ್ನು ಮಾತ್ರ ಔಷಧೀಯ ಗುಣಗಳಿಗಾಗಿ ಪರೀಕ್ಷೆಗೆ ಒಳಪಡಿಸಲಾಗಿದೆ. ಸದ್ಯ ಆಧುನಿಕ ಔಷಧಿಗಳನ್ನು ಒಂದು ನಿರ್ದೇಶಿತ ಜೀವರಾಸಾಯನಿಕ ಕ್ರಿಯೆಯಲ್ಲಿ ಪರಿಣಾಮ ಉಂಟುಮಾಡುವಂತೆ ತಯಾರಿಸಲಾಗುತ್ತಿದೆ. ಮನುಕುಲವನ್ನು ಬಾಧಿಸುವ ಅಗಣಿತ ರೋಗಗಳ ಹಿನ್ನೆಲೆಯಲ್ಲಿ ನಾವು ಈಗ ಲಭ್ಯವಿರುವ ಪರ್ಯಾಯ ಔಷಧಿಗಳ ಪ್ರಯೋಜನವನ್ನು ಪಡೆಯಬೇಕಾಗಿದೆ. ಆಧುನಿಕ ಔಷಧಿಯು ಸಾವಿರಾರು ವರ್ಷಗಳಿಂದ ಪ್ರಾಕೃತಿಕವಾಗಿ ವಿಕಾಸಗೊಂಡಿರುವ ಸಸ್ಯಮೂಲದ ಔಷಧಿಗಳೊಂದಿಗೆ ಸ್ಪರ್ಧೆಗೆ ಇಳಿಯಬೇಕಾಗಿದೆ. ಪ್ರಾಣಿಗಳ ಮತ್ತು ಗಿಡಮೂಲಿಕೆಗಳ ಅಧ್ಯಯನಗೈಯಲು ಕಾಡಿಗೆ ಹಿಂದಿರುಗುವುದರಿಂದ ಹೊಸ ಉಪಯುಕ್ತ ವಿಷಯಗಳು ಬೆಳಕಿಗೆ ಬರಬಹುದು.

ಉಷ್ಣವಲಯದ ಪ್ರಾಕೃತಿಕ ಇತಿಹಾಸದ ಸಾಹಿತ್ಯದಲ್ಲಿ ಕಶೇರುಕಗಳು (ಬೆನ್ನೆಲುಬುಳ್ಳ ಪ್ರಾಣಿಗಳು) ಅದರಲ್ಲೂ ವಿಶೇಷವಾಗಿ ಮಂಗಗಳು, ಹಂದಿಗಳು ಮತ್ತು ಆನೆಗಳು ಕಾಡಿನ ಮೂಲಿಕೆಗಳನ್ನು ಔಷಧ ಮತ್ತು ಆಹಾರವನ್ನಾಗಿ ತಿನ್ನುವ ಉದಾಹರಣೆಗಳು ಹಲವಾರು ಇವೆ. ನಿಜವಾಗಿಯೆಂದರೆ ಉಷ್ಣವಲಯದ ಅರಣ್ಯವು ವಿಷವಸ್ತುಗಳು, ಪ್ರತಿವಿಷಗಳು (ವಿಷಾಹಾರಿಗಳು)

ಮೂಲ: ಪಾಲ್ ನ್ಯೂಟನ್ ಹಾಗೂ ನಾಥನ್ ವೂಲ್ಫ್
ಕನ್ನಡಕ್ಕೆ: ಡಾ. ಎಂ.ಎಲ್. ಬಾಲಭಾಸ್ಕರ

('ಸೆಲೆಕ್ಷನ್ಸ್' ಫ್ರಂ ಬ್ರಿಟಿಶ್ ಮೆಡಿಕಲ್ ಜರ್ನಲ್'ದವರ ಅನುಮತಿಯೊಡನೆ)

ಆಹಾರ ವಸ್ತುಗಳು ಮತ್ತು ಔಷಧೀಯ ಮೂಲವಸ್ತುಗಳು-ಇವುಗಳ ಕಲಸು ಮೇಲೋಗರವಾಗಿರುವ ಒಂದು ಉಗ್ರಾಣ. ಪ್ರಾಣಿಗಳು ತಲೆತಲಾಂತರದ ಅನುಭವದಿಂದ ಅವುಗಳನ್ನು ಸರಿಯಾದ ರೀತಿಯಲ್ಲಿ ಬಳಸಿಕೊಳ್ಳುತ್ತಿವೆ.

ಮಾನವರಂತೆಯೆ ಪ್ರಾಣಿಗಳೂ ಔಷಧ ಸೇವನೆಯ ವಿವಿಧ ಮಾರ್ಗಗಳನ್ನು ಕಂಡು




ಹಿಡಿದಿರುವಂತೆ ತೋರುತ್ತದೆ. ಅವಾವುವೆಂದರೆ:

೧. ಬಾಯಿಯ ಮೂಲಕ ಔಷಧಿಯನ್ನು ದೇಹದೊಳಗೆ ಸೇರಿಸುವುದು (Oral Route).

೨. ನಾಲಿಗೆ ಅಡಿಯಿಂದ (Sub-Lingual)

೩. ಚರ್ಮದ ಮೂಲಕ (Trans Dermai & Topical)

ಸಿಸ್ಟೋಸೋಮಿಯಾಸಿಸ್‌ಗೆ ತುತ್ತಾಗುವ ಸಂಭವವಿರುವ ಇಥಿಯೋಪಿಯಾದ ಬಬೂನ್ ಎಂಬ ಮಂಗಗಳು ಬೆಲನೈಟಿಸ್ ಎಂಬ ಗಿಡದ ಹಣ್ಣುಗಳನ್ನು ತಿನ್ನುತ್ತವೆ. ಈ ಹಣ್ಣುಗಳಲ್ಲಿ ಡಯೋಸ್‌ಜೆನಿನ್ ಎಂಬ ಪ್ರಬಲ ಜಂತುನಾಶಕ ವಸ್ತು ಬಹಳಷ್ಟು ಪ್ರಮಾಣದಲ್ಲಿದೆ. ಆದರೆ ಇವೇ ಮಂಗಗಳಲ್ಲಿ ಮೇಲೆ ಹೇಳಿದ ಕಾಯಿಲೆಗೆ ತುತ್ತಾಗುವ ಸಂಭವವಿಲ್ಲದಿರುವ ಮಂಗಗಳು ಈ ಹಣ್ಣನ್ನು ತಿನ್ನುವುದಿಲ್ಲ!

ತಾಂಜಾನಿಯಾ ದೇಶದ ಚಿಂಪಾಂಜಿಗಳು ಅಸ್ಪೆಲಿಯ ಎಂಬ ಔಷಧೀಯ ಗಿಡದ ಎಲೆಗಳನ್ನು ನಾಲಿಗೆಯಡಿ ಇರಿಸಿಕೊಳ್ಳುವುದುಂಟು. ಈ ವಿಧಾನ, ಮಾನವರಲ್ಲಿ ಅಂಜೈನಾ ಪೆಕ್ಟೋರಿಸ್ ಎಂದರೆ ಹೃದಯಕ್ಕೆ ರಕ್ತಸಂಚಾರದ ಕೊರತೆ ಒಂದೇ ಕ್ಷಣದಲ್ಲಿ ಉಂಟಾದಾಗ ಬರುವ ತೀವ್ರವಾದ ಎದೆನೋವು ಕಾಣಿಸಿಕೊಂಡಾಗ ಸಾರ್ಬಿಟ್ರೇಟ್

ಮಾತ್ರೆಯನ್ನು ತೆಗೆದುಕೊಳ್ಳುವ ಕ್ರಮವನ್ನು ಹೋಲುತ್ತದೆ. ಚಿಂಪಾಂಜಿಗಳು ಅಸ್ಪಿಲಿಯ ಎಲೆಗಳನ್ನು ನಾಲಿಗೆ ಮತ್ತು ಒಳಗೆನ್ನೆಯ ನಡುವೆ ಉಜ್ಜಿ ನಂತರ ನುಂಗುತ್ತವೆ. ಈ ಅಸ್ಪಿಲಿಯವು ಆಫ್ರಿಕಾದ ಸಾಂಪ್ರದಾಯಿಕ ವೈದ್ಯಪದ್ಧತಿಯಲ್ಲಿ ಒಂದು ಮುಖ್ಯವಾದ ಔಷಧಿ. ಇದರಲ್ಲಿ ಥಯೋರುಬ್ರೈನ್ ಎಂಬ ರಾಸಾಯನಿಕ ಇದೆ. ಇದು ಪ್ರಬಲ ಶಿಲೀಂಧ್ರನಾಶಕ ಸೂಕ್ಷ್ಮಾಣುಜೀವಿನಾಶಕ ಮತ್ತು ಪರೋಪಜೀವಿ ಜಂತುಹುಳನಾಶಕ ಗುಣಗಳಿಂದ ಕೂಡಿದೆ. ಈ ವಸ್ತು ಬಹುಶಃ ಒಳ ಕೆನ್ನೆಯ ಮೃದು ಚರ್ಮದ ಮೂಲಕ ದೇಹವನ್ನು ಸೇರಿ ಕ್ರಿಯಾಶೀಲವಾಗುತ್ತದೆ. ಆದರೆ ಅದು ಬಾಯಿಯ ಮೂಲಕ ಒಳಸೇರಿದಲ್ಲಿ ಜಠರದಲ್ಲಿರುವ ಹೈಡ್ರೋಕ್ಲೋರಿಕ್ ಆಮ್ಲದಿಂದಾಗಿ ನಿಷ್ಕ್ರಿಯವಾಗುತ್ತದೆ.

ಕೊಡಿಯಾಕ್ ಕರಡಿಯು ಲಿಗುಸ್ಟಿಕಂ ಪೋರ್ಟರಿ ಎಂಬ ಸಸ್ಯದ ಎಲೆಗಳನ್ನು ಮೈಗೆಲ್ಲಾ ಉಜ್ಜಿಕೊಳ್ಳುತ್ತದೆ. ನವಾಜೋ ಪಂಗಡದ ರೆಡ್ ಇಂಡಿಯನ್ನರು ಈ ಸಸ್ಯದ ಕುರಿತಾದ ತಮ್ಮ ಎಲ್ಲಾ ತಿಳುವಳಿಕೆಯೂ ಕೊಡಿಯಾಕ್ ಕರಡಿಯಿಂದಲೇ ಬಂದದ್ದೆಂದು ನಂಬುತ್ತಾರೆ. ಈ ಕರಡಿಗಳನ್ನು ಬಂಧನದಲ್ಲಿಟ್ಟಾಗ 'ಲಿಗುಸ್ಟಿಕಂ' ಬೇರುಗಳನ್ನು ಚೆನ್ನಾಗಿ ಜಗಿದು ನಂತರ ತಮ್ಮ ಉಣ್ಣೆಯ ಮೇಲೆ ಉಗಿದುಕೊಂಡು ಉಜ್ಜಿಕೊಳ್ಳುತ್ತವೆ. ಈ ಬೇರಿನಲ್ಲಿ ನೂರೈದಕ್ಕೂ ಹೆಚ್ಚು ರಾಸಾಯನಿಕ ಸಂಯುಕ್ತಗಳಿದ್ದು ಅದು ಬಹುಶಃ ಕರಡಿಯ ಚರ್ಮದ ಮೇಲಿರುವ ಪರೋಪಜೀವಿ ಕ್ರಿಮಿಗಳನ್ನು ಕೊಲ್ಲುತ್ತದೆ.

ಯೂರೋಪಿಯನ್ ಸ್ಟಾರ್ಲಿಂಗ್ ಎಂಬುದು ಕಾಗೆ ಜಾತಿಗೆ ಸೇರಿದ ಕಪ್ಪು-ಕಂದು ಪುಕ್ಕಗಳುಳ್ಳ ಒಂದು ಹಕ್ಕಿ. ಇವುಗಳ ಬಗ್ಗೆ ನಡೆಸಿದ ಒಂದು ಅಧ್ಯಯನದ ಪ್ರಕಾರ ಈ ಹಕ್ಕಿಗಳು ತಮ್ಮ ಗೂಡಿನಲ್ಲಿ ವಾಸಿಸುವ ಪರೋಪಜೀವಿಗಳಿಂದ ಬಿಡುಗಡೆ ಪಡೆಯಲು ಒಂದು ನಿಶ್ಚಿತ ಜಾತಿಯ ಹಸಿರು ಸಸ್ಯವನ್ನು ಗೂಡಿನಲ್ಲಿ ತಂದಿಡುತ್ತವೆ. ಈ ಸಸ್ಯದಿಂದ ಆವಿಯಾಗಿ ಬರುವ ರಾಸಾಯನಿಕವು ಗೂಡನ್ನು ಕ್ರಿಮಿನಾಶಕಗೊಳಿಸುತ್ತದೆ. ಇದರಿಂದಾಗಿ ಮರಿಯಾಗುವ ಮೊಟ್ಟೆಗಳ ಸಂಖ್ಯೆಯೂ ವೃದ್ಧಿಸುತ್ತದೆ.

ಸಸ್ಯಜನ್ಯ ರಾಸಾಯನಿಕಗಳನ್ನು ರೋಗಬಾರದಂತೆ ತಡೆಯಲು ಉಪಯೋಗಿಸುವುದಲ್ಲದೆ, ಪ್ರಾಣಿಗಳು ಅವುಗಳನ್ನು ಚಿಕಿತ್ಸೆಗಾಗಿ ಕೂಡ ಬಳಸುತ್ತವೆ. ಜಡತ್ವ, ಅಜೀರ್ಣ, ಹಸಿವಾಗದಿರುವಿಕೆ ಮತ್ತು ಭೇದಿಯಾದಾಗ ಕಾಡು ಚಿಂಪಾಂಜಿಗಳು ವರ್ನೋನಿಯಾ ಎಂಬ ಗಿಡದ ತೊಗಟೆಯನ್ನು ಬಗಿದು, ಅದರ ಕಾಂಡದ ಸಾರವನ್ನು ಔಷಧಿಯಾಗಿ ಉಪಯೋಗಿಸಿ ಸ್ವ-ಚಿಕಿತ್ಸೆ ಮಾಡಿಕೊಳ್ಳುವುದನ್ನು ಗುರುತಿಸಲಾಗಿದೆ. ಈ ಗಿಡದ ಕಾಂಡದ ಸಾರವನ್ನು ಆಫ್ರಿಕಾದ ಉಷ್ಣವಲಯದಲ್ಲಿ ಜಠರ-ಕರುಳಿನ ಬೇನೆಗಳಿಗೆ ಮದ್ದಾಗಿ ಬಳಸುವುದಿದೆ.

ಲಭ್ಯವಿರುವ ಬಹುತೇಕ ಪುರಾವೆಗಳು ಪ್ರಾಣಿಗಳು ಉಪಯೋಗಿಸುವ ಔಷಧೀಯ ಸಸ್ಯಗಳಿಗೆಲ್ಲಾ ಪರೋಪಜೀವಿನಾಶಕ ಗುಣಗಳಿರುವುದನ್ನು ತೋರಿಸಿವೆಯಾದರೂ ಈ ರಾಸಾಯನಿಕ ಸಂಯುಕ್ತಗಳು ಬೇರೆ ಲಾಭವನ್ನೂ ತರಬಹುದು. ಉದಾಹರಣೆಗಾಗಿ ಹೌಲರ್ ಮಂಗಗಳು ಗಿಡಮೂಲಿಕೆಗಳನ್ನು ತಮ್ಮ ಹೆರಿಗೆಯ ಮಧ್ಯೆ ಅಂತರವಿರಿಸುವುದಕ್ಕಾಗಿ ಉಪಯೋಗಿಸುವುದನ್ನು ಕಾಣಬಹುದು.

ಆಸ್ಟ್ರೇಲಿಯಾದ ಕೋಲಾ ಎಂಬ ಜಾತಿಯ ಕರಡಿಯು ನೀಲಗಿರಿ ಮರದ ವಿವಿಧ ಪ್ರಭೇದಗಳನ್ನು ಅಗತ್ಯಕ್ಕನುಗುಣವಾಗಿ ಸೇವಿಸುತ್ತದೆ. ಕೆಲವು ಪ್ರಭೇದಗಳು ದೇಹದ ಉಷ್ಣಾಂಶವನ್ನು ಏರಿಸುವಂತಹ ಗುಣವುಳ್ಳ ಎಣ್ಣೆಯನ್ನೂ ಮತ್ತೆ ಕೆಲವು ಉಷ್ಣಾಂಶ ಇಳಿಸುವಂತಹ ಎಣ್ಣೆಯನ್ನೂ ಉಳ್ಳಂಥವು.

ಕೆಲವು ಪ್ರಾಣಿಗಳು ಮನಸ್ಸನ್ನು ಉದ್ರೇಕಗೊಳಿಸುವ ಗಿಡಮೂಲಿಕೆಗಳನ್ನೂ ಬಳಸುತ್ತವೆ. ಮಧ್ಯ ಭಾರತದಲ್ಲಿ ಕಂಡುಬರುವ ಒಂದು ಜಾತಿಯ ಕರಡಿಗಳು ಹಾಗೂ ಆ ಪ್ರದೇಶದ ಆದಿವಾಸಿಗಳು ಮಾಗಿದ ಮಧೂಕ ಪುಷ್ಪಗಳನ್ನು ತಿಂದು ಉನ್ಮತ್ತಗೊಳ್ಳುತ್ತಾರೆ. ಧ್ರುವಪ್ರದೇಶದ ಉದ್ದ ಕೊಂಬಿನ ರೇನ್ ಡಿಯರ್ ಒಂದು ಬಗೆಯ ಮತ್ತುಕಾರಕವನ್ನುಳ್ಳ

ಆಹಾರವನ್ನು ತಿಂದು ಮತ್ತು ಬರಿಸಿಕೊಳ್ಳುತ್ತದೆ. [illegible] ಪಂಗಡದವರೂ ಗಿಡಮೂಲಿಕೆಗಳ ಕುರಿತಾದ ತಮ್ಮ ತಿಳುವಳಿಕೆ ಪ್ರಾಣಿಗಳಿಂದಲೇ ಬಂತೆಂದು ನಂಬುತ್ತಾರೆ.

ಔಷಧೀಯ ಸಸ್ಯಗಳನ್ನೊಳಗೊಂಡಂತೆ ಬಹೂಪಯೋಗಿ ಸಸ್ಯ ಸಂಪತ್ತನ್ನು ಬೆಳೆಸಿ ಅವುಗಳ ಉತ್ಪನ್ನಗಳನ್ನು ಸಂಸ್ಕರಣಗೊಳಿಸಿ ಮಾರುವುದರಿಂದ ಹಿಂದುಳಿದ ಉಷ್ಣವಲಯದ ರಾಷ್ಟ್ರಗಳಿಗೆ ಅರಣ್ಯ ನಾಶಮಾಡಿ ಗಳಿಸುವ ಸಂಪತ್ತಿಗಿಂತಲೂ ಹೆಚ್ಚಿನ ಆರ್ಥಿಕ ಲಾಭ ಬರಬಲ್ಲದು.

ಇತ್ತೀಚೆಗೆ ಹಿಂದುಳಿದ ರಾಷ್ಟ್ರಗಳ ಜನರಲ್ಲಿಯೂ ತಮ್ಮ ಕಾಡುಗಳು ಅದರಲ್ಲಿರುವ ಸಮೃದ್ಧ ವೈವಿಧ್ಯಮಯ ಸಸ್ಯ-ಪ್ರಾಣಿ ಸಂಕುಲವು ಹಣಕ್ಕಿಂತಲೂ ಮಿಗಿಲಾದ ಬೆಲೆಯುಳ್ಳದ್ದೆಂದೂ ಹಾಗೂ ಕಾಲಕ್ರಮದಲ್ಲಿ ಅವು ಹಣದೊಂದಿಗೆ ಇತರ ಅನೇಕ ರೀತಿಯ ಲಾಭವನ್ನೂ ತರಬಲ್ಲವೆಂಬ ಸತ್ಯ ಹೆಚ್ಚು-ಹೆಚ್ಚಾಗಿ ಅರಿವಿಗೆ ಬರುತ್ತಿದೆ.

ಔಷಧವಾಗಿ ಉಪಯೋಗಿಸಲ್ಪಡಬಹುದಾದ ಸಸ್ಯಜನ್ಯ ರಾಸಾಯನಿಕಗಳ ಸಂಖ್ಯೆ ನಾವು ದಿಗ್‌ಭ್ರಮೆಗೊಳ್ಳುವಷ್ಟು ಹೇರಳವಾಗಿದೆ. ಈ ದಿಸೆಯಲ್ಲಿ ಪ್ರಾಣಿಗಳು ನಮಗೆ ಮಾರ್ಗದರ್ಶಕವಾಗಬಲ್ಲವು. ಹೀಗಿರುವಾಗ ಜೀವರಕ್ಷಣೆ ಮಾಡುವಂತಹ ತಲೆ-ತಲಾಂತರದ ಪ್ರಾಣಿಗಳ ಅನುಭವಜನ್ಯವಾದ ಈ ಜ್ಞಾನವನ್ನು ಕಳೆದುಕೊಂಡರೆ ಅದು ಮನುಕುಲದ ದುರಂತವೇ ಸರಿ.

(ಸಿಸ್ಟೋಸೋಮಿಯ ಎನ್ನುವುದು ತ್ರಿಕೋನಾಕೃತಿಯ ಒಂದು ಪರೋಪಜೀವಿ ಜಂತು ಹುಳು. ಅದರಿಂದ ಉಂಟಾಗುವ ಕಾಯಿಲೆ ಸಿಸ್ಟೋಸೋಮಿಯಾಸಿಸ್) ★




"ವೆರಿಗುಡ್.. ಪರ್ವಾಗಿಲ್ಲಾರೀ.. ನೀವು ನಿನ್ನೆಗಿಂತ ಇವತ್ತು ೫೬೦ ಗ್ರಾಂ ಜಾಸ್ತಿ ಕೆಲಸ ಮಾಡಿದ್ದೀರೀ.."

## ನೆನಪು ನೆರಳಿನಲ್ಲಿ

ನನಗಾಗ ೧೦ ವರ್ಷ ವಯಸ್ಸು. ೧೯೪೫-೪೬ನೇ ಇಸವಿ. ಬೆಂಗಳೂರಿನಲ್ಲಿ ಹಿಂದೂ-ಮುಸ್ಲಿಮ್ ಗಲಾಟೆ. ಎಲ್ಲಿ ನೋಡಿದರೂ ಹಿಂಸಾಚಾರ. ಜನರ ಹಾಹಾಕಾರ. ಆಚೀಚೆ ಓಡಾಡಲು ಭಯ. ಅದರಲ್ಲೂ ದಿಢೀರನೆ ಕರ್ಫ್ಯೂ ಜಾರಿಯಾದುದರಿಂದ ಜನಜೀವನ ಅಸ್ತವ್ಯಸ್ತವಾಗಿತ್ತು. ನಮ್ಮ ತಂದೆ ಮೆಜೆಸ್ಟಿಕ್ ಹತ್ತಿರ ಕೆಲಸಕ್ಕೆ ಹೋಗುತ್ತಿದ್ದರು. ಈ ಗಲಾಟೆಯ ಸಮಯದಲ್ಲಿ ಕೆಲಸಕ್ಕೆ ಹೋದವರು ಎರಡು ದಿನವಾದರೂ ಮನೆಗೆ ಬರಲೇ ಇಲ್ಲ. ಮನೆಯಲ್ಲಿ ಹೆಂಗಸರು ನಾವು, ಅಮ್ಮ ಅಜ್ಜಿ ಭಯದಿಂದ ತತ್ತರಿಸಿ ಹೋಗಿದ್ದೆವು. "ಸದ್ಯಕ್ಕೆ ಗಲಾಟೆ ನಿಂತಿದೆ. ನಾನು ಅಪ್ಪನನ್ನು ಕರೆದುಕೊಂಡು ಬರುತ್ತೇನೆ," ಎಂದು ನಾನಾಗ ಅಮ್ಮನಿಗೆ ಹೇಳಿ ಆಕೆಯನ್ನು ಒಪ್ಪಿಸಿಹೋದೆ. ಅಪ್ಪ ಸಿಕ್ಕಿದರು. ಅಪ್ಪನ ಕೈಹಿಡಿದು ಖುಷಿಯಾಗಿ ಮನೆಗೆ ಬರುತ್ತಿದ್ದೆವು. ಅಕ್ಕಿಪೇಟೆಯ ಬಳಿ ಬರುತ್ತಲೇ ಸುತ್ತಲೂ ಜೋರಾಗಿ ಕೂಗಾಟ ಕೇಳಿಬಂತು. ಜನರು ಹೆದರಿ ಓಡೋಡಿ ಬರತೊಡಗಿದರು. ಎಲ್ಲರೂ ಅಂಗಡಿ, ಮನೆ ಬಾಗಿಲು ಹಾಕಿಕೊಳ್ಳತೊಡಗಿದರು. ನಾನಂತೂ ಹೆದರಿಕೆಯಿಂದ ಅಪ್ಪನ ಕೈಯನ್ನು ಬಿಗಿಯಾಗಿ ಹಿಡಿದು ಓಡತೊಡಗಿದೆ. ಆಗ ಕ್ಷಣದಲ್ಲಿ ಒಂದು ಮನೆಯಿಂದ ಒಬ್ಬ ಹೆಂಗಸು ನಮ್ಮಿಬ್ಬರನ್ನೂ ಎಳೆದುಕೊಂಡು ಬಾಗಿಲು ಹಾಕಿದಳು. ನಾನು ನಡುಗುತ್ತಾ ನಿಂತಿದ್ದೆ. ಆ ಮನೆಯ ಮುಂದೆ ಜನರ ಗದ್ದಲ-ಚೀತ್ಕಾರ ಕೇಳಲು ಭಯವಾಗುತ್ತಿತ್ತು. ಮತ್ತೆ ಎರಡು ದಿನ ಕರ್ಫ್ಯೂ ಮುಂದುವರೆಯಿತು. ಆ ತಾಯಿ ನಮ್ಮನ್ನು ಎರಡು ದಿನ ತಮ್ಮಲ್ಲಿಯೇ ಇಟ್ಟುಕೊಂಡು ಗಲಾಟೆ ಸ್ವಲ್ಪ ಕಡಿಮೆಯಾದಾಗ ನಮ್ಮನ್ನು ಮನೆಗೆ ಕಳುಹಿಸಿದಳು. ಆ ವೇಳೆಗೆ ಮನೆಯಲ್ಲಿ, 'ಮಗುವನ್ನು ಅನ್ಯಾಯವಾಗಿ ಕಳುಹಿಸಿದೆವು. ಎಲ್ಲಿ ಸಿಕ್ಕಿಹಾಕಿಕೊಂಡಿತೋ ಏನೋ' ಎಂದು ಕಂಗಾಲಾಗಿ ಊಟ-ನಿದ್ದೆ ಬಿಟ್ಟು ನಮಗಾಗಿ ಕಾಯುತ್ತಿದ್ದರು. ನಮ್ಮನ್ನು ನೋಡುತ್ತಲೇ ಅವರಿಗೆ ಹೋದ ಜೀವ ಬಂದಂತಾಯಿತು. ನಮಗೆ ಪುನರ್ಜನ್ಮವನ್ನು ಕೊಟ್ಟ ಆ ತಾಯಿಯನ್ನು ಇಂದಿಗೂ ನೆನೆಯುತ್ತೇನೆ.

● ಕೆ.ವಿ. ಲಕ್ಷ್ಮಿ

ಇದು ಪ್ರಾಯಶಃ ಮೂವತ್ತು ನಲವತ್ತು ವರ್ಷಗಳ ಹಿಂದಿನ ಮಾತು. ನಾನಾಗ ಒಂದು ಹೋಬಳಿಯ ಶೇಕದಾರನಾಗಿದ್ದೆ. ಶೇಕದಾರನ ಪ್ರಥಮ ಕರ್ತವ್ಯ ಕಂದಾಯ ಹಾಗೂ ಸಾಲ ವಸೂಲಿ. ಪಟೇಲರು, ಶಾನುಭೋಗರು ಇವರ ಕೈಲಿ ಆಗಲಾರದ ಸಂದರ್ಭಗಳಲ್ಲಿ, ಶೇಕದಾರರು ಹೋಗಬೇಕಾಗುತ್ತಿತ್ತು. ಅಂತಹ ಒಂದು ಸನ್ನಿವೇಶದಲ್ಲಿ ಒಂದು ಹಳ್ಳಿಗೆ ಹೋಗಬೇಕಾಗಿತ್ತು. ಆಗ ಶೇಕದಾರರಿಗೆ ಇಬ್ಬರು ಜವಾನರಿರುತ್ತಿದ್ದರು. ಇಬ್ಬರನ್ನೂ ಕರೆದುಕೊಂಡು ಸೈಕಲ್ ಮೇಲೆ ಆ ಹಳ್ಳಿಗೆ ಹೋದೆ. ನಾನು ಹೋಗುವುದು ಗೊತ್ತಿದ್ದರಿಂದ ಅಲ್ಲಿ ಶಾನುಭೋಗರು, ಪಟೇಲರು, ಕುಳವಾಡಿ, ತಳವಾರ ಹೀಗೆ ವಸೂಲಿ ಸಿಬ್ಬಂದಿ ಪೂರಾ ಇತ್ತು. ಜನಗಳೂ ಜಮಾಯಿಸಿದ್ದರು. ನಮ್ಮ ಅದೃಷ್ಟವೋ ಎಂಬಂತೆ ತಕರಾರು ಮಾಡಿದ್ದ ಕುಳವೇ ಮೊದಲು ಕಂದಾಯ ಪಾವತಿಮಾಡಿ ಕುಳಿತುಬಿಟ್ಟ. ಅವನೇ ಕೊಟ್ಟ ಮೇಲೆ ಬೇರೆಯವರೂ ಸಲೀಸಾಗಿ ಕೊಡಲು ಮುಂದೆ ಬಂದರು. ಅಲ್ಲಿ ಹೋಗಿ ಎರಡು ಮೂರು ಗಂಟೆಗಳಾದರೂ ಊಟ-ತಿಂಡಿಯ ವ್ಯವಸ್ಥೆ ಇದ್ದಂತೆ ಕಾಣಲಿಲ್ಲ. ಈ ಮಧ್ಯೆ ಶಾನುಭೋಗರ ಮನೆಗೆ ನೆಂಟರು ಬಂದಿರುವ ಸಮಾಚಾರ ಬಂದು ಅವರು ಹಿಂದಿರುಗಿದರು. ಹೊಟ್ಟೆ ಚುರುಗುಟ್ಟಲು ಪ್ರಾರಂಭವಾಯಿತು. ಅಷ್ಟು ದೂರದಲ್ಲಿ ಒಂದು ತೋಟ್ಟಿಮನೆ. ಅಲ್ಲಿ ಒಬ್ಬಾಕೆ ಹಾಲು ಕೊಡುತ್ತಿದ್ದುದು ನನ್ನ ಗಮನಕ್ಕೆ ಬಂತು. ಬಹಿರ್ದೆಶೆಗೆ ಹೋಗುವ ನೆವ ಹೂಡಿ ನಾನು ಆ ಮನೆಗೆ ಹೋಗಿ, "ಅಮ್ಮ ಅರ್ಧಪಾವು ಹಾಲು ಕೊಡೀಮ್ಮ ಸಾಧ್ಯವಾದರೆ ಬಿಸಿ ಇರಲಿ, ಇದ್ದರೆ ಸಕ್ಕರೆಯನ್ನೋ ಬೆಲ್ಲವನ್ನೋ

ಹಾಕಿಕೊಡ್ತೀರಾ?" ಅಂತ ಕೇಳಿದೆ. ತಲೆಯಲ್ಲಾಡಿಸಿ ಆಕೆ ಒಳಕ್ಕೆ ಹೋದಳು. ನಾನು ಅಲ್ಲಿಯೇ ನಿಂತೆ. ಐದು ನಿಮಿಷವಾಯ್ತು, ಹತ್ತೂ ಆಯಿತು. ಕಾಲು ಘಂಟೆಯಾದರೂ ಯಾರೂ ಬರಲಿಲ್ಲ. ವಾಪಸು ಹೊರಟೆ. ಆಗ ಆಕೆ ಕೈಯಲ್ಲಿ ಏನನ್ನೋ ಹಿಡಿದುಕೊಂಡು ಅನುಮಾನಿಸುತ್ತ ನನ್ನ ಕಡೆ ಬಂದಳು. ಅವಳ ಕೈಯಲ್ಲಿ ಒಂದು ತಟ್ಟೆ. ಅದರಲ್ಲಿ ಎರಡು ರೊಟ್ಟಿ, ಬೆಣ್ಣೆ ಹಾಗೂ ಚಟ್ನಿ! ಅನುಮಾನಿಸಿಕೊಂಡೇ ನನ್ನ ಮುಂದೆ ಹಿಡಿದಳು. ಆಕೆಯ ಆಗಿನ ಮುಖದಲ್ಲಿ ನನ್ನ ತಾಯಿಯನ್ನು ಕಂಡಂತಾಯಿತು. ಎರಡೂ ಕೈಗಳಿಂದ ಅದನ್ನು ತೆಗೆದುಕೊಂಡು ಅಲ್ಲೇ ಕೂತೆ. ಒಂದು ಚೂರೂ ಬಿಡದ ಹಾಗೆ ತಿಂದೆ. ಬಹಳ ರುಚಿಯಾಗಿತ್ತು. ಹಿತವಾಗಿತ್ತು.

. ಆ ವೇಳೆಗೆ ಒಂದು ಲೋಟ ನೀರೂ ಬಂತು. ಅದರೊಟ್ಟಿಗೆ ಒಂದು ದೊಡ್ಡ ಲೋಟದಲ್ಲಿ ಬಿಸಿಹಾಲು. ಎರಡು ಚಮಚ ಸಕ್ಕರೆಯನ್ನು ನನ್ನ ಮುಂದೆಯೇ ಹಾಕಿದಳು. ಅದನ್ನೂ ಕುಡಿದೆ. ಹೊಟ್ಟೆ ತುಂಬಿದ್ದರಿಂದ ತೇಗೂ ಬಂತು. ಎದ್ದು ನಿಂತೆ. ಆಕೆಯೂ ಅಷ್ಟು ದೂರದಲ್ಲಿ ನಿಂತಿದ್ದಳು. ನನಗೆ ಒಂದು ರೀತಿಯ ಗೊಂದಲ ಆದರೂ ಜೇಬಿನಿಂದ ದುಡ್ಡುತೆಗೆದು, "ಎಷ್ಟಮ್ಮ?" ಎಂದು ಕೇಳಿದೆ. ನನ್ನ ಮನಸ್ಸಿನಲ್ಲಿದ್ದದ್ದು ಹಾಲಿನ ಬೆಲೆ ಮಾತ್ರ. ಆಕೆ, "ಯಲ್ಲಾರೂ ಉಂಟ? ಓಗಪ್ಪ" ಅಂದಳು. ಬರುವಾಗ, ಆಕೆಯ ಕಾಲು ಮುಟ್ಟಿ ನಮಸ್ಕಾರ ಮಾಡಿ "ನಿಮಗೆ ತೊಂದರೆಯಾಯಿತು ತಾಯಿ," ಅಂದೆ.

● ಕೆ.ಜಿ. ಶ್ರೀಕಂಠಯ್ಯ

**ಸು**ಮಾರು ೧೪ ವರ್ಷಗಳ ಹಿಂದಿನ ಘಟನೆ. ಅಂದು ಬೆಳಿಗ್ಗೆ ಸುಮಾರು ೭-೩೦ರ ಸಮಯ ಸ್ನಾನ ಮಾಡಿ, ಮಡಿಯುಟ್ಟು ಮೇಲು ವಸ್ತ್ರವನ್ನು ಧರಿಸಿ ನನ್ನ ಸ್ಕೂಟರಿನ ಮೇಲೆ ಮನೆಯಿಂದ ಹೊರಟೆ. ಯೋಚನಾ ಕ್ರಾಂತನಾಗಿ ಹೀಗೇ ಸ್ವಲ್ಪ ದೂರ ಹೋದನಂತರ ಬಲಕ್ಕೆ ಹೊರಳುತ್ತಿದ್ದಂತೆ, ನನ್ನೆದುರಿಗೆ ಭೂತಾಕಾರದ ಬಿ.ಟಿ.ಎಸ್. ಬಸ್ಸೊಂದು ತಟಕ್ಕನೆ ಬ್ರೇಕ್ ಹಾಕಿ, ಕೇವಲ ಒಂದಡಿ ಅಂತರದಲ್ಲಿ ಬಂದು ನಿಲ್ಲಲು, ನಾನೂ ಗಾಬರಿಯಾಗಿ ಬ್ರೇಕ್ ಹಾಕಿ ಸ್ಕೂಟರನ್ನು ನಿಲ್ಲಿಸಿದೆ. ಯೋಚನಾಲಹರಿಯಿಂದ ಎಚ್ಚೆತ್ತು ಗಾಬರಿಯಿಂದ ಮೇಲೆ ನೋಡಲು ಬಸ್ಸಿನ ಡ್ರೈವರ್ ಮತ್ತು ಕಂಡಕ್ಟರ್ ಇಬ್ಬರೂ ಸಿಕ್ಕಾಪಟ್ಟೆ ಏಕವಚನದಲ್ಲಿ ನನ್ನನ್ನುದ್ದೇಶಿಸಿ ಅರಚಲು ಶುರು ಮಾಡಿದ್ದಾರೆ. ನನಗೆ ಕೇಳಿಸಿದ್ದು: "ಕಣ್ಣಿಲ್ಲವೇನೋ? ಬುದ್ಧಿ ನೆಟ್ಟಗಿದೆಯೇ? ನಿನ್ನ ಪ್ರಾಣಕ್ಕೆ ಬೆಲೆ ಇಲ್ಲವೇನೋ?" ಇತ್ಯಾದಿ. ಸ್ಕೂಟರಿನಿಂದ ಕೆಳಗಿಳಿದು, "ಅಪ್ಪಾ, ತಪ್ಪಾಯಿತು. ಕ್ಷಮಿಸಪ್ಪ. ಕೇವಲ ಏಳು ತಿಂಗಳ ಹಿಂದೆ ನನ್ನ ತಂದೆ ತೀರಿಕೊಂಡರು. ನನ್ನ ತಾಯಿ ನಿನ್ನೆ ತೀರಿಕೊಂಡರು. ಇಂದು ನಾನು ಕರ್ಮಕಾರ್ಯಕ್ಕಾಗಿ ಮತ್ತು ಅಸ್ತಿ ತರಲು ಕ್ರಿಮಟೋರಿಯಂಗೆ ಹೋಗುತ್ತಿದ್ದೇನೆ. ಒಬ್ಬನೇ ಮಗನಾದ ನನ್ನ ಮೇಲೆ ನನ್ನ ತಾಯಿಗಿದ್ದ ಅಕ್ಕರೆ ಅಷ್ಟಿಷ್ಟಲ್ಲ. ಈ ಯೋಚನೆಗಳೇ ನನ್ನ ಮನಸ್ಸಿನಲ್ಲಿದ್ದಿದ್ದರಿಂದ ಹೀಗಾಯಿತು. ದಯವಿಟ್ಟು ನನ್ನನ್ನು ಕ್ಷಮಿಸಿ," ಎಂದು ಹೇಳುತ್ತಿರುವಾಗಲೇ, ನನಗೆ ಅರಿವಿಲ್ಲದೆಯೇ ಕಣ್ಣುಗಳಲ್ಲಿ ನೀರೂರಿತು. ಕೆಲವೇ ಕ್ಷಣಗಳಲ್ಲಿ, ಡ್ರೈವರ್, ಕಂಡಕ್ಟರ್ ಮತ್ತು ಹಲವಾರು, ಪ್ರಯಾಣಿಕರು ಸಹ ಬಸ್ಸಿನಿಂದ ಕೆಳಗಿಳಿದು, ನನ್ನಲ್ಲಿಗೆ ಬಂದು, ಆತ್ಮೀಯತೆಯಿಂದ ದುಃಖ ವಿಚಾರಿಸಿ, ನನ್ನ ಕ್ಷಮಾಪಣೆಯನ್ನು ಕೇಳಿದಾಗ ಚಿಕ್ಕ ಮಗುವಿನಂತೆ ಬಿಕ್ಕಿ ಬಿಕ್ಕಿ ಅತ್ತೆ, ಆಗ ನನ್ನ ವಯಸ್ಸು ೫೪.

ಈ ಘಟನೆ ನಡೆದು ಎಷ್ಟೋ ವರ್ಷಗಳಾಗಿವೆ. ಆದರೂ ನನ್ನ ತಾಯಿಯ ತಿಥಿ ಬಂದಾಗಲೆಲ್ಲ ಈ ಪ್ರಸಂಗ ನೆನಪಿಗೆ ಬರುತ್ತದೆ.

● ಎ.ಎಸ್.ವಿ. ರಂಗನ್

# ಸೇಡು

ಮೂಲ:

ಸರ್ ಆರ್ಥರ್ ಕಾನನ್ ಡೈಲ್ ಅವರ

'ದಿ ಕೇಸ್ ಆಫ್ ಲೇಡಿ ಸನಾಕ್ಸ್'

ಕನ್ನಡಕ್ಕೆ:

ಎಚ್.ಆರ್. ಚಂದ್ರವದನರಾವ್

> "ಇಲ್ಲಾ ಸಾರ್, ಗಾಯ ಚಿಕ್ಕದೆಂದು ಕಡೆಗಣಿಸಬೇಡಿ. ತಮಗೆ ಗೊತ್ತಿಲ್ಲ. ಇದು ಘೋರ ವಿಷ. ನನ್ನ ಮಾತು ಕೇಳಿ. ಆಪರೇಷನ್ ಬೇಕೇ ಬೇಕು. ನಿಧಾನಿಸಿದರೆ ಅವಳ ಪ್ರಾಣಕ್ಕೇ ಕುತ್ತು, ದಯಮಾಡಿ ತುಟಿ ಕತ್ತರಿಸಿ ಅವಳನ್ನು ಬದುಕಿಸಿ" ಎಂದಾತ ಗೋಗರೆದ.

ಡಗ್ಲಾಸ್ ಸ್ಟೋನ್ ಮತ್ತು ಲೇಡಿ ಸನಾಕ್ಸ್‌ರ ಸಂಬಂಧದ ಬಗ್ಗೆ ಮೇಲ್ಸ್ತರಗತಿಯ ಸಮಾಜಕ್ಕೆ ಹಾಗೂ ವೈಜ್ಞಾನಿಕ ಮಂಡಳಿಯ ಎಲ್ಲಾ ಸದಸ್ಯರಿಗೆ ಆಗಲೆ ಗೊತ್ತಾಗಿತ್ತು. ಲೇಡಿ ಸನಾಕ್ಸ್ ಇನ್ನು ಮೇಲೆ ಯಾವಾಗಲೂ ಬುರ್ಖಾ ಧರಿಸುತ್ತಾಳೆ; ಹೀಗಾಗಿ ಇನ್ನು ಮೇಲೆ ಯಾರಿಗೂ ಅವಳ ಮುಖ ನೋಡಲು ಸಾಧ್ಯವಿಲ್ಲ ಎಂಬ ಸುದ್ದಿ, ಈ ಸುದ್ದಿಯ ಹಿಂದೆಯೇ ಶಸ್ತ್ರವೈದ್ಯ ಡಗ್ಲಾಸ್ ಅಂದು ಬೆಳಿಗ್ಗೆ ತನ್ನ ಎರಡೂ ಕಾಲುಗಳನ್ನು ಚಲ್ಲಣದ ಒಂದೇ ಬಗಲಿಗೆ ಹಾಕಿ, ಮಂಚದ ತುದಿಯಲ್ಲಿ ಕುಳಿತು ಶೂನ್ಯ ದೃಷ್ಟಿ ಬೀರುತ್ತಾ ನಗುತ್ತಿದ್ದನೆಂದು ಅವನ ಆಳು ಹೇಳಿದ ಸುದ್ದಿ ಸ್ಥಳೀಯ ಪತ್ರಿಕೆಗಳಲ್ಲಿ ಪ್ರಕಟವಾಗಿತ್ತು. ಏಕೆ ಹೀಗಾಯಿತು ಎಂದು ತಿಳಿಯಲು ಜನರಿಗೆ ಸಹಜವಾಗಿಯೆ ಭಾರಿ ಕುತೂಹಲ.

ಡಗ್ಲಾಸ್ ಸ್ಟೋನ್ ಇಂಗ್ಲೆಂಡಿನ ಮಧ್ಯಪ್ರಾಯದ ಪ್ರಸಿದ್ಧ ಪುರುಷರಲ್ಲೊಬ್ಬ. ಈ ಘಟನೆ ಸಂಭವಿಸಿದಾಗ ವೃತ್ತಿಯಲ್ಲಿ ಯಶಸ್ಸಿನ ಶಿಖರವನ್ನೇರುತ್ತಿದ್ದ. ಆಗ ಅವನ ವಯಸ್ಸು ಕೇವಲ ಮೂವತ್ತೊಂಭತ್ತು. ಅಸಾಮಾನ್ಯ ಶಸ್ತ್ರಚಿಕಿತ್ಸಕನೆಂದು ಖ್ಯಾತಿ ಗಳಿಸಿದ್ದ. ತನ್ನ ಧೈರ್ಯ, ನಿರ್ಧಾರ ಕುಶಲತೆಗಳಿಂದ ಅನೇಕ ರೋಗಿಗಳ ಜೀವ ಉಳಿಸಿದ್ದ. ಆತ ಬೇರೆ ಯಾವ ಉದ್ಯೋಗವನ್ನಾರಿಸಿಕೊಂಡಿದ್ದರೂ ಇನ್ನಷ್ಟು ಶೀಘ್ರದಲ್ಲಿ ಹೆಸರು ಮಾಡಬಹುದಾಗಿತ್ತು. ಎಂಬುದು ಅವನನ್ನು ಬಲ್ಲವರ ಅಭಿಪ್ರಾಯ.

ಆದರೆ ಡಗ್ಲಾಸ್ ಸದ್ಗುಣ ಸಂಪನ್ನನೇನೂ ಅಲ್ಲ. ತಾನೊಬ್ಬ ಶ್ರೇಷ್ಠ ಶಸ್ತ್ರವೈದ್ಯ. ತನ್ನನ್ನು ಮೀರಿಸುವವರು ಯಾರೂ ಇಲ್ಲ ಎನ್ನುವ ಸೊಕ್ಕು ಅವನಲ್ಲಿ. ಜೊತೆಗೆ, ಪಂಚೇಂದ್ರಿಯಗಳಿಗೆ ಸುಖ ತರುವ ಎಲ್ಲಾ ವಸ್ತುಗಳನ್ನು ತನ್ನದಾಸಿಕೊಳ್ಳಬೇಕೆಂಬ ಲೋಭ. ಹೆಸರಾಂತ ಕಲಾವಿದರ ತೈಲಚಿತ್ರಗಳು, ಪುರಾತನ ಕಾಲದ ಪಿಂಗಾಣಿ ಪಾತ್ರೆಗಳು, ಪೀಠೋಪಕರಣಗಳು, ಸುಗಂಧ ದ್ರವ್ಯಗಳು, ಪ್ರಾಚೀನ ವಸ್ತುಗಳು ಇವುಗಳನ್ನು ಶೇಖರಿಸುವ ಹವ್ಯಾಸದಿಂದಾಗಿ ಯಾವಾಗಲೂ ಮಿತಿ ಮೀರಿದ ಖರ್ಚು. ಲಂಡನ್ನಿನಲ್ಲಿ ಹೆಚ್ಚು ಆದಾಯವಿರುವ ವೈದ್ಯರ ಪಟ್ಟಿಯಲ್ಲಿ ಅವನ ಹೆಸರು ಮೂರನೆಯದು. ಹಾಗಿದ್ದೂ ಅವನಿಗೆ ಹಣದ ತಾಪತ್ರಯ. ನಡೆಸುತ್ತಿದ್ದ ಭೋಗ ಜೀವನಕ್ಕೆ ಅವನ ಆದಾಯ ಸಾಕಾಗುತ್ತಿರಲಿಲ್ಲ.

ಹೀಗಿರುವಾಗ ಡಗ್ಲಾಸ್ ಒಂದು ಬಾರಿ ಲೇಡಿ ಸನಾಕ್ಸ್‌ಳನ್ನು ಕಂಡ. ಕಂಡೊಡನೆಯೆ ಆಕೆಯಲ್ಲಿ ಅನುರಕ್ತನಾದ. ಹೌದು, ಆಕೆ ಲಂಡನ್ನಿನಲ್ಲೇ ಅತಿ ಚೆಲುವೆ. ಡಗ್ಲಾಸ್‌ನೂ ಸ್ಫುರದ್ರೂಪಿ. ಹೀಗಾಗಿ ಅವನ ಪ್ರೇಮದ ಕರೆಗೆ ಲೇಡಿ ಸನಾಕ್ಸ್ ಓಗೊಟ್ಟಿದ್ದು ಸ್ವಾಭಾವಿಕವೇ ಆಗಿತ್ತು. ಆದರೆ ಸನಾಕ್ಸ್‌ಳ ಮನೋಭಾವವೇ ಬೇರೆ. ಆಕೆಗೆ ಅವನೊಬ್ಬನೇ ಅಲ್ಲ; ಬೇರೆ

ಬೇರೆ ವ್ಯಕ್ತಿಗಳಿಂದ ಹೊಸ ಹೊಸ ಅನುಭವ ಪಡೆಯಬೇಕೆಂಬ ಖಯಾಲಿ. ಇದಕ್ಕೇ ಇರಬೇಕು, ಆಕೆಯ ಪತಿ ಲಾರ್ಡ್ ಸನಾಕ್ಸ್ ಮೂವತ್ತಾರು ವರ್ಷದವನಾದರೂ ಐವತ್ತು ದಾಟಿದವನಂತೆ ಕಾಣುತ್ತಾನೆ. ತಲೆ ಬೋಳಾಗುತ್ತಿದೆ. ಮುಖದಲ್ಲಿ ಗೆಲುವಿನ ಕಳೆ ಸುತರಾಂ ಇಲ್ಲ.

ಯೌವನದಲ್ಲಿ ಸನಾಕ್ಸ್‌ಗೆ ನಾಟಕದಲ್ಲಿ ನಟಿಸುವ ಹುಚ್ಚಿತ್ತು. ಅವನಿಗೆ ತನ್ನದೇ ಆದ ಒಂದು ನಾಟಕ ಗೃಹವೂ ಇತ್ತು. ಈಗ ಅದನ್ನು ಬಾಡಿಗೆಗೆ ಕೊಟ್ಟಿದ್ದಾನೆ. ನಾಟಕದಲ್ಲಿ ಮಿಸ್ ಮೇರಿಯನ್ ಡಾಸನ್ ಒಬ್ಬ ಅಪ್ರತಿಮ ಚೆಲುವೆ. ಅವಳನ್ನು ಮದುವೆಯಾಗಿ ತನ್ನ ಬಿರುದು ಮತ್ತು ಮೂರನೇ ಒಂದು ಭಾಗ ಆಸ್ತಿಯನ್ನೂ ಡಗ್ಲಾಸ್ ಅವಳಿಗೆ ಅರ್ಪಿಸಿದ್ದ. ಮದುವೆಯಾದ ನಂತರ ಅವನಿಗೆ ಪಾತ್ರವಹಿಸುವ ಚಟ ಹೋಯಿತು. ಖಾಸಗಿಯವರು ಆಡುವ ನಾಟಕದಲ್ಲಿ ನಟಿಸಲು ಅವನಿಗೆ ಇಷ್ಟವಿರಲಿಲ್ಲ. ಈಗ ಅವನಿಗಿರುವ ಹವ್ಯಾಸವೆಂದರೆ ತೋಟಗಾರಿಕೆ. ತೋಟದಲ್ಲಿ ಗಿಡಗಳಿಗೆ ನೀರು ಹಾಕುತ್ತಲೋ, ಕಳೆ ಕೀಳುತ್ತಲೋ ಕಾಲ ಕಳೆಯುತ್ತಾನೆ. ಹಾಗಾದರೆ ಹೆಂಡತಿಯ ಬಗ್ಗೆ ಎದ್ದಿರುವ ಗುಲ್ಲು ಅವನಿಗೆ ತಿಳಿದಿಲ್ಲವೆ? ಅಥವಾ ಅವಳ ನಡತೆ ಹೇಗಿದೆಯೆನ್ನುವುದು ಗೊತ್ತಿದ್ದೂ ಗೊತ್ತಿಲ್ಲದಂತೆ ನಟಿಸುತ್ತಿದ್ದಾನೆಯೆ? ಕ್ಲಬ್‌ಗಳಲ್ಲಿ ಇವರ ಬಗ್ಗೆ ಜನ ಮಾತನಾಡಿಕೊಳ್ಳುತ್ತಿದ್ದರು. ಆದರೆ ಲಾರ್ಡ್ ಸನಾಕ್ಸ್ ಮಿತಭಾಷಿ, ಪ್ರಶಾಂತ ಸ್ವಭಾವದವ. ಯಾವುದನ್ನೂ ತಲೆಗೆ ಹಚ್ಚಿಕೊಳ್ಳದ ಮನೋಭಾವ.

ಡಗ್ಲಾಸ್ ಸ್ಟೋನ್ ಲೇಡಿ ಸನಾಕ್ಸ್‌ಳನ್ನು ಪ್ರೀತಿಸುವ ವಿಷಯ ಎಲ್ಲರಿಗೂ ಗೊತ್ತು. ಈ ಅನೈತಿಕ ಸಂಬಂಧವನ್ನು ಗುಟ್ಟಾಗಿರಿಸಬೇಕೆಂದು ಅವನು ಯೋಚಿಸಿದ್ದೇ ಇಲ್ಲ. ಬದಲು, ಬಹಿರಂಗವಾಗಿ ಯಾರಿಗೂ ಹೆದರುವ ಅವಶ್ಯಕತೆ ಇಲ್ಲವೆಂಬಂತೆ ವರ್ತಿಸಿದ. ಇವರ ಪ್ರೇಮದಾಟದ ಬಗ್ಗೆ ಎಲ್ಲೆಲ್ಲೂ ಸುದ್ದಿ. ಇಂಥವನ್ನು ಇರಿಸಿಕೊಳ್ಳುವುದು ಕಳಂಕವೆಂದು ಭಾವಿಸಿದ ಒಂದು ಸಂಸ್ಥೆ ಆತನನ್ನು ಉಪಾಧ್ಯಕ್ಷ ಸ್ಥಾನದಿಂದ ಕಿತ್ತುಹಾಕಿತು. ವೃತ್ತಿಬಾಂಧವರು ಸ್ಟೋನ್ ಬಳಿ ಒಂದು ಇಂತಹ ನಾಚಿಕೆಗೇಡು ಪ್ರಸಂಗಗಳನ್ನು ನಿಲ್ಲಿಸಬೇಕೆಂದು ಬುದ್ಧಿವಾದ ಹೇಳಿದರು. ಆದರೆ ಸ್ಟೋನ್ ಅವರ ಮಾತಿಗೆ ಕಿವಿಗೊಟ್ಟರೆ ತಾನೆ? ಬದಲು ನಲವತ್ತು ಗಿನಿ ಕೊಟ್ಟು ಬಂದು ಬಳೆ ಕೊಂಡು, ತನ್ನ ಪ್ರೇಯಸಿಯನ್ನು ನೋಡಲು ಹೊರಟ. ಪ್ರತಿ ಸಂಜೆ ಸ್ಟೋನ್ ಅವಳ ಮನೆಗೆ ಹೋಗುತ್ತಾನೆ. ಮಧ್ಯಾಹ್ನದ ಹೊತ್ತು ಇವಳು ಅವನ ಗಾಡಿಯಲ್ಲಿ ಊರೆಲ್ಲ ತಿರುಗುತ್ತಾಳೆ.

ಅಂದು ರಾತ್ರಿ ಚಳಿ, ಗಾಳಿ, ತುಂತುರು ಮಳೆ. ಡಗ್ಲಾಸ್ ಊಟ ಮಾಡಿ, ತನ್ನ ವ್ಯಾಸಂಗದ ಕೋಣೆಗೆ ಬಂದು ಕುಳಿತಿದ್ದಾನೆ. ಕುಡಿಯಲು ಮೇಜಿನ ಮೇಲೆ ಗ್ಲಾಸ್ ಮತ್ತು ಮದ್ಯದ ಬಾಟಲಿಯಿದೆ. ಸಹೋದ್ಯೋಗಿಗಳು ಬಹಳವಾಗಿ ಹೆದರಿದ್ದ ಗಂಡಾಂತರದ ಆಪರೇಷನ್ ಒಂದನ್ನು ಮಾಡಿ ಜಯಶೀಲನಾಗಿದ್ದಕ್ಕೆ ಅವನಿಗೆ ಬಹಳ ಖುಷಿಯಾಗಿದೆ. ಅಂತಹ ಆಪರೇಷನ್ ಇಡೀ ಪ್ರಪಂಚದಲ್ಲಿ ನಡೆದಿರುವುದು ಕೇವಲ ಎರಡು ಮಾತ್ರ. ಇನ್ನಾವ ವೈದ್ಯನೂ ಇಂತಹ ಆಪರೇಷನ್ ಮಾಡಲು ಧೈರ್ಯ ಮಾಡುತ್ತಿರಲಿಲ್ಲ.

ಸ್ಟೋನ್ ರಾತ್ರಿ ೮-೩೦ಕ್ಕೆ ಲೇಡಿ ಸನಾಕ್ಸ್‌ಳನ್ನು ನೋಡುವುದಾಗಿ ಮಾತು ಕೊಟ್ಟಿದ್ದ. ಅದನ್ನು ಜ್ಞಾಪಿಸಿಕೊಂಡು ಹೊರಡುವುದಕ್ಕೆ ಸಿದ್ಧನಾಗುತ್ತಿರುವಾಗ ಹೊರಬಾಗಿಲಲ್ಲಿ ಸದ್ದಾಯಿತು. ಬಟ್ಲರ್ ಪಿಮ್ ಬಾಗಿಲನ್ನು ತೆರೆದು, ಬಂದವರನ್ನು ಹೊರ ಕೋಣೆಯಲ್ಲಿ ಕೂರಿಸಿ ಯಾರೋ ಸಲಹೆ ಕೇಳಲು ಬಂದಿದ್ದಾರೆ ಎಂದು ಹೇಳಿದ.

"ರೋಗಿ ಯಾರು? ಬಂದಿರುವವನೇ ರೋಗಿಯೇ?"

"ಅಲ್ಲ, ಆತ ನಿಮ್ಮನ್ನು ತನ್ನ ಮನೆಗೆ ಕರೆದೊಯ್ಯಲು ಬಂದಿದ್ದಾನೆ."

"ನನಗೆ ಈಗ ಎಲ್ಲಿಗೂ ಹೋಗಲು ಸಾಧ್ಯವಿಲ್ಲ."

ಸುವರ್ಣ ತಟ್ಟೆಯಲ್ಲಿ ಬಂದವನ ವಿಸಿಟಿಂಗ್ ಕಾರ್ಡ್ ತಂದಿಟ್ಟ ಬಟ್ಲರ್. ಆ ಸುವರ್ಣದ ತಟ್ಟೆ ಪ್ರಧಾನಿಯ ಪತ್ನಿ ಯಾವುದೋ ಸಂದರ್ಭದಲ್ಲಿ ಡಾಕ್ಟರಿಗೆ ಕೊಟ್ಟ ಕಾಣಿಕೆ. ಕಾರ್ಡ್ ಮೇಲೆ 'ಹಮೀಲ್ ಅಲಿ, ಸ್ಮಿರ್ನ' ಎಂದು ಬರೆದಿತ್ತು.

"ಬಹುಶಃ ತುರ್ಕಸ್ತಾನದವನಿರಬೇಕು" ಅಂದ ಡಗ್ಲಾಸ್ ಸ್ಟೋನ್.

"ಹೌದು ಸರ್, ಬೇರೆ ದೇಶದವನಂತೆ ಕಾಣು ತ್ತಾನೆ," ಎಂದ ಬಟ್ಲರ್.

"ಹಿಮ್, ಅವನನ್ನು ಒಳಗೆ ಕಳುಹಿಸು."

ಬಟ್ಲರ್ ಬಾಗಿಲು ತೆರೆದು ಒಳಗೆ ಒಬ್ಬನನ್ನು ಬಿಟ್ಟ. ಅವನೊಬ್ಬ ಸಣಕಲು ಶರೀರದ ವ್ಯಕ್ತಿ. ಬೆನ್ನು ಬಾಗಿದೆ. ಮುಖವನ್ನು ಮುಂದಕ್ಕೆ ಚಾಚುತ್ತಾ ನಡೆಯುವ ಅವನಿಗೆ ಸಮೀಪ ದೃಷ್ಟಿದೋಷವಿದೆ ಎನ್ನಬಹುದಾಗಿತ್ತು. ಅವನ ತಲೆಗೂದಲು ಮತ್ತು ಗಡ್ಡ ಅಚ್ಚುಕಪ್ಪು. ಮುಖ ಶ್ಯಾಮಲವರ್ಣ. ಒಂದು ಕೈಯಲ್ಲಿ ಬಿಳಿ ಮಸ್ಲಿನ್ ಬಟ್ಟೆಯ ಪೇಟ, ಇನ್ನೊಂದರಲ್ಲಿ ಷಮಾಯ್ ತೊಗಲಿನ ಹಣದ ಚೀಲ.

"ನಮಸ್ಕಾರ, ತಮಗೆ ಇಂಗ್ಲಿಷ್ ಬರುತ್ತದೆಯೇ?" ಕೇಳಿದ ಡಗ್ಲಾಸ್.

"ಹೌದು, ಆದರೆ ಇಂಗ್ಲಿಷನ್ನು ನಿಧಾನವಾಗಿ ಮಾತನಾಡುತ್ತೇನೆ."

"ತಾವು ಬಂದಿದ್ದೇಕೆ?"

"ತಮ್ಮನ್ನು ನಮ್ಮ ಮನೆಗೆ ಕರೆದೊಯ್ಯಲು. ತಾವು ನನ್ನ ಪತ್ನಿಯನ್ನು ಪರೀಕ್ಷಿಸಿ ಕೂಡಲೇ ಆಪರೇಷನ್ ಮಾಡಬೇಕು."

"ಈಗ ನನಗೆ ಕೆಲಸವಿದೆ. ಎಲ್ಲಿಗೋ ಹೋಗಬೇಕು. ಬೆಳಗ್ಗೆ ಬರುತ್ತೇನೆ."

ಆ ತುರ್ಕಿ ಮನುಷ್ಯ ಚೀಲದ ಬಾಯಿಗೆ ಕಟ್ಟಿದ್ದ ದಾರ ಎಳೆದು ಬಿಚ್ಚಿ ಒಳಗಿದ್ದ ಚಿನ್ನದ ನಾಣ್ಯಗಳನ್ನು ಮೇಜಿನ ಮೇಲೆ ಸುರಿದು ಹೇಳಿದ,

"ಡಾಕ್ಟರೇ, ಇಲ್ಲಿ ನೂರು ಪೌಂಡ್ ಇದೆ. ನಿಮ್ಮ ಕೆಲಸ ಒಂದು ಗಂಟೆಗಿಂತ ಹೆಚ್ಚಾಗಲಾರದು. ಗಾಡಿ ತಂದಿದ್ದೇನೆ, ಬನ್ನಿ."

ಡಗ್ಲಾಸ್ ಸ್ಟೋನ್ ಗಡಿಯಾರ ನೋಡಿಕೊಂಡು, 'ಲೇಡಿ ಸನಾಕ್ಸ್ ಭೇಟಿಗೆ ಇದರಿಂದೇನೂ ತೊಂದರೆ ಆಗುವುದಿಲ್ಲ. ಕೊಡುತ್ತಿರುವ ಫೀ ಭಾರಿಯಾದದ್ದೆ. ಸಾಲಗಾರರು ಹಣಕ್ಕೆ ತಗಾದೆ ಮಾಡುತ್ತಿರುವಾಗ ಇಂತಹ ಅವಕಾಶ ಬಿಟ್ಟರೆ ಆಗುತ್ತದೆಯೇ?' ಎಂದು ಮನದಲ್ಲಿ ಅಂದುಕೊಂಡ.

"ನಿಮ್ಮ ಪತ್ನಿಗೆ ಏನಾಗಿದೆ?"

"ಆಲ್ಮೋಹೇಡ್ಸ್ ಚಾಕುಗಳ ಬಗ್ಗೆ ತಮಗೆ ಏನಾದರೂ ಗೊತ್ತೆ?"



"ಇಲ್ಲ."

"ಅವನ್ನು ಪ್ರಾಚೀನ ಕಾಲದಲ್ಲ ಪೌರಸ್ತ್ಯ ದೇಶಗಳಲ್ಲಿ ಮಾಡಲಾಗುತ್ತಿತ್ತು. ಈ ಕಠಾರಿಗಳ ಹಿಡಿ ರಿಕಾಪಿನಂತೆ ಇರುತ್ತದೆ. ಅಲಗು ತುಂಬಾ ಚೂಪಾಗಿರದಿದ್ದರೂ ತುಂಬ ವಿಷಕರವಾದದ್ದು. ನಾನೊಬ್ಬ ಅಪರೂಪ ಪ್ರಾಚೀನ ವಸ್ತುಗಳನ್ನು ಮಾರುವ ವ್ಯಾಪಾರಿ. ಸ್ಮಿರ್ನಾದಿಂದ ಇಂಗ್ಲೆಂಡಿಗೆ ಬಂದಿದ್ದೇನೆ. ಮುಂದಿನ ವಾರ ವಾಪಸ್ಸು ಹೋಗುತ್ತೇನೆ. ಹಲವು ಪದಾರ್ಥಗಳನ್ನು ತಂದಿದ್ದೆ. ಕೆಲವನ್ನು ಮಾರಲಾಗಲಿಲ್ಲ. ಅವುಗಳ ಪೈಕಿ ಈ ಕಠಾರಿಗಳು ಕೂಡ."

"ನನಗೆ ತುರ್ತು ಕೆಲಸವಿದೆ. ಹೇಳೋದನ್ನು ಚಿಕ್ಕದಾಗಿ ಹೇಳಿ."

"ನಾನು ಹೇಳುವುದೆಲ್ಲಾ ತಮ್ಮ ಅರಿವಿಗೆ ಬಂದಿರಬೇಕು. ಇಂದು ನನ್ನ ಪತ್ನಿ ನಾನು ವಸ್ತುಗಳನ್ನು ಸಂಗ್ರಹಿಸಿಟ್ಟಿರುವ ರೂಮಿನಲ್ಲಿ ಮೂರ್ಛೆ ಬಂದು ಬಿದ್ದುಬಿಟ್ಟಳು. ದುರದೃಷ್ಟ! ಅವಳ ತುಟಿ ಆಲ್ಮೋಹೇಡ್ಸ್ ಚಾಕುವಿಗೆ ತಾಕಿ ಕತ್ತರಿಸಿಬಿಟ್ಟಿದೆ."

"ಓ, ಹಾಗೋ? ನಿಮ್ಮ ಹೆಂಡತಿ ಗಾಯಕ್ಕೆ ಬ್ಯಾಂಡೇಜ್ ಕಟ್ಟಬೇಕು?"

"ಅಷ್ಟೇ ಅಲ್ಲ."

"ಇನ್ನೇನು ಮತ್ತೆ?"

"ಆ ಚಾಕು ವಿಷಪೂರಿತವಾದದ್ದು."

"ವಿಷ? ಯಾವ ವಿಷ?"

"ಅದು ಯಾವ ವಿಷ ಎಂದು ಪೌರಸ್ತ್ಯ ದೇಶದವರಿಗಾಗಲಿ, ಪಾಶ್ಚಾತ್ಯ ದೇಶದವರಿಗಾಗಲಿ ಗೊತ್ತಿಲ್ಲ. ಆ ವಿಷಕ್ಕೆ ಮದ್ದೇನು ಎಂಬುದೂ ಗೊತ್ತಿಲ್ಲ. ಆದರೆ ನಮ್ಮಪ್ಪನಿಂದ ಈ ವಿಷಯದ ಬಗ್ಗೆ ಸ್ವಲ್ಪ ತಿಳಿದಿದೆ. ಅವರು ಕೂಡ ಈ ವ್ಯಾಪಾರ ಮಾಡುತ್ತಿದ್ದರು."

"ವಿಷದಿಂದ ಆಗುವ ಪರಿಣಾಮ ಏನು?"

"ಗಾಢ ನಿದ್ರೆ. ಮೂವತ್ತು ಗಂಟೆಗಳಲ್ಲಿ ಸಾವು."

"ವಿಷಕ್ಕೆ ಮದ್ದು ಯಾವುದೂ ಇಲ್ಲ ಎಂದು ಹೇಳುತ್ತೀರಿ. ಇಷ್ಟು ಹಣ ಕೊಟ್ಟು ನನ್ನನ್ನು ಕರೆಯುತ್ತಿರುವುದೇಕೆ?"

"ಔಷಧಿಯಿಂದ ಇದನ್ನು ವಾಸಿ ಮಾಡಲು ಸಾಧ್ಯವಿಲ್ಲದಿದ್ದರೂ, ಕತ್ತಿಯಿಂದ ವಾಸಿ ಮಾಡಲು ಖಂಡಿತ ಸಾಧ್ಯ."

"ಹೇಗೆ?"

"ಗಾಯದಲ್ಲಿರುವ ವಿಷ ಗಂಟೆಗಟ್ಟಲೆ ಅಲ್ಲೇ ಇರುತ್ತದೆ. ವಿಷವನ್ನು ಶರೀರ ನಿಧಾನವಾಗಿ ಹೀರಿ ಕೊಳ್ಳುತ್ತದೆ."

"ಗಾಯವನ್ನು ಚೆನ್ನಾಗಿ ಕ್ರಿಮಿನಾಶಕಗಳಿಂದ ತೊಳೆದರೆ ಆಗುತ್ತದೆಯೇ?"

"ಹಾವಿನ ಕಡಿತವನ್ನು ತೊಳೆದು ರೋಗಿಯನ್ನು ಉಳಿಸಲು ಸಾಧ್ಯವಿಲ್ಲದ ಹಾಗೆ ಕೂಡ."

"ಅಂದರೆ ವಿಷವಿರುವ ಗಾಯವನ್ನು ಕತ್ತರಿಸಿ ತೆಗೆದುಹಾಕಬೇಕು."

"ಹೌದು. ಬೆರಳಲ್ಲಿ ವಿಷ ಸೇರಿದ್ದರೆ ಬೆರಳನ್ನೇ ಕತ್ತರಿಸಿ ಹಾಕಬೇಕು ಎಂದು ನಮ್ಮ ತಂದೆ ಹೇಳು ತ್ತಿದ್ದರು. ಈಗ ನೋಡಿ, ಕಠಾರಿಯ ಗಾಯ ಎಲ್ಲಾಗಿದೆ? ನನ್ನ ಪ್ರೀತಿಯ ಪತ್ನಿಯ ತುಟಿಗೆ."

ಡಗ್ಲಾಸ್ ಸ್ಲೋನ್‌ಗೆ ಈ ಕೇಸಿನ ಬಗ್ಗೆ ಸ್ವಾಭಾ ವಿಕವಾಗಿಯೇ ಕುತೂಹಲ ಹೆಚ್ಚಿತು. ಒಂದು ಕ್ಷಣ ಬಿಟ್ಟು ಅವನೆಂದ.

"ಹಾಗಾದರೆ ಈಗಿರುವ ಮಾರ್ಗಗಳು ಎರಡೇ ಎರಡು. ಒಂದೋ ತುಟಿಯನ್ನು ಕತ್ತರಿಸಿ ಹಾಕ ಬೇಕು, ಇಲ್ಲವೆ ರೋಗಿಯನ್ನು ಸಾಯಲು ಬಿಡ ಬೇಕು."

"ನನ್ನ ಹೆಂಡತಿ ತುಟಿ ಕಳೆದುಕೊಂಡರೂ ಪರವಾಗಿಲ್ಲ, ಅವಳು ಮಾತ್ರ ಬದುಕಲೇಬೇಕು. ನನ್ನ ಗಾಡಿ ಮನೆ ಮುಂದೆಯೆ ನಿಂತಿದೆ. ದಯ ಮಾಡಿ ಬಂದು ಆಪರೇಷನ್ ಮಾಡಿ ನನ್ನ ಪತ್ನಿಯನ್ನು ಉಳಿಸಿಕೊಡಿ."

ಡಗ್ಲಾಸ್ ಸ್ಲೋನ್ ಶಸ್ತ್ರಚಿಕಿತ್ಸೆಗೆ ಬೇಕಾದ ಸಲಕರಣೆಗಳನ್ನೂ ಪೂತಿ ನಾಶವನ್ನೂ ಕಿಟ್‌ನಲ್ಲಿ ಹಾಕಿಕೊಂಡು, ಓವರ್ ಕೋಟ್ ಧರಿಸಿ, "ನಾನು ಸಿದ್ಧ. ಹೋಗುವುದಕ್ಕೆ ಮುಂಚೆ ಒಂದು ಗ್ಲಾಸ್ ವೈನ್ ತೆಗೆದುಕೊಳ್ಳುತ್ತೀರಾ?" ಎಂದು ಕೇಳಿದ. ಆಗಂತುಕ ಕೈಯನ್ನು ಅಲ್ಲಾಡಿಸುತ್ತಾ, "ಡಾಕ್ಟರೇ, ನೀವು ಮರೆತಿರಿ ಎಂದು ಕಾಣುತ್ತೆ. ನಾನೊಬ್ಬ ಕಟ್ಟಾ ಮುಸಲ್ಮಾನ. ಪ್ರವಾದಿ ಮಹಮ್ಮದರ ಅನು ಯಾಯಿ. ನಾನು ಕುಡಿಯುವುದಿಲ್ಲ. ನೀವು ನನ್ನ ಪತ್ನಿಗೆ ಕ್ಲೋರೋಫಾರಂ ಕೂಡ ಕೊಡಬಾರದು. ಅದೂ ಒಂದು ಬಗೆಯ ಮದ್ಯ. ಹೀಗಾಗಿ ನಮಗೆ ತ್ಯಾಜ್ಯವಾದದ್ದು."

"ಏನು? ಅನಿಸ್ತೇಸಿಯಾ ಇಲ್ಲದೆ ನಿಮ್ಮ ಪತ್ನಿಗೆ ಆಪರೇಷನ್ ಮಾಡು ಎಂದು ಹೇಳುತ್ತೀರಾ?" ಎಂದ ಸ್ಲೋನ್ ಬೆರಗುಗಣ್ಣಿನಿಂದ.

"ನನ್ನ ಹೆಂಡತಿಗೆ ಆಗಲೇ ಗಾಢ ನಿದ್ರೆ ಬಂದಿದೆ-ವಿಷದ ಪ್ರಭಾವದಿಂದಾಗಿ. ಹೀಗಾಗಿ ನೀವು ಆಪರೇಷನ್ ಮಾಡುವುದು ಗೊತ್ತಾಗುವು ದಿಲ್ಲ. ಜೊತೆಗೆ ಸ್ವಲ್ಪ ಅಫೀಮನ್ನೂ ನಾನು ಕೊಟ್ಟಿದ್ದೇನೆ. ನಾನು ಬಂದು ಆಗಲೇ ಒಂದು ಗಂಟೆಯಾಯಿತು. ಕೂಡಲೇ ಹೋಗಬೇಕು".

ಹೊರಗಿದ್ದ ಗಾಡಿಯಲ್ಲಿ ಇಬ್ಬರೂ ಕುಳಿತರು. ಗಾಡಿ ಹೊರಟಿತು.

"ತುಂಬಾ ದೂರವೇ?" ಕೇಳಿದ ಸ್ಲೋನ್.

"ಇಲ್ಲ, ಯೂಸ್ಟನ್ ರಸ್ತೆಯ ಪಕ್ಕದಲ್ಲೇ. ಗಲಾಟೆ ಇಲ್ಲದ ಪ್ರದೇಶ."

ಡಗ್ಲಾಸ್ ಗಡಿಯಾರವನ್ನು ನೋಡಿಕೊಂಡ. ಈಗ ಒಂಭತ್ತೂಕಾಲು. ಆಪರೇಷನ್ನಿಗೆ ಹೆಚ್ಚು ಸಮಯ ಬೇಕಾಗುವುದಿಲ್ಲ. ಹತ್ತಕ್ಕೆಲ್ಲಾ ಲೇಡಿ ಸನಾಕ್ಸ್ ಬಳಿ ಇರಬಹುದು,' ಎಂದು ಅವನ ಯೋಚನೆ. ಗಾಡಿಯ ಗಾಜಿನ ಕಿಟಕಿಯ ಮೂಲಕ ರಸ್ತೆಯ ದೀಪಗಳು ನೃತ್ಯ ಮಾಡುತ್ತಿರುವಂತೆ

ಕಾಣುತ್ತಿದೆ. ಮಳೆ ಹನಿ ಗಾಡಿಯ ಮೇಲ್ಭಾಗಕ್ಕೆ ಬಿದ್ದ ಶಬ್ದ, ಗಾಡಿಯ ಚಕ್ರಗಳು ರಸ್ತೆಯಲ್ಲಿ ಹರಿಯುವ ನೀರನ್ನು ಸೀಳಿಕೊಂಡು ಹೋಗುವ ಶಬ್ದವಲ್ಲದೆ ಬೇರೆ ಯಾವ ಶಬ್ದವೂ ಕೇಳಿಸುತ್ತಿಲ್ಲ. ಇನ್ನೂ ರೋಗಿಯ ಮನೆ ಬಂದಿಲ್ಲ. ವೇಳೆ ಆಗುತ್ತಿದೆ. ಸ್ಲೋನ್ ತಾಳ್ಮೆಗೆಟ್ಟು ಬೂಟಿನ ಮುಂತುದಿಯನ್ನು ನೆಲಕ್ಕೆ ಕುಟ್ಟುತ್ತಾ ಕಿಟಕಿಯಲ್ಲಿ ನೋಡುತ್ತಾ ಇದ್ದಾನೆ.

ಗಾಡಿ ಕಿರಿದಾದ ರಸ್ತೆಗೆ ಬಂತು. ಆ ಬೀದಿಯಲ್ಲಿ ಅಂಗಡಿಗಳಿಲ್ಲ, ಜನ ಓಡಾಡುವುದೂ ಕಡಿಮೆ. ಅಲ್ಲಿದ್ದ ಮನೆಗಳೆಲ್ಲಾ ಸುಣ್ಣಬಣ್ಣವಿಲ್ಲದೆ ಕಳಾಹೀನವಾಗಿವೆ. ಅಂತಹ ಮನೆಯೊಂದರ ಮುಂದೆ ಗಾಡಿ ನಿಂತಿತು. ವ್ಯಾಪಾರಿ ಮತ್ತು ಡಾಕ್ಟರು ಗಾಡಿಯಿಂದ ಇಳಿದುಬಂದರು. ವ್ಯಾಪಾರಿ ಮನೆಯ ಬಾಗಿಲು ತಟ್ಟಿದ. ಹೊತ್ತಿಸಿದ ಮೇಣದ ಬತ್ತಿಯೊಡನೆ ಬಂದ ಹೆಂಗಸೊಬ್ಬಳು ಬಾಗಿಲು ತೆರೆದಳು.

"ಹೇಗಿದ್ದಾಳೆ?" ಕೇಳಿದ ಯಜಮಾನ.

"ನೀವು ಹೋದಾಗ ಹೇಗಿದ್ದರೋ ಹಾಗೆಯೇ ಇದ್ದಾರೆ, ಸ್ವಾಮಿ" ಎಂದಳು ಬಾಗಿಲು ತೆರದಾಕೆ.

ತುರ್ಕಿ ವ್ಯಾಪಾರಿ ಬಾಗಿಲು ಮುಚ್ಚಿ ವೈದ್ಯರನ್ನು ಕರೆದುಕೊಂಡು ಒಳಕ್ಕೆ ನಡೆದ. ಕೈಸಾಲೆಯಲ್ಲಿ ಕಾಲೊರಸಿಲ್ಲ, ಹ್ಯಾಟ್‌ರ್‍ಯಾಕ್ ಇಲ್ಲ, ಸೂರಿನಲ್ಲಿ ಜೇಡದ ಬಲೆ, ಎಲ್ಲಾ ಕಡೆ ಧೂಳು. ಸ್ಲೋನ್‌ಗೆ ಆಶ್ಚರ್ಯ! ಅವರು ಜೀರ್ಣವಾಗಿ ಕುಂಯ್‌ಗುಟ್ಟುವ ಮೆಟ್ಟಲುಗಳನ್ನು ಹತ್ತಿ ಮೇಲಿದ್ದ ಕೊಠಡಿಗೆ ಬಂದರು. ಅಲ್ಲಿ ನೆಲಕ್ಕೆ ಕಾರ್ಪೆಟ್, ಕುಳಿತುಕೊಳ್ಳಲು ಪೀಠೋಪಕರಣಗಳು ಇದ್ದವಲ್ಲದೆ ತುರ್ಕಿ ಕ್ಯಾಬಿನೆಟ್‌ಗಳು, ಮೇಜುಗಳು, ಚಿತ್ರವಿಚಿತ್ರ ಆಯುಧಗಳು ಪಿಂಗಾಣಿ ಪದಾರ್ಥಗಳು, ಇನ್ನೂ ಏನೇನೋ ಇವೆ. ಲಂಬಕ ರೂಮಿನಂತಿರುವ ಅಲ್ಲಿ



ಓಡಾಡುವಾಗ ಎಚ್ಚರಿಕೆ ವಹಿಸಬೇಕು, ಇಲ್ಲದಿದ್ದರೆ ಏನಾದರೂ ಮೆಟ್ಟುತ್ತೀರಿ, ಅಥವಾ ಯಾವುದನ್ನಾದರೂ ಬೀಳಿಸುತ್ತೀರಿ. ಕೊಠಡಿಯ ಮೂಲೆಯೊಂದರಲ್ಲಿ ಮಂಚದ ಮೇಲೆ ವ್ಯಾಪಾರಿಯ ಹೆಂಡತಿ ಮಲಗಿದ್ದಳು.

ಅವಳು ತುರ್ಕಿ ಹೆಂಗಸರಂತೆ ಬಟ್ಟೆ ಧರಿಸಿದ್ದಳು. ದೇಹ ಪೂರ್ಣವಾಗಿ ಬಟ್ಟೆಯಿಂದ ಮುಚ್ಚಿತ್ತು. ಮುಖಕ್ಕೆ ಬುರ್ಖಾ. ಆದರೆ ಮುಖದ ಕೆಳಭಾಗ ಕಾಣುತ್ತಿತ್ತು. ಸ್ಲೋನ್ ಆಕೆಯ ಕೆಳದುಟಿಯ ಮೇಲೆ ಆದ ಗಾಯ ನೋಡಿದ.

"ಆಕೆ ಬುರ್ಖಾ ಹಾಕಿಕೊಂಡಿದ್ದಾಳೆ, ಕ್ಷಮಿಸಿ, ನಮ್ಮ ಸ್ತ್ರೀಯರ ಬಗ್ಗೆ ನಿಮಗೆ ತಿಳಿದಿರಬೇಕು. ಅವರು ತಮ್ಮ ಮುಖವನ್ನು ಪರ ಪುರುಷರಿಗೆ ತೋರಿಸುವುದಿಲ್ಲ" ಎಂದ ವ್ಯಾಪಾರಿ.

ಆದರೆ ಸ್ಲೋನ್ ಬುರ್ಖಾ ಬಗ್ಗೆ ಯೋಚನೆ ಮಾಡುತ್ತಿರಲೇ ಇಲ್ಲ. ಅವನಿಗೆ ವ್ಯಕ್ತಿ ಗಂಡಸೇ, ಹೆಂಗಸೇ ಎನ್ನುವುದೂ ಬೇಕಾಗಿರಲಿಲ್ಲ. ಅವನು ಬಗ್ಗಿ ಹೋಗಿಯ ತುಟಿಯನ್ನು ಪರೀಕ್ಷಿಸಿದ. ಕತ್ತರಿಸಿದ ಸ್ಥಳದಲ್ಲಿ ವಿಷದ ಪರಿಣಾಮ ಕಾಣಲಿಲ್ಲ.

"ವಿಷದ ಚಿಹ್ನೆ ಹೊಮ್ಮುವತನಕ ಕಾಯೋಣ" ಎಂದ ಸ್ಲೋನ್.

ತುರ್ಕಿ ವ್ಯಾಪಾರಿ ಕೈಯನ್ನು ಒಸುಕಿಕೊಳ್ಳುತ್ತಾ, "ಇಲ್ಲಾ, ಸಾರ್. ಗಾಯ ಚಿಕ್ಕದೆಂದು ಕಡೆಗಣಿಸಬೇಡಿ. ತಮಗೆ ಗೊತ್ತಿಲ್ಲ ಇದು ಘೋರ ವಿಷ. ನನ್ನ ಮಾತು ಕೇಳಿ. ಆಪರೇಷನ್ ಬೇಕೇ ಬೇಕು. ನಿಧಾನಿಸಿದರೆ ಅವಳ ಪ್ರಾಣಕ್ಕೇ ಕುತ್ತು. ದಯಮಾಡಿ ತುಟಿ ಕತ್ತರಿಸಿ ಅವಳನ್ನು ಬದುಕಿಸಿ," ಎಂದು ಗೋಗರೆದ.

"ಇನ್ನೂ ಸ್ವಲ್ಪ ಹೊತ್ತು ಕಾಯೋಣ ಅನ್ನಿಸುತ್ತದೆ."

"ಡಾಕ್ಟರೇ, ನನ್ನ ಪ್ರೀತಿಯ ಹೆಂಡತಿ ನನ್ನ ಮುಂದೆಯೆ ಪ್ರಾಣ ಬಿಡುವುದನ್ನು ನಾನು ನೋಡಲಾರೆ. ಆಪರೇಷನ್ ಶೀಘ್ರದಲ್ಲಿ ಆಗದಿದ್ದರೆ ಅವಳ ಸಾವು ಖಂಡಿತ. ಕಾಲ ಮೀರುವುದರೊಂದಿಗೆ ಬೇರೊಬ್ಬ ಡಾಕ್ಟರನ್ನು ನಾನು ಕರೆತರಬೇಕಾಗುತ್ತದೆ. ಹೇಳಿ, ತಾವು ಆಪರೇಷನ್ ಮಾಡುತ್ತೀರೋ ಇಲ್ಲವೋ?"

ಡಗ್ಲಾಸ್ ಸ್ವಲ್ಪ ಅನುಮಾನಿಸಿದ. ಆ ವ್ಯಾಪಾರಿ ಕೊಟ್ಟ ನೂರು ಪೌಂಡುಗಳನ್ನು ಹಿಂದಿರುಗಿಸುವುದೇನೂ ಸಂತೋಷದ ವಿಷಯವಲ್ಲ. ಕೇಸನ್ನು ಕೈಬಿಡುವುದಾದರೆ ಹಣ ವಾಪಸ್ಸು ಕೊಡಲೇಬೇಕು. ಜೊತೆಗೆ ಈ ವ್ಯಾಪಾರಿ ಹೇಳುವುದೆಲ್ಲಾ ನಿಜವಾಗಿದ್ದು ಹೆಂಗಸು ಸತ್ತರೆ ಕೊರೋನರ್ (coroner) ಮುಂದೆ ತನ್ನ ಗತಿಯೇನು?

"ಆಕೆಗೆ ಆಪರೇಷನ್ ಅಗತ್ಯ, ಆಕೆಯ ಕೆಳದುಟಿಯನ್ನು ಕತ್ತರಿಸಿ ಹಾಕಲೇಬೇಕು ಅನ್ನುತ್ತೀರಾ?" ಪುನಃ ಕೇಳಿದ ಸ್ಲೋನ್.

"ನನಗೆ ನನ್ನ ಹೆಂಡತಿಯ ತುಟಿಗಿಂತ ಅವಳ ಜೀವ ಮುಖ್ಯ. ಅದಕ್ಕೆ ಆಪರೇಷನ್ ಅಗತ್ಯ, ಡಾಕ್ಟರ್" ಎಂದ ಆ ವ್ಯಾಪಾರಿಯ ಮಾತಿನಲ್ಲಿ ನಯ ನಾಜೂಕಿಲ್ಲದೆ ಸ್ವಲ್ಪ ಕೋಪ ಅಡಗಿತ್ತು.

ಡಗ್ಲಾಸ್ ಕೈಪೆಟ್ಟಿಗೆಯನ್ನು ಬಿಚ್ಚಿ ಸಲಕರಣೆಗಳನ್ನು ತೆಗೆದುಕೊಂಡು, ಆಕೆಯನ್ನು ನೋಡಿದ. ಬುರ್ಖಾದ ರಂಧ್ರಗಳಿಂದ ಅವಳ ಕಣ್ಣುಗಳು ಕಾಣಸುತ್ತಿದ್ದವು. ದೀಪವನ್ನು ಹಾಸಿಗೆಯ ಬಳಿ ತಂದು ಆಕೆಯ ಕಣ್ಣುಗಳನ್ನು ವೀಕ್ಷಿಸಿ,

"ಹೆಚ್ಚು ಅಫೀಮನ್ನು ತಿನ್ನಿಸಿರಬೇಕು," ಅಂದ.

"ಹೌದು," ಎಂದ ತುರ್ಕಿ ವ್ಯಾಪಾರಿ.

ದೀಪವನ್ನು ಕಣ್ಣಿನ ಬಳಿ ಪುನಃ ತಂದಾಗ ಅವಳು ಕ್ಷಣಕಾಲ ದಿಟ್ಟಿಸಿ ನೋಡಿ ಕಣ್ಣನ್ನು ಮುಚ್ಚಿಕೊಂಡಳು.

"ಡಾಕ್ಟರ್, ನೀವು ತುಂಬಾ ನಿಧಾನಿಸುತ್ತಿದ್ದೀರಿ. ಅವಳಿಗೆ ಪ್ರಜ್ಞೆ ಬರಬಹುದು. ಆಗ ಆಪರೇಷನ್ ಮಾಡುವುದು ಕಷ್ಟ," ಎಂದ ವ್ಯಾಪಾರಿ. "ಯೋಚಿಸಬೇಡಿ" ಎನ್ನುತ್ತಾ ಡಗ್ಲಾಸ್ ಗಾಯದ ತುಟಿಯನ್ನು ಫಾರ್‌ಸೆಪ್ಸ್‌ನಿಂದ ಒಡಿದ. ಶೀಘ್ರವಾಗಿ ಗಾಯವನ್ನೊಳಗೊಂಡಂತೆ V ಆಕಾರದಲ್ಲಿ ಕೆಳ ತುಟಿಯನ್ನು ಕತ್ತರಿಸಿ ತೆಗೆದುಹಾಕಿದ. ನೋವನ್ನು ತಡೆಯಲಾಗದೆ ಮಲಗಿದಾಕೆ ಕೂಗುತ್ತಾ ಎದ್ದುಕುಳಿತಳು. ಕೈಯಿಂದ ಬುರ್ಖಾವನ್ನು ಕಿತ್ತುಹಾಕಿದಳು. ರಕ್ತ ಒಸರುತ್ತಿದ್ದ ತುಟಿಯನ್ನು ಬಲಗೈ ಬೆರಳುಗಳಿಂದ ಅದುಮಿ ಒಡಿದು ಗಟ್ಟಿಯಾಗಿ ಕಿರುಚಿದಳು.

ಮಂಚದ ಬಳಿ ಸ್ಟೂಲಿನ ಮೇಲೆ ಚಾಕು ಒಡಿದು ಕುಳಿತಿದ್ದ ಸ್ಲೋನ್ ಬುರ್ಖಾ ತೆಗೆದ

ಅವಳ ಮುಖನ್ನು ನೋಡಿದ. ಅದು ಪರಿಚಯವಿದ್ದ ಮುಖ. ಬಾಗಿಲ ಬಳಿ ನಿಂತಿದ್ದ ವ್ಯಾಪಾರಿ ತಾನು ಹಾಕಿಕೊಂಡಿದ್ದ ಟೋಫನ್ ಮತ್ತು ಗಡ್ಡವನ್ನು ಕಿತ್ತುಹಾಕಿ ಜೋಬಿನಿಂದ ಪಿಸ್ತೂಲನ್ನು ಹೊರತೆಗೆದು ಹೇಳಿದ,

"ಹೌದು ಡಾಕ್ಟರ್ ಸ್ಟೋನ್, ನಾನು ಲಾರ್ಡ್ ಸನಾಕ್ಸ್. ಅವಳು ನನ್ನ ಪತ್ನಿ ಲೇಡಿ ಸನಾಕ್. ಆಕೆಗೆ ಆಪರೇಷನ್ ಬೇಕಾಗಿತ್ತು. ಭೌತಿಕವಾಗಿಯಲ್ಲ, ನೈತಿಕವಾಗಿ. ನೀನು ಬರೆದ ಕಾಗದ ಅವಳಿಗೆ ತಲುಪುವ ಬದಲು ನನಗೆ ತಲುಪಿತು. ಅದು ನನ್ನ ಜೇಬಿನಲ್ಲೇ ಇದೆ. ಯೋಜನೆಯನ್ನು ಕಾರ್ಯರೂಪಕ್ಕೆ ತರಲು ಸ್ವಲ್ಪ ಶ್ರಮ ವಹಿಸಿದೆ... ಅವಳ ತುಟಿಯ ಮೇಲೆ ಆಗಿರುವ ಗಾಯವೇನೂ ಅಪಾಯಕಾರಿಯಾದುದಲ್ಲ."

ಆಕೆಯ ಅಳು ನಿಂತಿತು. ಮುಖ ಆ ಭಯಾನಕ ತಲೆದಿಂಬಿಗೆ ಒರಗಿತು. ತುಟಿಯಿಂದ ರಕ್ತ ಒಸರುತ್ತಾ ಹಾಸಿಗೆಯಲ್ಲಾ ರಕ್ತಮಯವಾಯಿತು. ಸನಾಕ್ಸ್ "ತುಟಿಗೆ ಬ್ಯಾಂಡೇಜ್ ಕಟ್ಟಿ, ನಿನ್ನ ಯಜಮಾನಿ ಎದ್ದಮೇಲೆ ಅವಳನ್ನು ಸರಿಯಾಗಿ ನೋಡಿಕೊ" ಎಂದು ಆಳಿಗೆ ಹೇಳಿದ.

ಡಗ್ಲಾಸ್ ಸ್ಟೂಲಿನ ಮೇಲೆ ಕುಳಿತು ನೆಲ ನೋಡುತ್ತಿದ್ದ. ಕೈಯಲ್ಲಿ ಹಿಡಿದ ಚಾಕು ಹಾಗೆಯೇ ಇತ್ತು. ಅವನನ್ನು ನೋಡುತ್ತಾ ಸನಾಕ್ಸ್ "ಭೇಟಿಯಾಗುತ್ತೇನೆಂದು ಹೇಳಿದ ಮಾತನ್ನು ಉಳಿಸಿಕೊಂಡೆ," ಎಂದು ಹೇಳಿದ. ಅದಕ್ಕೆ ಡಗ್ಲಾಸ್ ನಕ್ಕ; ಅದೊಂದು ಗಟ್ಟಿಯಾದ, ದೀರ್ಘ ನಗು. ಬುದ್ಧಿ ಭ್ರಮಿತರ ನಗು.

ಸನಾಕ್ಸ್ ಹೊರಬಂದು ಗಾಡಿಯಲ್ಲಿದ್ದ ಡ್ರೈವರಿಗೆ, "ನೀನು ಮೊದಲು ಡಾಕ್ಟರನ್ನು ಮನೆಗೆ ಕರೆದುಕೊಂಡು ಹೋಗು. ಬಟ್ಲರ್‌ಗೆ ವೈದ್ಯರ ಆರೋಗ್ಯ ಇದ್ದಕ್ಕಿದ್ದ ಹಾಗೆ ಕೆಟ್ಟಿತು ಎಂದು ಹೇಳು," ಎಂದು ಆಜ್ಞಾಪಿಸಿದ.

"ಆಗಲಿ ಸಾರ್," ಎಂದ ಡ್ರೈವರ್.

"ಆನಂತರ ನೀನು ಅವಳನ್ನು ಮನೆಗೆ ಕರೆದುಕೊಂಡು ಹೋಗು."

"ನಿಮ್ಮನ್ನು?"

"ಇನ್ನು ಕೆಲವು ತಿಂಗಳು ನನ್ನ ಅಡ್ರೆಸ್ 'ಹೋಟೆಲ್ ದ ರೋಮಾ, ವೆನಿಸ್.' ನನ್ನ ಪತ್ರಗಳನ್ನೆಲ್ಲಾ ಅಲ್ಲಿಗೇ ಕಳುಹಿಸು. ಸ್ಟೀವನ್ಸ್‌ಗೆ ಪುಷ್ಪಗಳನ್ನು ಪ್ರದರ್ಶನಕ್ಕಿಟ್ಟು ಫಲಿತಾಂಶ ತಿಳಿಸಲು ಹೇಳು" ಎಂದು ಹೇಳಿದ ಲಾರ್ಡ್ ಸನಾಕ್ಸ್. ●



# ಮಾಸ್ತಿ ಜೀವನ ಪ್ರಸಂಗ

ಮಾಸ್ತಿ ವೆಂಕಟೇಶ ಅಯ್ಯಂಗಾರರು ಮಾತಿನಲ್ಲಿ ಎಷ್ಟು ಮೃದುವೋ ಕೃತಿಯಲ್ಲೂ ಅಷ್ಟೆ. ಅವರ ಔದಾರ್ಯಕ್ಕೆ ಮೇರೆ ಇರಲಿಲ್ಲ, ಅವರ ಜೀವನದ ಅನೇಕ ಘಟನೆಗಳು ಅವರ ಈ ಹಿರಿಮೆಗೆ ಸಾಕ್ಷಿಯಾಗಿ ನಿಂತಿವೆ. ಅಂತಹದೇ ಒಂದು ಘಟನೆ ಇದು.

ಸನ್ ೧೯೩೦ರ ಸುಮಾರಿಗೆ ಮಾಸ್ತಿಯವರು ಮೈಸೂರು ಸರಕಾರದಲ್ಲಿ ಸೆನ್ಸಸ್ ಸೂಪರಿಂಟೆಂಡೆಂಟರಾಗಿದ್ದರು. ಸೆನ್ಸಸ್ ಕೆಲಸ ಅತ್ಯಂತ ಜೋರಿನಿಂದ ನಡೆಯುತ್ತಿದ್ದ ಸಮಯ. ಕಚೇರಿಯಲ್ಲಿ ಗುಂಪು ಗುಂಪಾಗಿ ಕೆಲಸಗಾರರನ್ನು ವಿಂಗಡಿಸಿ ಕೆಲಸ ನಡೆಸುತ್ತಿದ್ದು, ಗುಂಪು ಗುಂಪಿಗೆ ಕೆಲಸದ ಪೈಪೋಟಿ ಇದ್ದಿತು. ಇಂತಹ ಸಮಯದಲ್ಲಿ ಕೆಲಸಗಾರರಲ್ಲಿ ಅನೇಕ ಬಿಸಿರಕ್ತದ ತರುಣ ಪದವೀಧರರೂ ಇದ್ದರು. ಅವರಲ್ಲಿ ಎ.ಎಚ್. ಗೋಪಾಲರಾವ್ ಅನ್ನುವವರೂ ಒಬ್ಬರು. ಅವರು ಆಗತಾನೆ ಮೈಸೂರಿನ ಮಹಾರಾಜ ಕಾಲೇಜಿನಿಂದ ಎಂ.ಎ. ಪದವಿಯನ್ನು ಪಡೆದು ಹೊರಬಂದಿದ್ದರು.

ಮಾಸ್ತಿಯವರು ವಾರಕ್ಕೊಂದಾವರ್ತಿ ತಮ್ಮ ಕೊಠಡಿಯಿಂದ ಹೊರಬಂದು ಎಲ್ಲಾ ಗುಂಪುಗಳ ಬಳಿಗೂ ಹೋಗಿ ಕಾರ್ಯಪರಿಶೀಲನೆ ಮಾಡುತ್ತಿದ್ದರು. ಒಂದು ದಿನ ಅವರು ಗೋಪಾಲರಾವ್ ಅವರ ಕೊಠಡಿಗೆ ಬಂದಾಗ ಗುಂಪಿನ ಕಾರ್ಯ ಸರಿಯಾಗಿ ನಡೆಯುತ್ತಿದ್ದರೂ ಅವರು ಮಾತ್ರ ಟಾಲ್‌ಸ್ಟಾಯ್‌ರ ಕಾದಂಬರಿಯೊಂದನ್ನು ಓದುತ್ತಿದ್ದರು. ಕೆಲಸದ ವೇಳೆಯಲ್ಲಿ ಹೀಗೆ ಓದುವುದನ್ನು ಮಾಸ್ತಿ ಆಕ್ಷೇಪಿಸಿದರು.

ಅನಂತರ ಮತ್ತೆ ಕೆಲ ದಿನಗಳ ನಂತರ ಮಾಸ್ತಿಯವರು ಗೋಪಾಲರಾವ್ ಅವರ ಹತ್ತಿರ ಬಂದಾಗ ಅವರ ಮೇಜಿನ ಮೇಲೆ ಎಚ್.ಜಿ. ವೆಲ್ಸ್‌ರ ಕಾದಂಬರಿಯೊಂದು ಕಣ್ಣಿಗೆ ಬಿತ್ತು. ಅದನ್ನು ಕಂಡು ಮಾಸ್ತಿ "You are again in the habit of reading Novels during Office Hours" ಎಂದು ಆಕ್ಷೇಪಿಸಿದರು. ಅದಕ್ಕೆ ಗೋಪಾಲರಾವ್ "I brought it to be read only during my afternoon leisure hour" ಎಂದು ಉತ್ತರಿಸಿದರು. ಅದಕ್ಕೆ ಮಾಸ್ತಿ ಸ್ವಲ್ಪ ಗಡುಸಾಗಿ "you seem to be proud of your M.A. Degree" ಎಂದರಂತೆ. ಆಗ ಬಿಸಿರಕ್ತದ ಗೋಪಾಲರಾವ್ ಹಿಂದು ಮುಂದೆ ಯೋಚಿಸದೆ "If I were so, I would not have taken up service under another M.A." ಎಂದು ಬಿಟ್ಟರು. ತಕ್ಷಣ ಯಾವ ಮಾತನ್ನೂ ಆಡದೆ ಮಾಸ್ತಿ ತಮ್ಮ ಕೋಣೆಗೆ ಹೊರಟುಹೋದರು. ಇದರ ಪರಿಣಾಮ ತಮ್ಮನ್ನು ಕರೆಸಿ ಕೆಲಸದಿಂದ ವಜಾ ಮಾಡುವ ನೋಟೀಸನ್ನು ತಮಗೆ ನೀಡುವುದರಲ್ಲಿ ಪರ್ಯವಸಾನಗೊಳ್ಳುತ್ತದೆ ಎಂದು ಗೋಪಾಲರಾವ್ ಭಾವಿಸಿದ್ದರು.

ಆದರೆ ಮಾಸ್ತಿಯವರು ತಮ್ಮ ಕೊಠಡಿಗೆ ತೆರಳಿದ ನಂತರ ತಾವು ಮಾಡಿದುದಕ್ಕೆ ತುಂಬ ವ್ಯಥೆಪಟ್ಟರು. ಗೋಪಾಲರಾವ್ ಅವರಿಗೆ ಹೇಳಿ ಕಳುಹಿಸಿ ಕೊನೆಗೆ ಅವರು ಬರದೇ ಇದ್ದರೂ ಅವರ ದಕ್ಷತೆ ಹಾಗೂ ವಿದ್ಯಾರ್ಹತೆಯ ವಿಷಯದಲ್ಲಿ ಸರಕಾರಕ್ಕೆ ಒಂದು ವಿಶೇಷ ರಿಪೋರ್ಟ್ ಕಳುಹಿಸಿ ಅವರನ್ನು ಸೆಕ್ರೆಟ್ರಿಯೇಟ್‌ನಲ್ಲಿ ಖಾಯಂ ಆಗಿ ನೇಮಕ ಮಾಡಿಕೊಳ್ಳಲು ತಿಳಿಸಿದರಂತೆ.

• ಚಿದಂಬರ ಇನಾಮದಾರ

# 'ವ್ಯವಸಾಯೋಪಚಾರ' ಹಾಗೆಂದರೇನು?

**ಪರಾವಲಂಬಿತನದ ಪಡಿಪಾಟಲಿನಿಂದ ಪೀಡಿತರನ್ನಿದು ಪಾರು ಮಾಡುತ್ತದೆ.**

ಪರಿಯಚಡವರೊಬ್ಬರಿಗೆ ಲಕ್ವ ಹೊಡೆದ ಸುದ್ದಿ ಕೇಳಿದಾಕ್ಷಣ ವ್ಯಕ್ತಗೊಳ್ಳುವ ಅಭಿಪ್ರಾಯ ಆತನ ಸಂಬಂಧಿಕರ ಕುರಿತದ್ದಾಗಿರುತ್ತದೆ. "ಪಾಪ, ಇನ್ನು ಅವರ ಕಷ್ಟ ಹೇಳತೀರದು. ಆತನನ್ನು ಅವರಿನ್ನು ಸದಾ ಕಾಲವೂ ನೋಡಿಕೊಳ್ಳಬೇಕು..." ಇತ್ಯಾದಿ.

ಲಕ್ವ ಹೊಡೆಸಿಕೊಂಡವನ ಬಗೆಗಾಗಲಿ, ಸಂಧಿವಾತ, ಸೊಂಟ ಸೆಡೆತ-ನೋವು ಇಂಥ ತೊಂದರೆ ಅನುಭವಿಸುವವನ ಬಗೆಗಾಗಲಿ ಅನುಕಂಪ ವ್ಯಕ್ತಪಡಿಸುವವರ ಸಂಖ್ಯೆ ಕಮ್ಮಿ. ನಿಜ ಹೇಳಬೇಕೆಂದರೆ ಈ ಸ್ಥಿತಿಯಿಂದಾಗಿ ವ್ಯಕ್ತಿ ಪರಾವಲಂಬಿಯೇ ಆಗಿಬಿಟ್ಟಿರುತ್ತಾನೆ. ಪ್ರತಿಕ್ಷಣಕ್ಕೂ ಆತನಿಗೆ ಇತರರ ನೆರವು ಅತ್ಯಗತ್ಯವಾಗಿರುತ್ತದೆ.

ತನ್ನ ಈ ಅಸಹಾಯಕತೆಯಿಂದಾಗಿ ಒಳಗೊಳಗೇ ಕೊರಗುವ ರೋಗಿಗಳ ಸಂಖ್ಯೆಯೂ ಕಮ್ಮಿ ಏನಿಲ್ಲ. ಸ್ವಂತದ ಕೆಲಸಗಳನ್ನು ತಾನೇ ಮಾಡಿಕೊಳ್ಳಬೇಕೆಂಬ ಅಪೇಕ್ಷೆ ಹೊತ್ತೇ ಇರುತ್ತಾರವರು. ಮತ್ತೆ ಮೊದಲಿನಂತಾಗದಿದ್ದರೂ ಸದ್ಯದ ಸ್ಥಿತಿ ಸ್ವಲ್ಪ ಸುಧಾರಿಸಿ ಸ್ವಾವಲಂಬಿಯಾಗಿರುವಂಥ ಅವಕಾಶಕ್ಕಾಗಿಯೂ ಹಾತೊರೆಯುತ್ತಿರುತ್ತಾರೆ.

ಆದರೆ ಲಕ್ವ ಹೊಡೆಸಿಕೊಂಡವನಿಗೆ ದೇಹದ ಒಂದು ಪಾರ್ಶ್ವವೇ ಅಚೇತನಗೊಂಡುಬಿಟ್ಟಿರುತ್ತದ್ದಲ್ಲ. ಆತ ನೇರವಾಗಿ ನಡೆಯಲಾರ; ಲಕ್ವ ಹೊಡೆದ ಭಾಗದ ಕಣ್ಣಿನಿಂದ ನೇರವಾಗಿ ನೋಡಲಾರ, ಮಾತನಾಡುವಾಗಲಂತೂ ಆ ಭಾಗದ ತುಟಿ ಜೋತುಕೊಂಡಿರುತ್ತದೆ. ಆ ಭಾಗದ ಕೈ ಕೊರಡಾಗಿ ಬಿಟ್ಟಿರುತ್ತದೆ. ಹೀಗಿರುವಾಗ ತನ್ನಷ್ಟಕ್ಕೆ ತಾನು ಊಟ ಮಾಡುವುದಾಗಲಿ, ಬಟ್ಟೆ ತೊಟ್ಟುಕೊಳ್ಳುವುದಾಗಲಿ, ಆಧಾರವಿಲ್ಲದೆಯೇ ನಡೆದಾಡುವುದಾಗಲಿ ಅಸಾಧ್ಯವಾಗಿ ಆತ ತನ್ನನ್ನೇ ತಾನು ಹಳಿದುಕೊಳ್ಳುವುದುಂಟು.

ಪಾರ್ಶ್ವವಾಯು ಪೀಡಿತರನ್ನು ನಾನಾ ವಿಧ ಚಿಕಿತ್ಸೆಗೆ ಒಳಪಡಿಸುವ ರೂಢಿ ಇದೆಯಷ್ಟೆ. ಆದರೆ



ಅನೇಕ ಸಂದರ್ಭಗಳಲ್ಲಿ ಇಂಥ ಚಿಕಿತ್ಸೆಗಳಿಂದ ಉಪಪರಿಣಾಮಗಳಾಗುವುದೂ ಇದೆ. ರೋಗಿ ಕಾಯಮ್ಮಾಗಿ ಅದೇ ಸ್ಥಿತಿಯಲ್ಲುಳಿದು ಬಿಡುವ ಅಪಾಯವೂ ಇಲ್ಲದಿಲ್ಲ. ಇದರಷ್ಟು ಶೋಚನೀಯ ಸ್ಥಿತಿ ಇನ್ನಾವುದು?

ಇಂಥ ಪರಿಸ್ಥಿತಿ ಎದುರಾಗಬಾರದೆನ್ನುವ ಉದ್ದೇಶದಿಂದಲೇ ಇಂದು ಜಗತ್ತಿನ ಎಲ್ಲಾ ಮುಂದುವರಿದ ದೇಶಗಳಲ್ಲಿನ ಆಸ್ಪತ್ರೆಗಳಲ್ಲಿ ಈಗ 'ವ್ಯವಸಾಯೋಪಚಾರ'ವೆಂಬುದು ರೂಢಿಯಲ್ಲಿದೆ. ಭಾರತದ ಕೆಲವು ಬೃಹತ್ ನಗರಗಳಲ್ಲಿಯೂ ಈ ತೆರನ ಉಪಚಾರ ಲಭ್ಯ.

ಹಾಗಾದರೆ ಈ 'ವ್ಯವಸಾಯೋಪಚಾರ' ಅಂದ

ರೇನು? ಇಂಗ್ಲೀಷಿನಲ್ಲಿ 'ಆಕ್ಯುಪೇಶನಲ್ ಥೆರಪಿ' ಎಂದು ಕರೆಯಲ್ಪಡುವ ಈ ಉಪಚಾರ ಪದ್ಧತಿಯ ಬಗೆಗೆ ತಟಕ್ಕನೆ ತಪ್ಪು ಅರ್ಥ ಗ್ರಹಿಸಿಕೊಳ್ಳಬಹುದಾದ ಸಾಧ್ಯತೆ ಹೆಚ್ಚು. 'ಆಕ್ಯುಪೇಶನಲ್' ಎನ್ನುವುದನ್ನು 'ಆಕ್ಯುಪಂಕ್ಚರ್' ಎಂದುಕೊಳ್ಳುವವರು ಕೆಲವರಾದರೆ, ಬಹುಶಃ ಈ ರೋಗಿಗಳಿಗೆ ವ್ಯವಸಾಯ ಸಂಬಂಧಿಯಾದ ಸೂಚನೆ ನೀಡುವ ಪದ್ಧತಿ ಇದಾಗಿರಬಹುದೆಂದು ಇನ್ನು ಕೆಲವರು ಅರ್ಥೈಸಿಕೊಂಡಿದ್ದಾರೆ. ಇಲ್ಲಿ ಸೀಮಿತ ಅರ್ಥದ 'ವ್ಯವಸಾಯ' ಅಥವಾ 'ಉದ್ಯೋಗ'ದ ಸಂಬಂಧವೇ ಬರುವುದಿಲ್ಲ. 'ವ್ಯವಸಾಯ' ಅಥವಾ 'ಉದ್ಯೋಗ'ವನ್ನು ತೊಡಗಿಕೋ ಎಂಬ ವಿಶಾಲ ಅರ್ಥದಲ್ಲಿ ಇಲ್ಲಿ ಬಳಸಲಾಗಿರುವುದರಿಂದ 'ವ್ಯವಸಾಯೋಪಚಾರ'ವು ರೋಗಿಯನ್ನು ಸ್ವಾವಲಂಬಿಯಾಗುವತ್ತ ತೊಡಗಿಸಿಕೊಳ್ಳುವಂತೆ ಮಾಡಲು ನೆರವಾಗುತ್ತದೆ. ರೋಗಿಯನ್ನು ಚಿಕಿತ್ಸೆಯ ಸಂದರ್ಭದಲ್ಲಿಯಷ್ಟೇ ಅಲ್ಲ, ತದನಂತರದ ದಿನಗಳಲ್ಲೂ ತನ್ನನ್ನು ತಾನು ನಂಬಿಕೊಂಡು, ಇತರರಿಗೆ ಹೊರೆಯಾಗದಂತೆ ಇರಲು ಸಮರ್ಥನನ್ನಾಗಿ ಮಾಡುವ ಕ್ರಮ ಇದು.

ಲಕ್ವ, ಸಂಧಿವಾತ, ಮೂಳೆ ಮುರಿತ, ಬೆನ್ನು ನೋವು ಇತ್ಯಾದಿಗಳಿಂದಾಗಿ ವ್ಯಕ್ತಿ ಕೆಲ ವಿಶಿಷ್ಟ ಕೆಲಸಗಳನ್ನು ಮಾಡಲು ತುಂಬ ತೊಂದರೆಪಡಬೇಕಾಗುತ್ತದೆ. ಇಲ್ಲವೆ ಅವುಗಳನ್ನು ಮಾಡಲಾಗದೆಯೇ ಒಳಗೊಳಗೇ ಕೊರಗಬೇಕಾಗುತ್ತದೆ. ಈ ಕೊರಗು ಆತನನ್ನು ಇನ್ನಷ್ಟು ಖಿನ್ನನನ್ನಾಗಿಸುವ ಸಾಧ್ಯತೆ ಇಲ್ಲದಿಲ್ಲ. ತಜ್ಞರು ರೋಗಿಯನ್ನು ಪರಿಪೂರ್ಣ ಪರೀಕ್ಷೆಗೊಳಪಡಿಸಿ ನೋಡುವುದು ಈ ಉಪಚಾರದ ಮೊದಲ ಹಂತ. ಆತನು ಪೀಡಿತ ಭಾಗದ ಅಂಗಾಂಗಗಳನ್ನು ಆಲುಗಾಡಿಸಬಲ್ಲನೆ, ಆ ಅಂಗಾಗಗಳ ಸ್ನಾಯುಗಳಲ್ಲಿ ಎಷ್ಟು ಶಕ್ತಿಯಿದೆ, ಆತನ ಸ್ಪರ್ಶಜ್ಞಾನದ ಮಟ್ಟ ಏನು, ಹೀಗೆ ಅನೇಕ ವಿಷಯಗಳಲ್ಲಿ ನಿದಾನಕ್ಕನುಸಾರವಾಗಿ ತಪಾಸಣೆ ನಡೆಸಲಾಗುತ್ತದೆ. ಜತೆಗೆ, ಆತನ ಮಾನಸಿಕ ಸ್ವಾಸ್ಥ್ಯ ಹೇಗಿದೆ, ಈ ಸ್ಥಿತಿಯಲ್ಲಿ ದಿನ ನಿತ್ಯದ ಅವಶ್ಯಕತೆಗಳ ಪೂರೈಕೆಗೆ ಆತ ಹೇಗೆ ಪ್ರಯತ್ನಿಸುತ್ತಾನೆ, ರೋಗಕ್ಕೆ ತುತ್ತಾಗುವ ಮೊದಲು ಆತ ಎಂಥ ಕೆಲಸ ಮಾಡುತ್ತಿದ್ದ-ಇವೇ ಮೊದಲಾದ ಮಾಹಿತಿಗಳನ್ನು ವೈದ್ಯ ಕಲೆ ಹಾಕುತ್ತಾನೆ. ನಂತರವೇ ಋಗ್ಣನಿಗೆ ತಕ್ಕ 'ವ್ಯವಸಾಯೋಪಚಾರ'ದ ನಿರ್ಧಾರಕ್ಕೆ ಬರಬೇಕಾಗುತ್ತದೆ.

ಮೊಟ್ಟ ಮೊದಲಿಗೆ ರೋಗಿಯ ನಿಃಶಕ್ತ ಅವಯವಕ್ಕೆ ವ್ಯಾಯಾಮ ವಿಧಿಸಿ ಅದನ್ನು ಶಕ್ತಗೊಳಿ



ಎಡಾಪ್ಟಿವ್ ಎಕ್ವಿಪ್‌ಮೆಂಟ್

ಸುವೆಡೆ ಗಮನ ಹರಿಸಲಾಗುತ್ತದೆ. ಅವಶ್ಯವೆನಿಸಿದರೆ ತಕ್ಕ ಸ್ಪ್ಲಿಂಟ್ಸ್ (ಅವಯವಗಳನ್ನು ಗಟ್ಟಿಯಾಗಿ ಹಿಡಿಯಬಲ್ಲಂಥ ಸಾಧನ)ಗಳನ್ನು ರೂಪಿಸಿ ಒದಗಿಸಬೇಕಾಗುತ್ತದೆ. ಅವುಗಳನ್ನು ಬಳಸುವುದು ಹೇಗೆಂಬುದನ್ನು ರೋಗಿಗೆ ಹಾಗೂ ಆತನ ಸಂಬಂಧಿಕರಿಗೆ ತಿಳಿಸಿ ತರಬೇತಿಯನ್ನೂ ನೀಡಲಾಗುತ್ತದೆ. ರೋಗಿಯನ್ನು ಆಶಾವಾದಿಯನ್ನಾಗಿಸುವ ಪ್ರಯತ್ನದ ಜತೆಗೆ ಆತ ಸದಾ ಕಾಲವೂ ಉಲ್ಲಸಿತನಾಗಿರುವಂತೆ ನೋಡಿಕೊಳ್ಳುವುದೂ ಇಲ್ಲಿಯ ಆದ್ಯ ಅವಶ್ಯಕತೆ.

ವೈದ್ಯಕೀಯ ಪರಿಭಾಷೆಯಂತೆ ಆಕ್ಯುಪೇಶನ್ ಅಥವಾ ವ್ಯವಸಾಯವನ್ನು 'ಚಟುವಟಿಕೆ' ಎಂದೂ ಅರ್ಥೈಸುವುದಿದೆ. ಆದ್ದರಿಂದ ವಿವಿಧ ಬಗೆಯ ಚಟುವಟಿಕೆಗಳಲ್ಲಿ ರೋಗಿಯನ್ನು ತೊಡಗಿಸಿ ಆತನಲ್ಲಿ ಆತ್ಮ ವಿಶ್ವಾಸವನ್ನು ತುಂಬುವ ಕೆಲಸವೂ ಈ ಚಿಕಿತ್ಸಾ ಪದ್ಧತಿಯಿಂದ ಆಗಬೇಕು. ಉದಾಹರಣೆಗೆ ತೀರ ಸಾಮಾನ್ಯ ಎನಿಸಬಹುದಾದಂಥ ಮಕ್ಕಳ ಆಟಗಳು. ಪ್ಲಾಸ್ಟಿಕ್ ಚೌಕಗಳನ್ನು ಬಳಸಿ ಗೋಪುರ, ಕಟ್ಟಡ ಇತ್ಯಾದಿ ರೂಪಿಸುವುದು. ಇದರಿಂದ ಖಿಗ್ಣನ ಅಶಕ್ತ ಅವಯವಕ್ಕೆ ಕ್ರಮೇಣ ಚಾಲನೆ ಸಿಕ್ಕು ತನ್ಮೂಲಕ ಆ ಅವಯವವನ್ನಾತ ಮತ್ತೆ ಮತ್ತೆ ಬಳಸಲು ಪ್ರೇರಣೆ ದೊರೆಯುತ್ತದೆ. ತಾನು ಪೂರ್ಣ ನಿಷ್ಕ್ರಿಯನಲ್ಲ, ತನ್ನಿಂದ ಸ್ವಲ್ಪಿಲ್ಲಸ್ವಲ್ಪ ಚಟುವಟಿಕೆ ಸಾಧ್ಯ ಎಂಬ ಆಶಾಕಿರಣವೊಂದು ಆತನ ಮನಸ್ಸಿನ ಮೇಲೆ ಅಗಾಧ ಪರಿಣಾಮ ಬೀರುತ್ತದೆ. ಹೀಗೆ ಪ್ರಾರಂಭದಲ್ಲಿ ಸುಲಭವಾದ ಹಾಗೂ ನಂತರದ ದಿನಗಳಲ್ಲಿ ಸ್ವಲ್ಪ ಕಠಿಣವೆನ್ನಬಹುದಾದ ಚಟುವಟಿಕೆಗಳಲ್ಲಿ ಖಿಗ್ಣನನ್ನು ತೊಡಗಿಸುವುದೇ ಈ 'ವ್ಯವಸಾಯೋಪಚಾರ'ದ ಮುಖ್ಯ ಉದ್ದೇಶ. ಆತಂಕದಿಂದಲೇ ಪೀಡಿತ ಅಂಗವನ್ನು ಬಳಸಲು ಆರಂಭಿಸಿ, ತನ್ನಿಂದ ಇದು ಶಕ್ಯ ಎಂಬುದನ್ನು ಮನಗಾಣುವ ಮೂಲಕ ರೋಗಿ ಜೀವನೋತ್ಸಾಹವನ್ನು ಹೆಚ್ಚಿಸಿಕೊಳ್ಳುತ್ತಾನೆ.

ಈ ಚಿಕಿತ್ಸಾಕ್ರಮ ಪೀಡಿತನಿಗಷ್ಟೇ ಅಲ್ಲ ಆತನ ಸಂಬಂಧಿಗಳಲ್ಲೂ ಒಂದು ರೀತಿಯ ಸಮಾಧಾನವನ್ನು ಬಿತ್ತುತ್ತದೆ. "ಇವನು ಪೂರ್ತಿ ನಮ್ಮನ್ನೇ ಅವಲಂಬಿಸುತ್ತಿಲ್ಲ. ಇಂದಿಲ್ಲ ನಾಳೆ ಮತ್ತೆ ಮುನ್ನಿನಂತಾಗುತ್ತಾನೆ" ಎಂಬ ಸಮಾಧಾನ ಅದು. ಇದರಿಂದ ಪರಸ್ಪರ ಪ್ರೀತಿ-ವಿಶ್ವಾಸಗಳೂ ಅನುಬಂಧವೂ ವೃದ್ಧಿಸುತ್ತವೆ.

'ವ್ಯವಸಾಯೋಪಚಾರ'ದಿಂದ ಇನ್ನೂ ಒಂದು ಪ್ರಯೋಜನವಿದೆ. ಸಾಮಾನ್ಯವಾಗಿ ಒಂದೊಂದು ಕೆಲಸದ ವಿಷಯದಲ್ಲಿಯೂ ಒಬ್ಬೊಬ್ಬರಿಗೆ ಅದನ್ನು ಮಾಡುವ ಒಂದೊಂದೇ ಕ್ರಮದ ಪರಿಚಯವಿರುತ್ತದೆ. ಅದೇ ಕೆಲಸವನ್ನು ಇನ್ನೊಂದು ರೀತಿಯಲ್ಲಿ- ಅದೂ ತುಂಬ ಸುಲಭವಾಗಿ ಹಾಗು ಹೆಚ್ಚು ಕಷ್ಟವಿಲ್ಲದೆಯೆ, ಮಾಡಬಹುದಾದ ಕುರಿತು ಮಾರ್ಗದರ್ಶನ ನೀಡುವುದು ಚಿಕಿತ್ಸಕನ ಜವಾಬ್ದಾರಿಯಾಗುತ್ತದೆ. ಹೀಗಾಗಿ ಚಿಕಿತ್ಸಕನು ಅನುಕ್ಷಣವೂ ಖಿಗ್ಣನ ಚಟುವಟಿಕೆಗಳನ್ನು ಗಮನಿಸಬೇಕು. ಕಾಲಕಾಲಕ್ಕೆ ತಕ್ಕ ಸುಧಾರಣೆಗಳನ್ನು ಸೂಚಿಸಬೇಕು. ಉದಾಹರಣೆಗೆ -ಕುರ್ಚಿಯಲ್ಲಿ ಕೂತಿರುವಾಗ ನೆಲದ ಮೇಲೆ ಬಿದ್ದ ವಸ್ತುವನ್ನು ಎತ್ತಿಕೊಳ್ಳಬೇಕೆಂದರೆ ಬಾಗಲೇಬೇಕು ತಾನೆ. ಆದರೆ ಸೊಂಟ ನೋವು ಇರುವಾತನ ಮಟ್ಟಿಗಂತೂ ಇದು ಅತ್ಯಂತ ಕಷ್ಟದಾಯಕ ಕೆಲಸ. ಡಾಕ್ಟರರು ಇಂಥವರಿಗೆ ನೆಲಕ್ಕೆ ಕೂತು ಬಿದ್ದ ವಸ್ತುವನ್ನೆತ್ತಿಕೊಳ್ಳುವಂತೆ ಹೇಳುತ್ತಾರೆ. ಆದರೆ ಪಾರ್ಶ್ವವಾಯು, ಸ್ನಾಯು ಸೆಡೆತ, ಸಂಧಿವಾತದ ರೋಗಿಗಳಿಗೆ ಹೀಗೆ ಬಾಗುವುದೂ, ಕೂತೇಳುವುದೂ ಕಷ್ಟ. ಇವರಿಗೆಂದೇ ಎಡಾಪ್ಟಿವ್ ಇಕ್ವಿಪ್‌ಮೆಂಟಿನ ನೆರವು ಒದಗಿಸಲು ಇದೀಗ ಅನುಕೂಲವಿದೆ. ನಿದಾನಕ್ಕನುಸಾರವಾಗಿ ಮತ್ತು ಅವಶ್ಯಕತೆಗೆ ತಕ್ಕಂತೆ ಎಡಾಪ್ಟಿವ್ ಇಕ್ವಿಪ್‌ಮೆಂಟ್ ತಯಾರಿಸಲ್ಪಡುತ್ತದೆ.

ಸೊಂಟನೋವಿನ ಬಾಧೆ ಅಸಹನೀಯ ಎಂಬುವವರಿಗೆ ಮನೆಯಲ್ಲೇನೋ ಅಡಿಗಡಿಗೂ ಇತರರ ನೆರವು ದೊರೆತೀತು. ಆದರೆ ಕಚೇರಿಯಲ್ಲಿ ಇಲ್ಲವೆ ಕಾರ್ಯನಿಮಿತ್ತ ಪ್ರವಾಸದಲ್ಲಿರುವವರಿಗೆ ಸ್ನಾನ ಮಾಡಲು, ಪ್ಯಾಂಟು ತೊಟ್ಟುಕೊಳ್ಳಲು, ಧರಿಸಲು ಅವಸ್ಥೆಪಡಬೇಕಾಗುತ್ತದೆ. ಇಂಥವರಿಗೆ ಎಡಾಪ್ಟಿವ್ ಇಕ್ವಿಪ್‌ಮೆಂಟ್ ಯಾವ ರೀತಿ ನೆರವಿಗೆ ಬರುತ್ತದೆನ್ನುವುದನ್ನು ಒಂದಷ್ಟು ನೋಡೋಣ.

ಸ್ನಾನಕ್ಕೆ ನಿಂತಾಗ (ಇಂಥವರು ಕೂಡುವುದಂತೂ ಸಾಧ್ಯವಿಲ್ಲವಲ್ಲ!) ತೊಡೆ, ಕಾಲು, ಪಾದಗಳನ್ನು ತಿಕ್ಕಿಕೊಳ್ಳಲು ಇವರಿಗೆ ಸ್ಪಂಜ್ ಉಳ್ಳ ಉದ್ದ ಹಿಡಿಕೆಯ ಒಂದು ಸಾಧನವನ್ನು ಒದಗಿಸಲಾಗುತ್ತದೆ. ಪ್ಯಾಂಟು ಧರಿಲು 'ಡ್ರೆಸಿಂಗ್ ಸ್ಟಿಕ್'



ಕೂತಲ್ಲೇ ಮನರಂಜನೆ ನೀಡುವ ಸಾಧನ

ನೆರವಿಗೆ ಬರುತ್ತದೆ. 'ಸಾಕ್ ಏಡ್' ಎಂಬ ಉಪಕರಣವು ಕಾಲು ಚೀಲ ತೊಡಲು, ಲೇಸಿಲ್ಲದ ಬೂಟು ಧರಿಸಲು ಅನುಕೂಲ.

ಹೀಗೆ ಆಯಾ ರೋಗಿಯ ಅಶಕ್ತತೆಯನ್ನು ಗಮನಿಸಿ ಆತನಿಗೆ ಸುಗಮವಾಗುವಂಥ ಉಪಕರಣವನ್ನು ವೈದ್ಯರೆ ವಿನ್ಯಾಸಗೊಳಿಸಿ, ತಯಾರಕರಿಗೆ ಸೂಚಿಸುತ್ತಾರೆ. ತೊಂದರೆಗೆ ಒಳಗಾದಾತ ದೈನಂದಿನ ತನ್ನ ಕೆಲಸಗಳಿಗೆ ಇತರರನ್ನು ಅವಲಂಬಿಸದೇ ತಾನೇ ಮಾಡಿಕೊಳ್ಳಲು ಶಕ್ತನನ್ನಾಗಿ ಮಾಡುವ ಸದಿಚ್ಛೆ ಆ ವೈದ್ಯರದು. ಮುದುಡಿ ಹೋಗಲಿರುವ ಮನಸ್ಸನ್ನು ಅರಳಿಸುವ ಕೆಲಸವೇನು ಸಣ್ಣದೇ?

ಇಷ್ಟಕ್ಕೇ ಮುಗಿಯುವುದಿಲ್ಲ. ಚಿಕಿತ್ಸಾನಂತರ ವ್ಯಕ್ತಿ ಮತ್ತೆ ಎಲ್ಲರಂತೆ ಎಂದಿನಂತೆ ಇರಬಲ್ಲನೆ? ಅಥವಾ ಇಂಥ ಸಾಧನಗಳ ಅವಶ್ಯಕತೆಯು ನಿರಂತರವೇ? ಆತ ಮೊದಲು ಮಾಡುತ್ತಿದ್ದ ಕೆಲಸವನ್ನೇ ಮುಂದುವರಿಸುವುದು ಸಾಧ್ಯವೇ? ಸಾಧ್ಯವಿಲ್ಲದಿದ್ದರೆ ಆತನಿಗೆ ಸಾಮಾಜಿಕ ಕಾರ್ಯಕರ್ತರ ಮದತ್‌ನಿಂದ ಬೇರೆಲ್ಲಾದರೂ ಕೆಲಸ ದೊರಕಿಸಿ ಕೊಡಲು ಸಾಧ್ಯವೇ ಎಂಬುದನ್ನು ಕೂಡ ವೈದ್ಯರು ಮಾನವೀಯ ದೃಷ್ಟಿಯಿಂದ ಯೋಚಿಸುತ್ತಾರೆ. ಸರಕಾರಿ ನೌಕರರ ವಿಷಯದಲ್ಲಿ ಹೀಗೆ ಬೇರೆಡೆ ಕೆಲಸ ದೊರೆಯುವುದಕ್ಕೆ ಸಮಸ್ಯೆಯೇನಿಲ್ಲ.

ಈ ಆಕ್ಯುಪೇಶನಲ್ ಥೆರಪಿ ಒಂದು ರೀತಿಯಲ್ಲಿ ರೋಗಿಯ ಪೂರ್ಣ ಪುನರ್ವಸತಿಗೆ ಅನು

ಕೂಲ ಒದಗಿಸುತ್ತದೆ. ಅನೇಕ ರೀತಿಯ ರೋಗಗಳಿಂದ ಬಳಲುತ್ತಿರುವವರಿಗೆ ಈ ಮೂಲಕ ಉಪಚಾರ ಹಾಗೂ ಪುನರ್ವಸತಿ ನಡೆಸಲಾಗುತ್ತಿದೆ. ಪೋಲಿಯೋ, ಮಿದುಳು ಲಕ್ವ (ಸೆರೆಬ್ರಲ್ ಪಾಲ್ಸಿ), ಮತಿಮಂದತ್ವ, ಮಾನಸಿಕ ಅಸ್ವಾಸ್ಥ, ಮೂಳೆಗಳ ಜ್ವರ, ಲಕ್ವ ಇತ್ಯಾದಿ.

ನಮ್ಮ ದೇಶದಲ್ಲಿ ಈ ತೆರನ ಉಪಚಾರವು ಇಪ್ಪತ್ತೈದು-ಮೂವತ್ತು ವರ್ಷಗಳಿಗೂ ಮೊದಲಿನಿಂದಲೇ ಜಾರಿಯಲ್ಲಿದೆ. ಆದರೆ ಮೂಲತಃ ಇದು ಅಮೆರಿಕದಿಂದಲೇ ಪರಿಚಯವಾದದ್ದು. ಅಮೆರಿಕ ಮತ್ತು ಯುರೋಪಿಯನ್ ದೇಶಗಳಲ್ಲಿ ಸಾಮಾನ್ಯವಾಗಿ ಎಲ್ಲ ಋಗ್ಣಾಲಯಗಳಲ್ಲೂ ಆಕ್ಯುಪೇಶನಲ್ ಥೆರಪಿಯ ವಿಭಾಗವಿದೆ.

ಕಳೆದ ಇಪ್ಪತ್ತೈದು-ಮೂವತ್ತು ವರ್ಷಗಳಿಂದಲೂ ಭಾರತದಲ್ಲಿ ಈ ಉಪಚಾರ ಪದ್ಧತಿ ಜಾರಿಯಲ್ಲಿದೆ ಎಂದೆನಲ್ಲವೆ? ಇದನ್ನು ಇಲ್ಲಿಗೆ ಪರಿಚಯಿಸಿದಾಕೆ ಶ್ರೀಮತಿ ಕಮಲಾಬಾಯಿ ನಿಮಕರ್ ಎಂಬಾಕೆ. ಮೂಲತಃ ಓರ್ವ ಅಮೆರಿಕನ್ ಆಗಿರುವ ಕಮಲಾಬಾಯಿ ನಿಮಕರ್ ಭಾರತೀಯನೊಬ್ಬನನ್ನು ಕೈಹಿಡಿದು ಇಲ್ಲಿಯೇ ನೆಲಸಿ ಭಾರತೀಯಳೇ ಆಗಿಬಿಟ್ಟಿದ್ದಾಳೆ.

ಈ ಉಪಚಾರ ಪದ್ಧತಿಯ ಶಿಕ್ಷಣ ನಾಲ್ಕು ವರ್ಷದ್ದು. ನಮ್ಮ ದೇಶದ ಬಹುತೇಕ ಸರಕಾರಿ ವೈದ್ಯಕೀಯ ಮಹಾವಿದ್ಯಾಲಯಗಳಲ್ಲಿ ಈ ಶಿಕ್ಷಣ ನೀಡಲ್ಪಡುತ್ತಿದೆ.

ಇತರರ ದಯೆಯನ್ನೇ ಅನ್ನವಾಗಿಸಿಕೊಂಡು ಬದುಕುವಂಥ ಹೀನಾಯ ಸ್ಥಿತಿಯಿಂದ ರೋಗಿಯನ್ನು ಪಾರು ಮಾಡುವಲ್ಲಿ ಈ ಉಪಚಾರ ಪದ್ಧತಿಯ ಪಾತ್ರ ದೊಡ್ಡದು.



"ಆಫೀಸಿಗೆ ಹೊತ್ತಾಯ್ತು ಅಂತ ಗೊತ್ತು ಕಣೇ.. ಆದ್ರೆ ಏನ್ಮಾಡ್ಲಿ.. ಮೊದಲು ನಾನು ಮೊದಲಿನ ಸ್ಥಿತಿಗೆ ಬರಬೇಕೋ.. ಬೇಡ್ವೋ.."

# —ನಿಮ್ಮ ಶಬ್ದ ಭಾಂಡಾರ ಬೆಳೆಯಲಿ—

## ಶಬ್ದ ಭಂಡಾರವು ಹಣದ ಭಂಡಾರಕ್ಕಿಂತಲೂ ಅಮೂಲ್ಯವಾಗಿದೆ.

ಇಲ್ಲಿ ಪ್ರತಿ ತಿಂಗಳು ಕೆಲವು ಶಬ್ದಗಳನ್ನು ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆ ಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥಗಳನ್ನು ವಿವರಿಸಿದೆ.

೧. ಅನ್ಯೂನ
ಅ) ಕೊರತೆ ಇಲ್ಲದ
ಆ) ಮೋಟಕಾದ
ಇ) ಮಧ್ಯಾಹ್ನ
ಈ) ಪರನಿಂದೆ

೨. ಕಿಂಚಿದೂನ
ಅ) ಸ್ವಲ್ಪವೂ ಬುದ್ಧಿಯಿಲ್ಲದ
ಆ) ಅರ್ಥ ರಹಿತ
ಇ) ಬಹಳ ನೋವು
ಈ) ಸ್ವಲ್ಪವೇ ಕಡಿಮೆಯಾದ

೩. ಅಪಸವ್ಯ
ಅ) ತಾಳಲಾರದ
ಆ) ವಿರುದ್ಧ
ಇ) ಎಡಬದಿಯ
ಈ) ನೀರು ಜಿನುಗುವ

೪. ಅತಿಗಳೆ
ಅ) ಗಟ್ಟಿಯಾಗಿ ಕೂಗು
ಆ) ಒಂದು ಸಸ್ಯ
ಇ) ತಿರಸ್ಕರಿಸು
ಈ) ರಕ್ತಪಿಪಾಸು ಪ್ರಾಣಿ

೫. ಓಲಗಿಸು
ಅ) ವಾದ್ಯ ಊದು
ಆ) ಸಿಂಹಾಸನದ ಮೇಲೆ ಕೂಡು
ಇ) ನಡುಗು
ಈ) ಸೇವೆ ಮಾಡು

೬. ಕೈತವ
ಅ) ಸಹಾಯ
ಆ) ಮೋಸ
ಇ) ಅಧಿಕ ಪ್ರಸಂಗ
ಈ) ಖಡ್ಗ

೭. ನಿಗೀರ್ಣ
ಅ) ಬಿದ್ದುಹೋದ
ಆ) ತುಕ್ಕುಹಿಡಿದ
ಇ) ನುಂಗಲ್ಪಟ್ಟ
ಈ) ಸಂಕೋಲೆಬಿಗಿದ

೮. ಸ್ವೇಯ
ಅ) ಸ್ವಂತದ
ಆ) ಬೆವರು
ಇ) ನೆನಪು
ಈ) ಎಚ್ಚರ

೯. ಹರಿಗೆಡಿ
ಅ) ಧಾರೆ ಕಡಿ
ಆ) ಒಡೆದ ಗಡಿಗೆ
ಇ) ದೋಣಿ
ಈ) ಬೇಡಿ

೧೦. ಕೈಯೂರು
ಅ) ಬಳೆ
ಆ) ಸೋಲೊಪ್ಪಿಕೊಳ್ಳು
ಇ) ಹೊಡೆಯಲು ಹೋಗು
ಈ) ದಮ್ಮಯ್ಯಹಾಕು

೧೧. ಚಕ್ಷುಷ್ಯ
ಅ) ಕನ್ನಡಕ
ಆ) ಕುರುಡ
ಇ) ನೋಡತಕ್ಕ
ಈ) ಚಕ್ಕುಲಿ

೧೨. ಜಿಘಾಂಸು
ಅ) ತಿನ್ನಲಾಶಿಸುವ
ಆ) ಸಾಯಲಿಚ್ಛಿಸುವ
ಈ) ತಿರಸ್ಕಾರಗೊಂಡ
ಈ) ಕೊಲ್ಲಬಯಸುವ

# 'ಶಬ್ದಭಂಡಾರ'ದ ಸರಿಯಾದ ಅರ್ಥಗಳು

೧. ಅನ್ಯೂನ

ಅ) ಕೊರತೆಯಿಲ್ಲದ, ಕುಂದಿಲ್ಲದ, ಊನವಿಲ್ಲದ, ಪೂರ್ಣ ಪರಿಪೂರ್ಣ (ಸಂ. ಅ + ನಿ + ಊನ)

೨. ಕಿಂಚಿದೂನ

ಈ) ಸ್ವಲ್ಪವೇ ಕಡಿಮೆಯಾದ, ತುಸುವೇ ಕೊರತೆಯುಳ್ಳ. ಉದಾ: "ಓಂಕಾರದ ಶಂಖನಾದಕ್ಕಿಂತ ಕಿಂಚಿದೂನ" (-ಬೇಂದ್ರೆ) - ಅಂದರೆ ಓಂಕಾರದ ಶಂಖನಾದಕ್ಕಿಂತ ಸ್ವಲ್ಪ ಮಾತ್ರ ಕಡಿಮೆಯಾದ. (ಸಂ. ಕಿಂಚಿತ್ = ಸ್ವಲ್ಪ ಊನ)

೩. ಅಪಸವ್ಯ

ಅ) ವಿರುದ್ಧ, ಅಯೋಗ್ಯ, ಅಶುಭ, ಉದಾ - ಅವನ ವಿಚಾರಗಳೇ ಅಪಸವ್ಯವಾದವು. (ಸಂ. ಅಪ = ವಿರುದ್ಧ, ಸವ = ಎಡ ಅಂದರೆ ಎಡದಿಕ್ಕಿಗೆ ಇರದ್ದು. ಬ್ರಾಹ್ಮಣರ ಜನಿವಾರ ಎಡ ಹೆಗಲಿನಿಂದ ಬಲಗಡೆಗೆ ಜೋತಾಡುತ್ತಿರುತ್ತದೆ. ಶ್ರಾದ್ಧ ಮೊದಲಾದ ಅಶುಭ ಕರ್ಮಗಳಲ್ಲಿ ಜನಿವಾರವನ್ನು ತದ್ವಿರುದ್ಧ ದಿಕ್ಕಿಗೆ ಹಾಕಿಕೊಳ್ಳುವುದರಿಂದ 'ಅಪಸವ್ಯ' ಅಶುಭವನ್ನು ಸೂಚಿಸುತ್ತದೆ.

೪. ಅತಿಗಳೆ

ಇ) ತಿರಸ್ಕರಿಸು, ಧಿಕ್ಕರಿಸು, ಮೀರಿನಡೆ, ಅಲಕ್ಷಿಸು. ಉದಾ - ಕಾಯದೆಗಳನ್ನು ಅತಿಗಳೆಯುವ ಪ್ರವೃತ್ತಿ ಕೆಟ್ಟದ್ದು (ಅತಿ + ಕಳೆ)

೫. ಓಲಗಿಸು

ಈ) ಸೇವೆಮಾಡು, ಆಶ್ರಯಿಸು, ಅನುಸರಣ ಮಾಡು, ಹೇಳಿದಂತೆ ನಡೆ. ಉದಾ - ಅಧಿಕಾರಿಗಳನ್ನು ಓಲಗಿಸಿ ಕಾರ್ಯಸಾಧನೆ ಮಾಡಿಕೊಳ್ಳುತ್ತಾನೆ (ಕನ್ನಡ ಓಲಗ = ಊಳಿಗ, ರಾಜಸಭೆ ಎಂಬುದರಿಂದ)

೬. ಕೈತವ

ಅ) ಮೋಸ, ವಂಚನೆ, ಜೂಜಾಟ. ಉದಾ ಕೈತವದಿಂದ ಅವಳನ್ನು ಒಲಿಸಿಕೊಂಡ (ಸಂ. ಕಿತವ = ಮೋಸಗಾರ)

೭. ನಿಗೀರ್ಣ

ಇ) ನುಂಗಲ್ಪಟ್ಟ, ಕಣ್ಮರೆಯಾದ. ಉದಾ = ಇಡಿ ಮನೆಯೇ ಭೂಕಂಪದಿಂದಾದ ಬಿರುಕಿನಲ್ಲಿ ನಿಗೀರ್ಣವಾಯಿತು. (ಸಂ. ನಿ = ಕೆಳಗೆ, ಗೀರ್ಣ = ನುಂಗಲ್ಪಟ್ಟದ್ದು)

೮. ಸ್ವೀಯ

ಅ) ಸ್ವಂತದ, ತನ್ನದಾದ, ತನಗೆ ಸೇರಿದ. ಉದಾ -ಅವನಲ್ಲಿ ಸ್ವೀಯವಾದ ವಿಚಾರಗಳೇನೂ ಇಲ್ಲ. (ಸಂ. ಸ್ವ = ತನ್ನ ಎಂಬುದರಿಂದ)

೯. ಹರಿಗಡಿ

ಅ) ಧಾರೆ ಕಡಿ, ಪ್ರವಾಹ ನಿಂತುಹೋಗು. ಉದಾ - ತನ್ನ ವಂಶ ಇಲ್ಲಿಗೇ ಹರಿಗಡಿಯುವುದೆಂದು ದಶರಥ ಭಯಪಟ್ಟ (ಕನ್ನಡ)

೧೦. ಕೈಯೂರು

ಅ) ಸೋಲೊಪ್ಪಿಕೊಳ್ಳು, ಸೋತುಹೋಗು, ಇನ್ನೇನು ಮಾಡಲೂ ದಾರಿ ಕಾಣದಾಗು. ಉದಾ - ಬಹಳ ಪ್ರಯತ್ನಮಾಡಿ ಕೊನೆಗೆ ಕೈಯೂರಿದ (ಕನ್ನಡ, ಕೈ + ಊರು)

೧೧. ಚಕ್ಷುಷ್ಯ

ಇ) ನೋಡತಕ್ಕ, ಕಣ್ಣಿಗೆ ಚಂದವಾದ, ಸುಂದರ, ಪ್ರೇಕ್ಷಣೀಯ, ಮನೋಹರ. (ಸಂ. ಚಕ್ಷುಸ್ = ಕಣ್ಣು ಎಂಬುದರಿಂದ)

೧೨. ಜಘಾಂಸು

ಈ) ಕೊಲ್ಲಬಯಸುವವ, ಶತ್ರು (ಸಂ)

## ನಿಮ್ಮ ಶಬ್ದಶಕ್ತಿಯ ತರಗತಿ.

ನೀವು ಎಷ್ಟು ಶಬ್ದಗಳಿಗೆ ಅರ್ಥ ಆಗಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

೭-೮ ಸರಿಯಿದ್ದರೆ ......... ಸಾಧಾರಣ

೯-೧೦ ಸರಿಯಿದ್ದರೆ ......... ಉತ್ತಮ

೧೧-೧೨ ಸರಿಯಿದ್ದರೆ ........ ಅತ್ಯುತ್ತಮ

ಪುಸ್ತಕ ವಿಭಾಗ

# ಫ್ಲೈಯಿಂಗ್ ಸಾಸರ್ಸ್

ಕೆ.ಪಿ. ಪೂರ್ಣಚಂದ್ರ ತೇಜಸ್ವಿ

• ಸಂಗ್ರಹ: ಶಶಿಕಲಾ ಎಚ್.

# ಫ್ಲಾಯಿಂಗ್ ಸಾಸರ್

## ಹೊಸ ವಿಜ್ಞಾನದ ಅರುಣೋದಯ

ಕಳೆದ ಮೂವತ್ತು ವರ್ಷಗಳಿಂದ ಜಾಗತಿಕ ವಿಜ್ಞಾನ ಕ್ಷೇತ್ರದಲ್ಲಿ ವಾದ, ವಿವಾದಗಳಿಗೆ, ದಿಗ್‌ಭ್ರಮೆಗಳಿಗೆ ಎಡೆ ಮಾಡಿಕೊಟ್ಟಿರುವ ಸಂಗತಿ ಎಂದರೆ ಯು.ಎಫ್.ಒ.ಗಳು (Unidentified Flying Object). ಇವುಗಳ ಇನ್ನೊಂದು ಹೆಸರು 'ಫ್ಲಾಯಿಂಗ್ ಸಾಸರ್'. ಅತ್ಯಂತ ಬಲಾಢ್ಯ ರಾಷ್ಟ್ರಗಳನ್ನೂ ಪೇಚಿಗೆ ಸಿಕ್ಕಿಸಿರುವ ಇವುಗಳ ವೇಗ ವಂತೂ ಅದ್ಭುತ. ಮಿಲಿಟರಿ ವಲಯಗಳಲ್ಲಂತೂ 'ಯು.ಎಫ್.ಒ.'ಎನ್ನುವ ಪದವೇ ಗಾಬರಿ ಸಂಕೋಚಗಳನ್ನು ಹುಟ್ಟಿಸತೊಡಗಿದೆ.

ಯು.ಎಫ್.ಒ. ಎಂದರೆ ಅಪರಿಚಿತ ಹಾರುವ ವಸ್ತುಗಳು. ಅಮೆರಿಕಾದ ವಾಯುದಳದವರು ಈ ಪದವನ್ನು ಸೃಷ್ಟಿಸಿದವರು. ಪರಿಚಯ ಹಿಡಿಯಲಾರದ ಈ ಹಾರುವ ವಸ್ತುವನ್ನು ಅನೇಕ ದಿನಗಳ ಸಂಶೋಧನೆ, ಸಮಾಲೋಚನೆಗಳ ಅನಂತರ ಯು.ಎಫ್.ಒ. ಎಂದು ಕರೆಯಲಾರಂಭಿಸಿ ವರ್ಗೀಕರಿಸಿದರು. ಟೀ ಸಾಸರುಗಳನ್ನು ಒಂದರ ಮೇಲೊಂದು ಬೋರಲಾಗಿ ಇಟ್ಟಂತೆ ಕಾಣುತ್ತದೆ ಎಂದು ಗುರ್ತಿಸಿ ಫ್ಲಾಯಿಂಗ್ ಸಾಸರ್ ಎಂದು ಕರೆದರು.

ಯಾವುದೇ ಶಬ್ದವಿಲ್ಲದೆ ನೆಲದಿಂದ ಮೇಲಕ್ಕೇರುವ, ಹೊಗೆ ಉಗುಳದೆ, ರೆಕ್ಕೆಗಳ ಬಲವಿಲ್ಲದೆ ನಿಃಶಬ್ದವಾಗಿ ಚಲಿಸುವ, ಆಕಾಶದಲ್ಲೇ ನಿಶ್ಚಲವಾಗಿ ನಿಲ್ಲುವ ಮತ್ತು ನಿಂತಲ್ಲಿಂದಲೇ ಗಂಟೆಗೆ ಹನ್ನೆರಡರಿಂದ ಇಪ್ಪತ್ತು ಸಾವಿರ ಮೈಲಿ ವೇಗದಲ್ಲಿ ಇದ್ದಕ್ಕಿದ್ದಂತೆ ಚಲಿಸುವ ಮತ್ತು ಅದೇ ವೇಗದಲ್ಲಿ ಎಡಕ್ಕೆ, ಬಲಕ್ಕೆ, ಹಿಂದಕ್ಕೆ ಹಠಾತ್ತಾಗಿ ದಿಕ್ಕು ಬದಲಿಸುವ ಇವು ಪೂರ್ವಿಕರ ಮಂತ್ರಚಾಲಿತ ವಿಮಾನಗಳ ಕಲ್ಪನೆಗಳನ್ನೂ ಮೀರುತ್ತವೆ.

ಇಂತಹ ಊಹಾತೀತವಾದ 'ಫ್ಲಾಯಿಂಗ್ ಸಾಸರ್'ಗಳ ಅಧ್ಯಯನದಲ್ಲಿ ಪ್ರಪಂಚದ ಖಗೋಲ ವಿಜ್ಞಾನಿಗಳೂ ಭೌತ ವಿಜ್ಞಾನಿಗಳೂ ತೊಡಗಿದ್ದಾರೆ. ಇದಕ್ಕಾಗಿ ಮಾಹಿತಿಗಳನ್ನು ಕಲೆಹಾಕುತ್ತಿದ್ದಾರೆ. ಇವುಗಳನ್ನು ಜನರು ಕಣ್ಣಿಂದ ನೋಡಿರುವುದಷ್ಟೇ ಅಲ್ಲ; ರೇಡಾರ್ ಪರದೆಗಳ ಮೇಲೂ ಗುರುತಿಸಲಾಗಿದೆ. ಇಂತಹ ಸಂಗತಿಗಳನ್ನು ಒಂದೆಡೆ ಕಲೆಹಾಕಿ ಅಭ್ಯಾಸ ಮಾಡುತ್ತಿರುವುದರಿಂದ ಇವು ನಂಬಲರ್ಹವಾದವೆಂದು ತೀರ್ಮಾನಿಸಲಾಗಿದೆ.

### ಲೇಖಕರ ಮಾತು

'ಫ್ಲಾಯಿಂಗ್ ಸಾಸರ್ಸ್' ಈ ಶತಮಾನದ ಪರಮರಹಸ್ಯಗಳಾಗಿವೆ. ಆಧುನಿಕ ಜಗತ್ತಿನ ತಂತ್ರಜ್ಞಾನ ಮತ್ತು ವೈಜ್ಞಾನಿಕ ತಿಳುವಳಿಕೆಗೂ ಈ ಒಗಟನ್ನು ಬಿಡಿಸಲು ಸಾಧ್ಯವಾಗಿಲ್ಲ.

ಪಾಶ್ಚಿಮಾತ್ಯ ವಿಜ್ಞಾನಿಗಳ ಅತ್ಯುನ್ನತ ತನಿಖಾ ಮಂಡಲಿಗಳ ವಿಶ್ಲೇಷಣೆಗಳನ್ನು ಮಾರ್ಗಸೂಚಿಯನ್ನಾಗಿ ಇಟ್ಟುಕೊಂಡು ನಾನು ಅನೇಕ ಘಟನೆಗಳನ್ನು ನಿಮ್ಮ ಮುಂದೆ ಇಡುತ್ತಿದ್ದೇನೆ. ಇಲ್ಲಿರುವುವೆಲ್ಲಾ ಅತ್ಯುನ್ನತ ವಿಜ್ಞಾನಿಗಳ ಅಗ್ನಿಪರೀಕ್ಷೆಯಲ್ಲಿ ಗೆದ್ದು ಹೊರಬಂದವು.

ಈ ಪುಸ್ತಕ ನಿಮಗೆ ಗಗನವನ್ನು ಈಕ್ಷಿಸುವಂತೆ, ನಕ್ಷತ್ರ, ಸೂರ್ಯ, ಗ್ರಹಗಳ ಬಗ್ಗೆ ಕಲ್ಪನೆ ಹರಿಸುವಂತೆ, ಅಲ್ಲಿ ಚಲಿಸುವ ಬೆಳಕುಗಳನ್ನು ಕುರಿತು ಚಿಂತಿಸುವಂತೆ ಮಾಡಿದರೆ ಪುಸ್ತಕದ ಉದ್ದೇಶ ಈಡೇರಿದ ಹಾಗೆ.

• *ಕೆ.ಪಿ. ಪೂರ್ಣಚಂದ್ರ ತೇಜಸ್ವಿ*

೧೯೫೩ರಲ್ಲಿ ಇಂಗ್ಲೆಂಡ್, ಅಮೆರಿಕಾ, ರಷ್ಯ, ಫ್ರಾನ್ಸ್ ದೇಶಗಳು ಅಣ್ವಸ್ತ್ರಗಳ ಪ್ರಯೋಗ ನಡೆಸುತ್ತಿದ್ದಾಗ, ಅವುಗಳ ರಕ್ಷಣಾ ಸ್ಥಾವರಗಳ ಮೇಲೆ ಯು.ಎಫ್.ಓ.ಗಳ ಹಾರಾಟ ವೀಕ್ಷಣೆಗಳು ಆರಂಭವಾದವು. ಆಯಾ ಸರ್ಕಾರಗಳು ಇವುಗಳನ್ನು ಬೇರೆ ದೇಶಗಳ ನಿಗೂಢ ಯಂತ್ರಗಳೆಂದು ಬಗೆದವು. ಅಮೆರಿಕಾದಲ್ಲಿ ಇವುಗಳ ಪರಿಶೀಲನೆಗೆ 'ಪ್ರಾಜೆಕ್ಟ್ ಬ್ಲೂ ಬುಕ್' ಎಂಬ ಯೋಜನೆಯನ್ನು ತಯಾರು ಮಾಡಲಾಯಿತು. ಇದರಲ್ಲಿ ಉನ್ನತ ಮಿಲಿಟರಿ ಅಧಿಕಾರಿಗಳು, ವಿಜ್ಞಾನಿಗಳ ಸಮಿತಿ ಇತ್ತು. ಇದರ ಉದ್ದೇಶ ದೇಶದ ಭದ್ರತೆಗೆ ಏನಾದರೂ ವಿಪತ್ತು ಇದೆಯೇ ಎಂದು ನೋಡುವುದು ಅಷ್ಟೇ. ಇದು ಉಪಯುಕ್ತ ಮಾಹಿತಿಯನ್ನು ಸಂಗ್ರಹಿಸಿತು.

ಇದೇ ಸಂದರ್ಭದಲ್ಲಿ ಫ್ಲಾಯಿಂಗ್ ಸಾಸರ್ ಬಗ್ಗೆ ಮಾತನಾಡುವ ಜನರನ್ನು ಬುದ್ಧಿವಿಕಲರೆಂದೋ, ಸುಳ್ಳರೆಂದೋ ನೋಡುತ್ತಿದ್ದಾಗ ಅಮೆರಿಕಾದ ಆಡಮ್‌ಸ್ಕೀ ಎಂಬ ಖಗೋಲ ವಿಜ್ಞಾನಿ "Flying Saucers have landed" ಎಂಬ ಪುಸ್ತಕ ಪ್ರಕಟಿಸಿದರು. ಸಾಸರುಗಳ ಛಾಯಾಚಿತ್ರಗಳನ್ನೂ, ಬೇರೊಂದು ಲೋಕದ ಜನರೇ ಅವುಗಳನ್ನು ನಿರ್ಮಿಸಿದರೆಂಬುದನ್ನೂ, ಅಂಥವರನ್ನು ಅವರು ಸಂಧಿಸಿ ಮಾತನಾಡಲು ಪ್ರಯತ್ನಿಸಿದ್ದನ್ನೂ ತಮ್ಮೊಡನಿದ್ದ ಸಾಕ್ಷ್ಯಗಳೊಡನೆ ಪ್ರಕಟಿಸಿದರು. ಇದರಿಂದ ಅನೇಕ ವಿಜ್ಞಾನಿಗಳಿಗೆ ತಮ್ಮ ನಂಬಿಕೆ, ಅನುಭವಗಳನ್ನು ಹೇಳಲೂ ವಿಶ್ಲೇಷಣೆಗಳನ್ನು ಮಂಡಿಸಲೂ ಧೈರ್ಯ ಬಂದಿತು.

### ವಿಶ್ವದಾದ್ಯಂತ ಅಲ್ಲೋಲಕಲ್ಲೋಲ

ಹಾಗಾದರೆ ಈ 'ಫ್ಲಾಯಿಂಗ್ ಸಾಸರ್' ಏನು? ಎಲ್ಲಿಂದ ಬರುತ್ತವೆ? ಎನ್ನುವುದಕ್ಕೆ ಖಚಿತ ಉತ್ತರ ಇನ್ನೂ ದೊರೆತಿಲ್ಲ. ಆದರೆ ಇವು ನಿಜವಾಗಲೂ ಬುದ್ಧಿವಂತ ಜೀವಿಗಳಿಂದ ನಿರ್ಮಿಸಲ್ಪಟ್ಟಿದ್ದರೆ, ಅವು ನಮಗಿಂತಲೂ ಮುಂದುವರಿದಿರುವ ಜೀವಿಗಳ ತಂತ್ರಜ್ಞಾನದ ತುಣುಕುಗಳು ಎಂಬುದು ಖಚಿತ.

ಎರಡನೇ ಮಹಾಯುದ್ಧದ ನಂತರ 'ಫ್ಲಾಯಿಂಗ್ ಸಾಸರ್'ಗಳ ವರದಿ ಬರುವುದು ಹೆಚ್ಚಾಗತೊಡಗಿತು. ಗಂಟೆಗೆ ಏಳುನೂರು ಮೈಲುಗಳಿಗಿಂತಲೂ ಮಿಗಿಲಾದ ವೇಗದಲ್ಲಿ ಹಾರಾಡುವ ವಿಮಾನಗಳ ಸೃಷ್ಟಿಯಾದುದರಿಂದ ಜನ ಇವುಗಳ ವೀಕ್ಷಣೆಗಾಗಿ ಆಕಾಶವನ್ನು ಗಮನಿಸತೊಡಗಿದರು. ಇದರಿಂದಾಗಿ ಅನೇಕ ಸಂಗತಿಗಳು ಅವರಿಗೆ ಗೋಚರಿಸಲಾರಂಭಿಸಿದವು.

ಯುದ್ಧಾನಂತರ ನಿಧಾನವಾಗಿ ಸಾಸರುಗಳ ಸಂಗತಿಗಳು ಬರಿಯ ವೈಮಾನಿಕರಿಂದಲ್ಲದೆ ಜೀವನದ ಇತರ ಕ್ಷೇತ್ರಗಳಲ್ಲಿ ಕೆಲಸ ಮಾಡುತ್ತಿರುವವರಿಂದಲೂ ಬರತೊಡಗಿದವು.

೧೯೫೦ರಲ್ಲಿ ಅಮೆರಿಕಾದ ರಾಜಧಾನಿ, ಯುದ್ಧ ಸ್ಥಾವರಗಳು, ಅಣುಸಂಶೋಧನಾ ಕೇಂದ್ರಗಳು ಇಲ್ಲೆಲ್ಲಾ 'ಯು.ಎಫ್.ಓ.'ಗಳು ರೇಡಾರ್ ಪರದೆಯ ಮೇಲೆ ಕಾಣಸಿಕೊಳ್ಳತೊಡಗಿ ಜನತೆಯಲ್ಲಿ ಕಾತರ, ಭಯವನ್ನೂ, ಮಿಲಿಟರಿ ವಲಯದಲ್ಲಿ ಭಿನ್ನಾಭಿಪ್ರಾಯವನ್ನೂ ಬಿತ್ತಿದವು. ವಾಯುಪಡೆಯವರು ಜನತೆಯ ಒತ್ತಡ ತಾಳಲಾರದೆ ಯು.ಎಫ್.ಓ. ಕಲ್ಪನೆಗಳೆಂದೂ, ಆಮ್ಲಜನಕ ವಿರಳವಾದ ಎತ್ತರದಲ್ಲಿ ಮಾನಸಿಕ ಒತ್ತಡಕ್ಕೀಡಾದ ವೈಮಾನಿಕರಿಗೆ ಇವು ಕಂಡಿವೆ ಎಂದು ಪತ್ರಿಕಾ ಹೇಳಿಕೆ ನೀಡಿದರು.

ಅಮೆರಿಕಾದ ಕ್ಷಿಪಣ ಸಂಶೋಧನಾ ಕೇಂದ್ರವು ಬಲವಾದ ಪಹರೆಯನ್ನೂ ಮೀರಿ ಪಹರೆ ಕಾಯು—

ಫ್ಲಾಯಿಂಗ್ ಸಾಸರ್ಸ್ (೧)
ಲೇಖಕರು: ಪೂರ್ಣಚಂದ್ರ ತೇಜಸ್ವಿ
ಪುಟ: ೯೫, ಬೆಲೆ: ೩೭ ರೂ.
ದೊರೆಯುವ ಸ್ಥಳ: ಪ್ರಕಾಶಕರು,
ಪುಸ್ತಕ ಪ್ರಕಾಶನ,
೯೧, ೯ನೇ ಮೇನ್,
ಸರಸ್ವತೀಪುರಂ,
ಮೈಸೂರು-೫೭೦ ೦೦೯.

ತ್ತಿದ್ದ ಬಿ-೨೯ ವಿಮಾನದ ಪಕ್ಕದಲ್ಲಿ ಸಾಸರೊಂದು ಸುತ್ತುತ್ತಾ ವೀಕ್ಷಿಸತೊಡಗಿತು. ಅದನ್ನು ಕ್ಯಾಮರಾ ಮುಖಾಂತರ ಫೋಟೋ ತೆಗೆದುಕೊಂಡಾಗ ಇದು ಭ್ರಾಂತಿಯಲ್ಲ ಎಂಬುದಕ್ಕೆ ಆಧಾರ ಸಿಕ್ಕಿತು.

ಇದಾದ ಕೆಲವೇ ದಿನಗಳಲ್ಲಿ ನೌಕಾಪಡೆಯ ವಿಜ್ಞಾನಿ ಕಾಲಿಜೇವ್‌ಸ್ಕೀ ಮತ್ತು ನೌಕಾಪಡೆಯ ಜನರಲ್ ವಿಮಾನದಲ್ಲಿ ಪ್ರಯಾಣಿಸುತ್ತಿರುವಾಗ ಸಿಗಾರ್ ಮಾದರಿಯ ಗಗನನೌಕೆ ವೇಗವಾಗಿ ಬರುತ್ತಿದ್ದುದನ್ನು ಕಂಡರು. ವಿಮಾನ ಕಂಡೊಡನೆಯೇ ಅದು ವೇಗ ನಿಧಾನಿಸಿ ವಿಮಾನವನ್ನು ಒಂದು ಸುತ್ತು ಸುತ್ತಿ ವೀಕ್ಷಿಸಿತು.

ಈ ನಡುವೆ 'ಲೈಫ್' ಪತ್ರಿಕೆ ಲೇಖನವೊಂದನ್ನು ಫೋಟೋಗಳ ಸಮೇತ "ಆಕಾಶದ ಆಚೆಯಿಂದ ನಮ್ಮಲ್ಲಿಗೆ ಅತಿಥಿಗಳು ಆಗಮಿಸುತ್ತಾರೆಯೆ?" ಎಂಬ ತಲೆಬರಹದಡಿ ಪ್ರಕಟಿಸಿತು.

ಅಮೆರಿಕಾದ ವಾಯುಪಡೆಯ ವಕ್ತಾರರು ಅಲ್ಲಗಳೆದಂತೆಲ್ಲಾ ನಿರಂತರವಾಗಿ 'ಫ್ಲಾಯಿಂಗ್ ಸಾಸರ್'ಗಳ ಸಂಗತಿಗಳು ಸಂಭವಿಸತೊಡಗಿದವು. ಆಗ ವಾಯುಪಡೆಯ ಉನ್ನತಾಧಿಕಾರಿಗಳು 'ಫ್ಲಾಯಿಂಗ್ ಸಾಸರ್'ಬಗೆಗಿನ ಎಲ್ಲ ವರದಿಗಳನ್ನು ATIO (Air Technical Intelligence Officers) ಎನ್ನುವ ಮಂಡಲಿಗೆ ಒಪ್ಪಿಸಿ ಜನಗಳಿಗೆ ತಿಳಿಸುವ ಜವಾಬ್ದಾರಿಯನ್ನು ಅದಕ್ಕೆ ಒಪ್ಪಿಸಿದರು. ಈ ಪತ್ರಿಕಾ ಹೇಳಿಕೆಯಲ್ಲಿ ಈವರೆವಿಗೂ ಬಳಸುತ್ತಿದ್ದ ಭ್ರಾಂತಿ, ತಪ್ಪುಕಲ್ಪನೆ, ಸುಳ್ಳು ಎಂಬ ಪದಗಳನ್ನು ಬಿಟ್ಟಿದ್ದರು. ಒಪ್ಪಿಕೊಳ್ಳಲೇಬೇಕಾದ ಅಸಹಾಯಕತೆಯ ಧಾಟಿ ಇತ್ತು.

## ಜುಲೈ ಕ್ರೈಸಿಸ್!

೧೯೫೨ರ ಜೂನ್‌ನಲ್ಲಿ ಜಗತ್ತಿನುದ್ದಂತ 'ಫ್ಲಾಯಿಂಗ್ ಸಾಸರ್' ಕಾಣಿಸಿಕೊಳ್ಳುವುದು ಹೆಚ್ಚಾಯಿತು. ಅದಕ್ಕೆ ಕಾರಣ ಗೊತ್ತಿರದಿದ್ದರೂ ಅಮೆರಿಕಾದ ರಕ್ಷಣಾ ಸ್ಥಾವರಗಳ ಮೇಲೆ, ಅಣುಸ್ಥಾವರಗಳ ಮೇಲೆ, ಮಿಲಿಟರಿ ವಿಮಾನಗಳ ಬಳಿ ಹೆಚ್ಚಾಗಿ ಕಾಣಿಸತೊಡಗಿದವು. ಇವು ಒಮ್ಮೊಮ್ಮೆ ಏಕಾಂಗಿಯಾಗಿ, ಒಮ್ಮೊಮ್ಮೆ ಹಲವಾರು ಆಕಾಶದಲ್ಲಿ ಹಾರಾಡುತ್ತಾ ವೀಕ್ಷಿಸುತ್ತಿದ್ದವು. ಯುದ್ಧ ವಿಮಾನಗಳಂತೆ ವ್ಯೂಹ ರಚಿಸಿಕೊಂಡು ಅಪರಿಮಿತ ವೇಗದಲ್ಲಿ ಹೋಗುತ್ತಿದ್ದವು.

ಇದ್ದಕ್ಕಿದ್ದಂತೆ ಒಮ್ಮೆ ಇಂಡಿಯಾನಾ ಪೊಲೀಸ್ ನಗರದಲ್ಲಿ ಸಾಸರೊಂದು ಸುಮಾರು ಐದುಸಾವಿರ ಅಡಿ ಎತ್ತರದಲ್ಲಿ ಕಾಣಿಸಿಕೊಂಡಿತು. ಸಂಜೆಯಾದ್ದರಿಂದ ಪಾರ್ಕಿನಲ್ಲಿ ದಾರಿಯಲ್ಲಿ ಜನಸಂದಣಿ ಹೆಚ್ಚಾಗಿತ್ತು. ಗಂಟೆಗೆ ಮುನ್ನೂರು ಮೈಲು ವೇಗದಲ್ಲಿ ಬೆಳಕಿನ ಉಂಡೆಯಂತೆ ಪ್ರಜಲ್ವಿಸುತ್ತಾ ಸಾಗಿದ 'ಫ್ಲಾಯಿಂಗ್ ಸಾಸರ್'ನ್ನು ಜನ ಕಂಡರು. 'ಫ್ಲಾಯಿಂಗ್ ಸಾಸರ್' ಮೊಟ್ಟಮೊದಲ ಬಾರಿಗೆ ದೊಡ್ಡನಗರವೊಂದರ ಮೇಲೆ ಹಾರಿತ್ತು! ಇದರ ವೀಕ್ಷಣೆಯಿಂದ ಜನರಲ್ಲಿ ಉಂಟಾದ ಗಾಬರಿ, ಗೊಂದಲ ಅಸದಳ.

ಇದಾದ ಮರುದಿನ ಪ್ರಯಾಣಿಕರನ್ನು ಸಾಗಿಸುತ್ತಿದ್ದ DC-೪ ವಿಮಾನದ ಎದುರು ಆರು ಫ್ಲಾಯಿಂಗ್ ಸಾಸರ್ ಕಂಡವು. ವಿಮಾನವನ್ನು ನೋಡುತ್ತಿದ್ದಂತೆ ತಮ್ಮ ವೇಗವನ್ನು ನಿಧಾನಿಸಿದವು. ವೇಗ ಕಡಿಮೆಯಾದಂತೆ ಅವುಗಳಿಂದ ಹೊಮ್ಮುತ್ತಿದ್ದ ಬಿಳಿಯ ಬೆಳಕು ನಿಧಾನವಾಗಿ ಹಳದಿಯಾಗುತ್ತ ಕೆಂಪು ಬಣ್ಣಕ್ಕೆ ತಿರುಗಿತು. ವಿಮಾನದ ಬಳಿ ಬಂದು ಚಕ್ಕನೆ ಬಲಕ್ಕೆ ತಿರುಗಿ 'V' ಆಕಾರದಲ್ಲಿ ವ್ಯೂಹ ರಚಿಸಿಕೊಂಡು ವಿಮಾನಕ್ಕೆ ಕೊಂಚವೇ ಮುಂದೆ ಹಾರುತ್ತಾ ಹೋಗುವುದನ್ನು ಎಲ್ಲರೂ ನೋಡಿದರು.

ನೋಡುತ್ತಿರುವಂತೆಯೇ ವಿಮಾನದ ಕೆಳಗಿನಿಂದ ಇನ್ನೆರಡು ಸಾಸರು 'V' ವ್ಯೂಹದಲ್ಲಿ ಹೋಗುತ್ತಿದ್ದವುಗಳನ್ನು ಮೀರಿಸಿ ಮುಂದೆ ಹೋದವು. ಆ ಯಂತ್ರಗಳು DC-೪ ವಿಮಾನದ ನಾಲ್ಕರಷ್ಟಿದ್ದವು. ಆ ಆರು ಸಾಸರು, ಮಿಕ್ಕೆರಡು ಸಾಸರ್‌ಗಳು ತಮಗಿಂತ ಮುಂದೆ ಹೋದೊಡನೆ ಅವುಗಳನ್ನು ಕೂಡಿಕೊಳ್ಳಲು ವೇಗ ಹೆಚ್ಚಿಸಿಕೊಂಡವು. ಅವುಗಳಿಂದ ಬರುತ್ತಿದ್ದ ಬೆಳಕು ಮತ್ತೆ ಕಿತ್ತಳೆ ಬಣ್ಣದಿಂದ ಬಿಳಿಯ ಬಣ್ಣಕ್ಕೆ ತಿರುಗಿತು. ಎಲ್ಲವೂ ಕ್ಷಣಮಾತ್ರದಲ್ಲಿ ಮಿಂಚಿ ಮಾಯವಾದವು.



ಕ್ಯಾಸ್ಕೇಡ್ ಪ್ರಕರಣದಲ್ಲಿ ತೋರಿ ಬಂದ ಹಾರಾಡುವ ತಟ್ಟೆಗಳ ಊಹಾ ಚಿತ್ರ

ಈ ಘಟನೆಯ ದಿನವೇ ಬಹಾಮಾ, ಹ್ಯಾಂಪ್ಟನ್, ವರ್ಜಿನೀಯಾ, ಇಂಡಿಯಾನಾ ಮುಂತಾದ ಕಡೆಯಿಂದ 'ಫ್ಲಾಯಿಂಗ್ ಸಾಸರ್' ಕುರಿತಾದ ವರದಿಗಳು ಬರತೊಡಗಿದವು.

ಜೂನ್ ೨೦ರಂದು ವಾಷಿಂಗ್‌ಟನ್‌ನಲ್ಲಿ ವೈಟ್‌ಹೌಸ್‌ನ ಮೇಲೆ 'ಫ್ಲಾಯಿಂಗ್ ಸಾಸರ್' ಕಂಡುಬಂದವು. ವಾಷಿಂಗ್ಟನ್ ನ್ಯಾಷನಲ್ ಏರ್‌ಪೋರ್ಟಿನ ರೇಡಾರ್ ಕಂಟ್ರೋಲ್ ಸೆಂಟರ್ 'ಜುಲೈ ಕ್ರೈಸಿಸ್'ನ ಕೇಂದ್ರವಾಗಿ ಪರಿಣಮಿಸಿತು.

ವಾಷಿಂಗ್ಟನ್ ವಿಮಾನ ನಿಲ್ದಾಣದಲ್ಲಿ ಇಳಿಯು ವಷ್ಟು ವಿಮಾನಗಳು ಪ್ರಪಂಚದ ಬೇರೆ ಯಾವ ವಿಮಾನ ನಿಲ್ದಾಣದಲ್ಲಿಯೂ ಇಳಿಯುವುದಿಲ್ಲ. ಇದರಲ್ಲಿನ ರೇಡಾರ್ ಕಂಟ್ರೋಲಿನ ಕೆಲಸ ಅತ್ಯಂತ ಸೂಕ್ಷ್ಮ ಆದ್ದರಿಂದ ಜಗತ್ತಿನ ಅತ್ಯುತ್ತಮ ರೇಡಾರ್ ತಜ್ಞರು ಇಲ್ಲಿದ್ದಾರೆ. ರೇಡಾರ್ ಪರದೆಯ ಮೇಲೆ ಸುಮಾರು ನೂರು ಮೈಲಿಗಳ ದೂರದಲ್ಲಿದ್ದಂತೆ ಸಣ್ಣ ಚುಕ್ಕಿಗಳಂತೆ ವಿಮಾನಗಳು ಕಾಣಸಿಕೊಳ್ಳು ತ್ತವೆ. ಚುಕ್ಕಿಗಳು ಪರದೆಯ ಮೇಲೆ ಬಂದೊಡನೆ ಪರದೆಯ ಹಿಂದಿನಿಂದ 'ಬ್ಲಿಪ್' ಎಂಬ ಸದ್ದು ಬರುತ್ತದೆ. ಆದ್ದರಿಂದ ಅಲ್ಲಿ ವಿಮಾನಕ್ಕೆ ಬ್ಲಿಪ್‌ಗಳೆಂದು ಕರೆಯುವುದು ರೂಢಿ.

ಜೂನ್ ೩೦ರಂದು ರೇಡಾರ್ ತಜ್ಞರ ಪಂಗ ಡದ ಮುಖ್ಯಸ್ಥನಾದ ಬರ್ನೇಸ್ ಕೆಲಸಕ್ಕೆ ಹಾಜರಾಗಿ, ಎಲ್ಲವನ್ನೂ ಪರೀಕ್ಷಿಸಿ, ಒಬ್ಬೊಬ್ಬರಿಗೆ ಒಂದೊಂದು ಕೆಲಸ ವಹಿಸಿ ಹೋದ. ಆಗ ಮಧ್ಯರಾತ್ರಿ.

ಸರಿಯಾಗಿ ೧೨.೪೦ಕ್ಕೆ ಪರದೆಯ ಮೇಲೆ ಅತ್ಯಂತ ವೇಗವಾಗಿ ಕಾಣಸಿಕೊಂಡ 'ಬ್ಲಿಪ್'ಗಳಿಂದ ಆಶ್ಚರ್ಯಚಕಿತನಾಗಿ ರೇಡಾರ್ ತಜ್ಞನೊಬ್ಬ ಈ ವಿಷಯವನ್ನು ಬರ್ನೇಸ್‌ಗೆ ತಿಳಿಸಿದ. ಬರ್ನೇಸ್ ಬೇರೆ ಪರದೆಗಳ ಮೇಲೂ ಇವುಗಳನ್ನು ಕಂಡು ಆಂಟೆನಾ ಗೋಪುರಕ್ಕೆ ಫೋನ್ ಮಾಡಿದಾಗ ಅಲ್ಲಿನ ಪರ ದೆಯ ಮೇಲಲ್ಲದೆ ಬರಿಗಣ್ಣಿಗೂ ಒಂದು ವಸ್ತು ಗೋಚರವಾಗುತ್ತಿರುವುದು ತಿಳಿಯಿತು. ಏರ್ ಡಿಫೆನ್ಸ್ ಕಮಾಂಡಿಗೆ ಫೋನ್ ಮಾಡಿ ಮಾತನಾ ಡುವಾಗ ಬರ್ನೇಸ್ ಪರದೆಯ ಮೇಲೆ ಅಮೇರಿಕಾ ಅಧ್ಯಕ್ಷರ ವೈಟ್‌ಹೌಸ್ ಮೇಲೂ, ವಾಶಿಂಗ್ಟನ್ ಸಿಟಿಯ ಮೇಲೂ ಬ್ಲಿಪ್‌ಗಳು ನಿಂತಿದ್ದನ್ನು ನೋಡಿದ.

ಈ ವೇಳೆಗೆ ನಿಲ್ದಾಣಕ್ಕೆ ಹತ್ತಿರವಾಗುತ್ತಿದ್ದ ವಿಮಾನಕ್ಕೆ ಯು.ಎಫ್.ಒ.ದ ಮೇಲೆ ನಿಗಾ ಇಡಲು ಕೋರಲಾಯಿತು. ವಿಮಾನ ಅವುಗಳಿಗೆ ಹತ್ತಿರವಾ ಗುತ್ತಿದ್ದಂತೆ ಯು.ಎಫ್.ಒ. ರೇಡಾರ್ ಪರದೆ ಯಿಂದ ಮಾಯವಾದವು. ಆಗ ಅವುಗಳ ವೇಗ ಗಂಟೆಗೆ ಸಾವಿರ ಮೈಲುಗಳಷ್ಟಿತ್ತೆಂದು ಬರ್ನೇಸ್ ಲೆಕ್ಕಹಾಕಿದ.

ನಿಲ್ದಾಣಕ್ಕೆ ವಿಮಾನ ಬರುತ್ತಿದ್ದಂತೆಯೇ ಮತ್ತೆ ರೇಡಾರ್ ಪರದೆಯ ಮೇಲೆ ಬ್ಲಿಪ್‌ಗಳು ಕಾಣಿಸಿ ದವು. ಈಗ ಯು.ಎಫ್.ಒ. ಸೆಕೆಂಡಿಗೆ ಎರಡು ಮೈಲು ವೇಗದಲ್ಲಿ ಬಂದಿತ್ತು. ರೇಡಾರ್ ಮುಖಾಂ ತರ ಬರಿಗಣ್ಣಿಗೆ ಹಾಗೂ ಟೆಲಿಸ್ಕೋಪ್‌ಗಳಲ್ಲಿ ಇಡೀ ಸಿಬ್ಬಂದಿವರ್ಗ ಗಂಟೆಗಳ ಕಾಲ ಇವುಗಳ ಮೆರವ ಣಿಗೆಯನ್ನು ವೀಕ್ಷಿಸಿತು.

## ಯು.ಎಫ್.ಒ.ಗಳ ಮೂಲ

ಜುಲೈ ಕ್ರೈಸಿಸ್ ನಂತರ ಹಲವಾರು ಸಂಗತಿಗಳು ಸಂಭವಿಸಿದವು. ವಾಯುದಳ ಇದನ್ನು ಗುಟ್ಟಾಗಿಡದೆ ಆಗಿಂದಾಗ್ಗೆ ಪತ್ರಿಕೆಗಳಿಗೆ ಬಿಡುಗಡೆ ಮಾಡಿ ಜನರೂ ಸಂಶೋಧನೆಯಲ್ಲಿ ತೊಡಗಿಕೊಳ್ಳುವಂತೆ ಮಾಡಲು. ನಿರ್ಧರಿಸಿತು. ಇದರಲ್ಲಿ ಮೆಕ್ಸಿಕೊ ಕೊಲ್ಲಿಯ ಘಟನೆ ಮುಖ್ಯವಾದದ್ದು.

ಲೂಸಿಯಾನಾದಿಂದ ಸುಮಾರು ನೂರು ಮೈಲುಗಳಷ್ಟು ದೂರದಲ್ಲಿ ಮೆಕ್ಸಿಕೊ ಕೊಲ್ಲಿಯ ಮೇಲೆ ಬಿ-೨೯ ಬಾಂಬರ್ ವಿಮಾನ ಹಾರುತ್ತಿತ್ತು. ಅದರ ಚಾಲಕ ಹಾರ್ಟರ್ ರೇಡಾರ್ ಆಪರೇಟರಿಗೆ ದೂರದ ಸಮುದ್ರ ತೀರವನ್ನು ವಿಶ್ಲೇಷಿಸಲು ಹೇಳಿ ದರು.

ರೇಡಾರ್ ಆಪರೇಟರ್ ಕೋಲ್‌ಮನ್ ಸಮುದ್ರ ತೀರವನ್ನು ಗಮನಿಸುತ್ತಿದ್ದಾಗ ಐದು ಗಂಟೆ ಇಪ್ಪತ್ತೈದು ನಿಮಿಷಕ್ಕೆ ಸರಿಯಾಗಿ ರೇಡಾರ್ ಪರ ದೆಯ ಮೂಲೆಯಲ್ಲಿ ಹಠಾತ್ತಾಗಿ ಒಂದು ಬ್ಲಿಪ್ ಕಾಣಿಸಿಕೊಂಡಿತು. ರೇಡಾರ್ ಕಿರಣದ ಎರಡನೇ

ಸುತ್ತಿಗೆ ಬ್ಲಿಪ್ ಹದಿಮೂರು ಮೈಲು ಚಲಿಸಿತ್ತು. ಮೂರನೇ ಸುತ್ತಿಗೆ ಬಿ-೨೯ ವಿಮಾನದತ್ತಲೇ ಚಲಿಸತೊಡಗಿತು.

ಕೋಲ್‌ಮನ್ ಮತ್ತು ಇನ್ನೊಬ್ಬ ಆಪರೇಟರ್ ಬೇಯ್ಲಿ ಇಬ್ಬರೂ ಗಂಟೆಗೆ ೫೨೪೦ ಮೈಲಿ ವೇಗದಲ್ಲಿ ಬರುತ್ತಿದ್ದ ಬ್ಲಿಪ್‌ನ ವಿಷಯ ಕ್ಯಾಪ್ಟನ್‌ಗೆ ತಿಳಿಸಿದಾಗ ಪ್ರಾರಂಭದಲ್ಲಿ ನಂಬದಿದ್ದರೂ ತಾನೇ ರೇಡಾರ್ ಪರದೆಯ ಮೇಲೆ ನೋಡಿದಾಗ ನಂಬಲೇಬೇಕಾಯಿತು.

ಈ ವೇಳೆಗೆ ಕಿಟಕಿಯಿಂದ ಬಗ್ಗಿ ನೋಡಿದ ಬೇಯ್ಲಿಗೆ ಹಾರುವ ಸಾಸರೊಂದು ಕಾಣಿಸಿಕೊಂಡಿತು. ಅಷ್ಟರಲ್ಲಿ ಎಲ್ಲರ ರೇಡಾರ್ ಪರದೆಯ ಮೇಲೆ ಒಂದು ಗುಂಪು ಬ್ಲಿಪ್‌ಗಳು ಕಾಣಿಸಿಕೊಂಡವು. ಎಲ್ಲವೂ ವಿಮಾನದತ್ತಲೇ ಬರುತ್ತಿದ್ದವು. ಕ್ಷಣಾರ್ಧದಲ್ಲಿ ಮಾಯವಾದ ಇವು ವಿಮಾನ ಸಿಬ್ಬಂದಿ ಈ ಘಟನೆಯಿಂದ ಸುಧಾರಿಸಿಕೊಳ್ಳುತ್ತಿದ್ದಂತೆಯೇ ಮತ್ತೆ ಕಾಣಿಸಿಕೊಂಡವು. ವಿಮಾನದ ಹಿಂದೆ ನಲವತ್ತು ಮೈಲಿ ದೂರದಲ್ಲಿ ಐದು ಅಪರಿಚಿತ ವಸ್ತುಗಳು ಭಯಂಕರ ವೇಗದಲ್ಲಿ ವಿಮಾನದತ್ತ ಬರುತ್ತಿರುವುದನ್ನು ನೋಡಿ ಹಾರ್ಟರ್ ಗಾಬರಿಗೊಂಡ. ಅವು ಇದ್ದಕ್ಕಿದ್ದಂತೆ ವೇಗ ತಗ್ಗಿಸಿಕೊಂಡು ಆರು ನಿಮಿಷಗಳ ಕಾಲ ವಿಮಾನ ವೀಕ್ಷಿಸಿ ಮುಂದೆ ಹೋದವು.

ವಿಮಾನವನ್ನು ಮೀರಿಸಿ ಮುಂದೆ ಹೋದ ಅವು ಆಕಾಶದಲ್ಲಿ ತುಂಬ ಎತ್ತರದಲ್ಲಿದ್ದ ದೊಡ್ಡ ಬ್ಲಿಪ್ ಕಡೆಗೆ ಧಾವಿಸಿ ಅದರೊಳಗೆ ಐಕ್ಯವಾದವು. ತಕ್ಷಣ ದೊಡ್ಡ ಆಕಾಶಯಂತ್ರ ವೇಗ ಹೆಚ್ಚಿಸಿಕೊಂಡು ಕ್ಷಣಾರ್ಧದಲ್ಲಿ ರೇಡಾರ್ ಪರದೆಯಿಂದ ಮಾಯವಾಯಿತು. ಆಗ ಅದರ ವೇಗ ಗಂಟೆಗೆ ಒಂಭತ್ತು ಸಾವಿರ ಮೈಲುಗಳಷ್ಟಿತ್ತು.

ಈಗ ಸಂಗತಿ ನಿಚ್ಚಳವಾಗಿತ್ತು. ಯು.ಎಫ್.ಒ.ಗಳೆಲ್ಲ ಒಂದು ದೊಡ್ಡ ವಿಮಾನದಿಂದ ಬರುತ್ತವೆ. ಅದರಿಂದ ಹೊರಬಂದು ಭೂಮಿಯ ವೀಕ್ಷಣೆ ನಡೆಸುತ್ತವೆ. ಅವುಗಳ ವೇಗ ಗಮನಿಸಿದರೆ ಭೂಮಿಯ ಯಾವ ಭಾಗಕ್ಕಾದರೂ ಕ್ಷಣಾರ್ಧದಲ್ಲಿ ಹೋಗಿ ವೀಕ್ಷಣೆ ನಡೆಸಬಲ್ಲವು. ಟೆಕ್ಸಾಸ್ ಮೇಲೆ ಕಂಡ ದೃಶ್ಯವೂ ಇದೇ ಆಗಿತ್ತು.

ಈ ಯು.ಎಫ್.ಒ.ಗಳು ಭೂ ಮಂಡಲದ ಮೂಲದಿಂದ ಬರುತ್ತಿಲ್ಲ. ನಮ್ಮ ತಾರಾಮಂಡಲದ ಎಲ್ಲಿಂದಲೋ ಬರುತ್ತಿವೆ ಎಂಬ ಸಂದೇಹಕ್ಕೆ ಈ ಘಟನೆ ನೇರ ಸಾಕ್ಷಿಯಾಗಿತ್ತು.

## ಲೇಕನ್‌ಹೀತ್ ನೆಲೆಯ ವಿಚಿತ್ರ ಘಟನೆಗಳು

ಲೇಕನ್‌ಹೀತ್ ಪ್ರಕರಣವು ಒಂದು ಒಗಟಿನಂತಿದೆ. ಯು.ಎಫ್.ಒ.ಗಳಿಗೆ ಸಂಬಂಧಿಸಿದಂತೆ ಇದು ಒಂದು ಮುಖ್ಯ ದಾಖಲೆಯಾಗಿದೆ. ಕಾರಣವೇನೆಂದರೆ 'ಫ್ಲಾಯಿಂಗ್ ಸಾಸರ್‌ಗಳು' ಬುದ್ಧಿ ಅಥವಾ



೧೯೭೯ರಲ್ಲಿ ಕಂಡಿತೆನ್ನಲಾದ ರೆಕ್ಕೆ ಸಹಿತ ಆಕೃತಿ

ಪ್ರಜ್ಞೆಯಿಂದ ನಿಯಂತ್ರಿತವಾದವು ಎಂದು ಬಗೆಯಲು ಅವಕಾಶವಿದೆ. ಲೇಕನ್‌ಹೀತ್ ಪ್ರಕರಣದಲ್ಲಿ ಅವು ವರ್ತಿಸಿರುವ ರೀತಿ, ಅವುಗಳ ನಡವಳಿಕೆ ಸಂಪೂರ್ಣ ನಿಯಂತ್ರಿತ ಎಂದು ಇದನ್ನು ವಿಶ್ಲೇಷಿಸಿದ ಥಾಯರ್ ಕಮಿಟಿ ತನ್ನ ವರದಿಯಲ್ಲಿ ತಿಳಿಸಿದೆ.

ಥಾಯರ್ ತನ್ನ ತನಿಖೆಗಾಗಿ ಹೇಳಿಕೆ ತೆಗೆದುಕೊಂಡ ವ್ಯಕ್ತಿಗಳಲ್ಲಿ ಲೇಕನ್‌ಹೀತ್ ವಾಯುದಳ ವಿಮಾನ ನಿಲ್ದಾಣದ ರೇಡಾರ್ ಏರ್‌ಟ್ರಾಫಿಕ್ ಕಂಟ್ರೋಲ್ ಸೆಂಟರಿನ ರಾತ್ರಿ ಪಾಳಿಯ ಸೂಪರ್‌ವೈಜರ್‌ನ ಹೇಳಿಕೆ ಅತಿ ಮುಖ್ಯವಾದುದು. ಅವನ ಹೇಳಿಕೆ ಈ ರೀತಿ ಇದೆ, "ಡ್ಯೂಟಿಗೆ ಹಾಜರಾಗಿ ನಾನು ನನ್ನ ಸೀಟಿನಲ್ಲಿ ಕುಳಿತೊಡನೆ ಸ್ಕಲ್‌ಥ್ರೋಪ್ ವಿಮಾನ ನಿಲ್ದಾಣದ ರೇಡಾರ್ ಆಪರೇಟರ್ ತಾನು ಪರದೆಯ ಮೇಲೆ ಒಂದು ಅಪರಿಚಿತ ವಸ್ತುವನ್ನು ನೋಡಿದೆನೆಂದೂ ಮತ್ತು ಸಿ-೪೭ ವಿಮಾನದ ಚಾಲಕನೂ ಅದನ್ನು ಕಂಡನೆಂದೂ ತಿಳಿಸಿದ. ಕೂಡಲೇ ನಾನು ಎಲ್ಲಾ ರೇಡಾರ್ ಆಪರೇಟರಿಗೂ ಎಲ್ಲ ದಿಕ್ಕುಗಳಲ್ಲೂ ಹುಡುಕಿರೆಂದು ಆಜ್ಞಾಪಿಸಿದೆ. ಒಬ್ಬ ಆಪರೇಟರಿಗೆ ಲೇಕನ್‌ಹೀತ್‌ನ ಆಗ್ನೇಯ ದಿಕ್ಕಿನಲ್ಲಿ ಆಕಾಶದಲ್ಲಿ ನಿಶ್ಚಲವಾಗಿ ನಿಂತಿದ್ದ ಬ್ಲಿಪ್ ಕಾಣಿಸಿತು. ನಾವೆಲ್ಲ ಗಮನಿಸುತ್ತಿದ್ದಂತೆ ಇದ್ದಕ್ಕಿದ್ದಂತೆ ಚಲಿಸಲಾರಂಭಿಸಿತು. ಅದು ಚಲಿಸುವಾಗ ನಿಧಾನವಾಗಿ ವೇಗವನ್ನು ಹೆಚ್ಚಿಸಿಕೊಳ್ಳುತ್ತಿರಲಿಲ್ಲ. ತಟಕ್ಕನೆ ಗಂಟೆಗೆ ಆರುನೂರು ಮೈಲು ವೇಗದಲ್ಲಿ ಚಲಿಸಿ ಒಮ್ಮಿಂದೊಮ್ಮೆ ನಿಲ್ಲುತ್ತಿತ್ತು. ನಾನು ತಕ್ಷಣ ಲಂಡನ್ನಿನ ಏರ್ ಡಿವಿಷನ್ ಕಮಾಂಡಿಗೆ ವರದಿ ಮಾಡಿ, ವಸ್ತುವಿನ ವೀಕ್ಷಕ ವಿವರಣೆ ಕೊಡತೊಡಗಿದೆ. ನಂತರ ಲಂಡನ್ನಿನ ರಾಯಲ್ ಏರ್‌ಫೋರ್ಸ್ ಕಮಾಂಡಿಗೆ ಫೈಟರ್ ವಿಮಾನಗಳನ್ನು ಕಳಿಸಿರೆಂದು ಕೇಳಿದೆ. ಕೂಡಲೇ ಅಲ್ಲಿಂದ ಹೊರಟ ವಿಮಾನ ಸುಮಾರು ನಲ್ವತ್ತು ಮೈಲು ಇರುವಾಗಲೇ ನನ್ನೊಡನೆ ಸಂಪರ್ಕ ಪಡೆಯಿತು. ಅದಕ್ಕೆ ಹಿನ್ನೆಲೆಯನ್ನೆಲ್ಲಾ ವಿವರಿಸಿದೆ.

'ಇಷ್ಟೆಲ್ಲಾ ನಡೆಯುವಾಗ 'ಫ್ಲಾಯಿಂಗ್ ಸಾಸರ್' ಲೇಕನ್‌ಹೀತ್ ನೆಲೆಯ ಮೇಲೆ ನಿಶ್ಚಲವಾಗಿ ನಿಂತಿತ್ತು. ವೈಮಾನಿಕನಿಗೆ ದಿಕ್ಕು ಸೂಚಿಸುತ್ತ 'ಫ್ಲಾಯಿಂಗ್ ಸಾಸರ್' ಇರುವ ಕಡೆಗೆ ನಿರ್ದೇಶಿಸತೊಡಗಿದೆ. ಫೈಟರ್ ವಿಮಾನ ಸಾಸರನ್ನು ಸಮೀಪಿಸುತ್ತಿದ್ದಂತೆಯೇ ಸಾಸರ್ ಮಿಂಚಿನಂತೆ ವಿಮಾನದ ಹಿಂದಕ್ಕೆ ಹೋಗಿತ್ತು - ಎಷ್ಟು ವೇಗವಾಗಿ ಎಂದರೆ ರೇಡಾರ್ ಪರದೆಯ ಮೇಲೂ ಅದನ್ನು ಗಮನಿಸಲಾಗಿರಲಿಲ್ಲ.

"ವಿಮಾನದ ಚಾಲಕ ಸುತ್ತು ಬಳಸಿ ಅದಕ್ಕೆ ಅಭಿಮುಖವಾಗಿ ಹೋಗುತ್ತೇನೆಂದು ವಿಮಾನವನ್ನು ವೃತ್ತಾಕಾರವಾಗಿ ತಿರುಗಿಸಿದ. ಸಾಸರು ಅದೇ ವೇಗದಲ್ಲಿ ಹಿಂಬಾಲಿಸಿದ್ದರಿಂದ ಅದಕ್ಕೆ ಅಭಿಮುಖವಾಗಲು ಸಾಧ್ಯವಾಗಲಿಲ್ಲ. ಸಾಸರು ಆರುನೂರು ಅಡಿಗಳ ಅಂತರದಲ್ಲಿ ವಿಮಾನವನ್ನು ಹಿಂಬಾಲಿಸುತ್ತಲೇ ಇದ್ದು ಹತ್ತು ನಿಮಿಷಗಳ ನಂತರ ಚಾಲಕ ಹಿಂತಿರುಗಿದಾಗ ಸ್ವಲ್ಪ ದೂರ ಬಂದು ನಂತರ ಆಕಾಶದಲ್ಲಿ ನಿಶ್ಚಲವಾಗಿ ನಿಂತುಬಿಟ್ಟಿತು. ಯು.ಎಫ್.ಒ. ನಾಲ್ಕಾರು ಬಾರಿ ಸ್ಥಳ ಬದಲಿಸಿ ಅನಂತರ ಲೇಕನ್‌ಹೀತ್‌ಗೆ ಉತ್ತರಾಭಿಮುಖವಾಗಿ ಗಂಟೆಗೆ ಆರುನೂರು ಮೈಲಿ ವೇಗದಲ್ಲಿ ಹೊರಟು ಹೋಯಿತು."

ಯು.ಎಫ್.ಒ. ಸಂಗತಿಗಳನ್ನು ತನಿಖೆ ಮಾಡಲು ನಿಯಮಿಸಿದ್ದ ಸಮಿತಿಯ ಹೈನೆಕ್ ಈ ಘಟನೆಗಳನ್ನು 'ಫ್ಲಾಯಿಂಗ್ ಸಾಸರ್' ಘಟನೆಗಳೆಂದು ವರ್ಗೀಕರಿಸುತ್ತಾನೆ. ರಾತ್ರಿಯಲ್ಲಿ ಹಾರುವ ಬೆಳಕುಗಳು, ಮಿಂಚಿ ಮಾಯವಾಗುವ ತಟ್ಟೆಗಳು, ರೇಡಾರಿನ ಪರದೆಯಲ್ಲಿ ಕಾಣಿಸಿಕೊಳ್ಳುವ ಬ್ಲಿಪ್‌ಗಳು ಇವೆಲ್ಲ ಒಂದು ವರ್ಗ ಎನ್ನುತ್ತಾನೆ.

ಎರಡನೇ ವರ್ಗದಲ್ಲಿ ಮೊದಲ ವರ್ಗದ ಮುಖಾಮುಖಿ ಎನ್ನುತ್ತಾನೆ. ಎಂದರೆ ಹಾರುವ ಸಾಸರುಗಳನ್ನು ಮನುಷ್ಯ ಹತ್ತಿರದಿಂದ ನೋಡಿದ್ದು, ಹಾರುವ ತಟ್ಟೆಗಳು ಭೂಮಿಗಿಳಿದ ಸಂಗತಿಗಳನ್ನು ಇದೇ ವರ್ಗಕ್ಕೆ ಸೇರಿಸಬಹುದು.

ಮಾನವರನ್ನು ಹೋಲುವ ಜೀವಿಗಳು, ಯಂತ್ರಮಾನವರು ಮನುಷ್ಯರೊಡನೆ ಮುಖಾಮುಖಿಯಾದ ಘಟನೆಗಳನ್ನು ಮೂರನೆಯ ವರ್ಗಕ್ಕೆ ಸೇರಿಸಬಹುದು.

## ಮೌಂಟ್ ರೈನರ್

ಬಳಿಯ ಅಪಘಾತ

'ಫ್ಲಾಯಿಂಗ್ ಸಾಸರ್' ಘಟನೆಗಳ ವಿಶ್ಲೇಷಣೆ ಆರಂಭವಾಗುವ ಹಂತಗಳಲ್ಲಿ ಕೆನೆತ್ ಆರ್ನಾಲ್ಡ್‌ನ ಅನುಭವ ಮತ್ತು ಮೆಂಟಲ್‌ನ ದುರಂತ ಎರಡೂ ತುಂಬ ಮುಖ್ಯವಾದವು.

ಅಮೆರಿಕದ ಗೂಢಚರ್ಯೆ ವಿಭಾಗ ಈ ಸಂಗತಿಗಳನ್ನು ಯಾವ ಕ್ರಮದಲ್ಲಿ ವಿಶ್ಲೇಷಣೆ ಮಾಡುತ್ತಿತ್ತೆಂಬುದಕ್ಕೆ ಕೆನೆತ್ ಕೇಸನ್ನು ಪ್ರಾತಿನಿಧಿಕ ಉದಾಹರಣೆಯಾಗಿ ತೆಗೆದುಕೊಳ್ಳಲಾಗಿದೆ.

ಹುಡುಗನಾಗಿದ್ದಾಗಲೇ ವಿಮಾನದ ಹಾರಾಟ ಕಲಿತ ಕೆನೆತ್ ಮುಂದೆ ತನ್ನದೇ ಅಗ್ನಿಶಾಮಕ ಕಂಪನಿ ಸ್ಥಾಪಿಸಿದ. ನಂತರ ತನ್ನ ಕೆಲಸಕ್ಕೆ ವಿಮಾನ ಸಂಚಾರ ಅನಿವಾರ್ಯವಾದ್ದರಿಂದ ಒಂದು ವಿಮಾನವನ್ನು ಖರೀದಿಸಿದ.

ಜೂನ್ ೨೪, ೧೯೪೭ರಂದು ವಾಷಿಂಗ್‌ಟನ್‌ನಿಂದ ಯಾಕಿಮಾ ಎಂಬಲ್ಲಿಗೆ ಹೊರಟಿದ್ದ. ಆ ಸಂದರ್ಭದಲ್ಲಿ ನೌಕಾದಳದ ಸಾಗಾಣಿಕೆ ವಿಮಾನ ಮೌಂಟ್ ರೈನರ್ ಪರ್ವತಗಳ ಸಾಲಿನಲ್ಲಿ ಕೆಲವು ದಿನಗಳ ಹಿಂದೆ ಕಾಣೆಯಾಗಿತ್ತು. ಅವತ್ತಿನವರೆವಿಗೂ ಅದರ ಅವಶೇಷಗಳು ಸಿಕ್ಕಿರಲಿಲ್ಲ. ಅಪಘಾತದ ಕುರುಹುಗಳಾಗಲಿ ವಿಮಾನದ ಅವಶೇಷಗಳಾಗಲಿ ಕಾಣಿಸುತ್ತದೆಯೆ? ಎಂದು ನೋಡುವಂತೆ ಕೆನೆತ್‌ನನ್ನು ಕೇಳಿಕೊಳ್ಳಲಾಯಿತು. ಹೀಗೆ ಹುಡುಕಲು ಹೊರಟ ಸಂದರ್ಭದಲ್ಲೇ ಆತ ಫ್ಲಾಯಿಂಗ್ ಸಾಸರ್ ನೋಡಿದ ಘಟನೆ ಸಂಭವಿಸಿತು. ಆತನ ಮಾತುಗಳನ್ನು ಸಂಗ್ರಹಿಸಿ ಹೇಳುವುದಾದರೆ;

"ಕಳೆದುಹೋದ ವಿಮಾನದ ಅವಶೇಷಗಳನ್ನು ನೋಡಲು ಅಧಿಕಾರಿಗಳು ನಿರ್ದೇಶಿಸಿದ್ದರಿಂದ ನೇರವಾಗಿ ಮೌಂಟ್ ರೈನರ್ ಸಾಲಿನ ಕಡೆಗೆ ಹಾರಿದೆ. ಪರ್ವತಗಳು ಒಂಭತ್ತು ಸಾವಿರ ಅಡಿ ಎತ್ತರವಾಗಿದ್ದರಿಂದ ನಾನು ಒಂಭತ್ತು ಸಾವಿರದ ಐನೂರು ಅಡಿಗಳ ಎತ್ತರದಲ್ಲಿದ್ದೆ. ಪರ್ವತಗಳ ಸಾಲಿನುದ್ದಕ್ಕೂ ಕಣಿವೆ, ಕೊರಕಲುಗಳನ್ನೂ ಕಾಡುಗಳನ್ನೂ ನೋಡುತ್ತಾ ಹಾರುತ್ತಾ ಹೋದೆ. ಸುಮಾರು ಮೂರು ನಿಮಿಷ ಹೀಗೆಯೇ ಹಾರಿರಬಹುದು; ಇದ್ದಕ್ಕಿದ್ದಂತೆ ಮಿಂಚಿನಂಥ ಬೆಳಕು ವಿಮಾನದೊಳಗೆಲ್ಲಾ ಪ್ರತಿಫಲಿಸಿದ್ದರಿಂದ ಚಕಿತನಾಗಿ ಅತ್ತಿತ್ತ ನೋಡಿದೆ. ಆಕಾಶದಲ್ಲೆಲ್ಲಾ ಹುಡುಕುತ್ತಾ ಎಡಕ್ಕೆ ನೋಡಿದಾಗ ವಿಚಿತ್ರ ಆಕಾರದ ಆಕಾಶಯಂತ್ರಗಳು ಸಾಲುಗಟ್ಟಿಕೊಂಡು ಪರ್ವತದ ಕಡೆಗೆ ಸಾಗುತ್ತಿದ್ದವು. ೧೭೦ ಡಿಗ್ರಿಯಲ್ಲಿ ಪರಸ್ಪರ ವ್ಯೂಹ ರಚಿಸಿಕೊಂಡು ೯,೫೦೦ ಅಡಿ ಎತ್ತರದಲ್ಲಿ ಹಾರುತ್ತಿದ್ದವು. ಅವು ಶಿಖರಕ್ಕೆ ಹತ್ತಿರವಾಗುತ್ತಿದ್ದವು. ಆ ಯಂತ್ರಗಳ ಒಳಗಿನಿಂದ ಹಲವು ಬಾರಿ ಪ್ರಜ್ವಲಿ



೧೯೬೫ರಲ್ಲಿ ಆಂಗ್ಲ ಬಾಲಕ ತೆಗೆದ ಆಕೃತಿಯ ನೆನಪಿನ ಚತ್ರ

ಸುವ ಬೆಳಕು ಪ್ರತಿಫಲಿಸಿತು.

"ಇವು ನನ್ನಿಂದ ೨೦ ರಿಂದ ೨೫ ಮೈಲಿ ದೂರದಲ್ಲಿದ್ದವೆಂದು ಹೇಳಬಹುದು. ಈ ಯಂತ್ರಗಳ ಸಾಲು ಮೌಂಟ್ ರೈನರ್ ಕಣಿವೆಯಿಂದ ಮೌಂಟ್ ಹಡ್ಸನ್‌ವರೆಗೆ ಹಾರಿತು. ಈ ಎರಡು ಸಾಲುಗಳ ಅಂತರ ಐದು ಮೈಲಿ ಇತ್ತು. ಅವುಗಳ ವೇಗ ಮತ್ತು ಆಕಾರದ ಬಗ್ಗೆ ಆಶ್ಚರ್ಯಚಕಿತನಾಗಿದ್ದೆ. ಅವು ಹಡ್ಸನ್ ಶಿಖರದ ಬಳಿಗೆ ಬರುವ ವೇಳೆಗೆ ನನ್ನ ದೃಷ್ಟಿಯಿಂದ ದೂರವಾಗಿದ್ದವು.

"ಈ ವಿದ್ಯಮಾನದಿಂದ ಬರುವ ಊಹೆ, ತೀರ್ಮಾನಗಳು ನನಗೆ ಅನವಶ್ಯಕ. ಆದರೆ ನಾನು ನೋಡಿದ್ದು ನನಗೆ ಮುಖ್ಯ."

ಈ ಸಂಗತಿಯನ್ನು ಗೂಢಚಾರ ಇಲಾಖೆ, ವಾಯುದಳದ ವಿಶ್ಲೇಷಣ ವಿಭಾಗ ಕ್ಲಾಸಿಫೈಡ್ ಇನ್‌ಫರ್ಮೇಷನ್ (ರಹಸ್ಯ ಮಾಹಿತಿ) ಎಂದು ವರ್ಗೀಕರಿಸಿ ಆ ವಸ್ತುಗಳಿಂದ ಬೆಳಕು ವಿಮಾನಕ್ಕೆ ಪ್ರತಿಫಲಿಸಲು ಸಾಧ್ಯವಿಲ್ಲ, ಎರಡನೆಯದಾಗಿ ಕೆನೆತ್ ಆರ್ನಾಲ್ಡ್ ತಿಳಿಸಿರುವಂತೆ ಅವು ಶಬ್ದಾತೀತ ವೇಗದಲ್ಲಿ ಹಾರುತ್ತಿರಲಿಲ್ಲ ಎಂದು ತೀರ್ಮಾನಿಸಿ ಈ ಪ್ರತಿಕ್ರಿಯೆಯನ್ನು ಗೋಪ್ಯವಾಗಿರಿಸಿತು.

### ಕ್ಯಾಪ್ಟನ್ ಮೆಂಟಲ್‌ನ ದುರಂತ

ಇದು ನಡೆದದ್ದು ೧೯೪೭ರಲ್ಲಿ. ಆಗಿನ್ನೂ ಹಾರುವ ಈ ವಸ್ತುಗಳು ನಿಜವೇ ಅಥವಾ ಭ್ರಮೆಯೆ ಎಂದು ಯೋಚಿಸುತ್ತಿದ್ದ ಕಾಲ. ಫ್ಲಾಯಿಂಗ್ ಸಾಸರ್ಸ್ ತಮ್ಮ ವೈರಿಗಳಿರಬಹುದು ಎಂದು ಶಂಕಿಸಲು ಈ ಘಟನೆ ಆಸ್ಪದ ಕೊಟ್ಟಿದ್ದರಿಂದ ಸಾಸರ್‌ನ ಚರಿತ್ರೆಯಲ್ಲಿ ಇದಕ್ಕೊಂದು ವಿಶಿಷ್ಟ ಸ್ಥಾನವಿದೆ.

೧೯೪೮, ಜನವರಿ ೭ರಂದು ಕೆಂಟುಕಿಯ ಮ್ಯಾಡಿಸನ್ ವಿಲ್ಲಾದಲ್ಲಿನ ಜನಗಳಿಗೆ ಆಕಾಶದಲ್ಲಿ ವಿಚಿತ್ರಯಂತ್ರ ಕಾಣಿಸಿ ಅವರಲ್ಲಿ ಭಯ, ಆಶ್ಚರ್ಯವನ್ನುಂಟು ಮಾಡಿತು. ಪೊಲೀಸ್ ಮುಖ್ಯಸ್ಥರು ಫೋರ್ಟ್‌ನಾಕ್ಸ್ ವಿಮಾನ ನಿಲ್ದಾಣಕ್ಕೆ ಫೋನ್ ಮಾಡಿ ಅವು ನಿಲ್ದಾಣದತ್ತಲೇ ಬರುತ್ತಿರುವ ವಿಷಯ ತಿಳಿಸಿದರು.

ಸುಮಾರು ೩೦ ನಿಮಿಷಗಳ ನಂತರ ವಿಚಿತ್ರ ವಸ್ತು ನಿಲ್ದಾಣದ ಮೇಲೆ ಕಾಣಿಸಿಕೊಂಡು ನಿಶ್ಚಲವಾಗಿ ನಿಂತು ವೀಕ್ಷಣೆ ನಡೆಸತೊಡಗಿತು. ಅದರಿಂದ ಕೆಂಪು ಬಿಳಿ ಬೆಳಕು ನಾಡಿಯ ಮಿಡಿತದಂತೆ ಕ್ರಮವಾಗಿ ಹೊಮ್ಮತೊಡಗಿತು.

ಆ ವಿಮಾನದ ನೆಲೆಯಲ್ಲಿ ಕ್ಯಾಪ್ಟನ್ ಮೆಂಟಲ್ ಇತರ ಮೂವರಿಗೆ ವಿಮಾನದಲ್ಲಿ ತರಬೇತಿ ಕೊಡುತ್ತಾ ಹಾರಾಟ ನಡೆಸುತ್ತಿದ್ದರು. ಒಟ್ಟು ನಾಲ್ಕು ವಿಮಾನಗಳು ಆಕಾಶದಲ್ಲಿದ್ದವು.

ಯು.ಎಫ್.ಓ. ಗಾಡ್‌ಮ್ಯಾನ್ ನೆಲೆಗೆ ಬಂದೊಡನೆಯೇ ಮೆಂಟಲ್‌ನನ್ನು ಸಂಪರ್ಕಿಸಿ ಕೂಡಲೇ ಅದೇನೆಂದು ವೀಕ್ಷಿಸಲು ತಿಳಿಸಲಾಯಿತು.

ಕೆಲವೇ ಕ್ಷಣಗಳ ನಂತರ ಆತ ಆ ಕುರಿತು ವರದಿ ಕೊಡಲಾರಂಭಿಸಿದ. ಮೆಂಟಲ್ ಹಾರುವ ವಸ್ತುವಿಗೆ ತಾನು ಸಮೀಪಿಸಲು ಯತ್ನಿಸುತ್ತಿರುವುದಾಗಿ ತಿಳಿಸುತ್ತಲೇ ಮೆಂಟಲ್‌ನ ಧ್ವನಿ ನಿಂತಿತು. ಮತ್ತೆ ಮೆಂಟಲ್‌ನ ಸುಳಿವೇ ಸಿಗಲಿಲ್ಲ. ಮೆಂಟಲ್‌ನ ಜೊತೆ ಹಾರುತ್ತಿದ್ದ ಮೂರು ವಿಮಾನಗಳು ಹಾಗೆಯೆ ಮರಳಿದವು. ಅದೇ ದಿನ ಸಂಜೆ ಗಾಡ್‌ಮ್ಯಾನ್ ನೆಲೆಯಿಂದ ೧೪೦ ಮೈಲಿಗಳ ದೂರದಲ್ಲಿ ಮೆಂಟಲ್‌ನ ದೇಹ ವಿಮಾನಗಳ ಅವಶೇಷದೊಂದಿಗೆ ಪತ್ತೆಯಾಯಿತು. ದೇಹದ ಮೇಲೆ ಯಾವುದೇ ಗಾಯದ ಅಥವಾ ಸುಟ್ಟ ಗುರುತಿರಲಿಲ್ಲ.

ಇದಾದ ನಂತರ ಕ್ಯಾಪ್ಟನ್ ಚಿಲ್ಲೀಸ್ ಎನ್ನುವ ವೈಮಾನಿಕ ಮಾಂಟಗೋಮರಿ ಬಳಿ ಅಗಾಧ ಗಾತ್ರದ ಸಿಗಾರ್ ಮಾದರಿಯ ಸಾಸರ್ ಕಂಡ. ಈ ವಿಮಾನ ನೋಡುತ್ತಲೇ ದಿಕ್ಕು ಬದಲಿಸಿ ಅಸಾಧ್ಯ ವೇಗದಲ್ಲಿ ವಿಮಾನದತ್ತ ತಿರುಗಿತು. ವಿಮಾನದ ತೀರಾ ಹತ್ತಿರದಲ್ಲಿ ಹಾರಿ ಹೋದ ರಭಸಕ್ಕೆ ಬಿರುಗಾಳಿಗೆ ಸಿಕ್ಕಿದಂತೆ ವಿಮಾನ ಹತೋಟಿ ತಪ್ಪಿ ಹೊಯ್ದಾಡಿತು. 'ಫ್ಲಾಯಿಂಗ್ ಸಾಸರ್'ಗೆ ಸಾಲಾಗಿ ಕಿಟಕಿಗಳಿದ್ದುದನ್ನೂ ಒಳಗಡೆ ನೀಲಿಯ ಪ್ರಕಾಶಮಾನವಾದ ಬೆಳಕು ಇದ್ದುದನ್ನೂ ಆತ ನೋಡಿದ.

ಈ ಸಂಗತಿಗಳಿಗೆ ಸಂಬಂಧಿಸಿದಂತೆ ವಾಯು

ದಳಕ್ಕೆ ಜನರಿಗೆ ಯಾವ ರೀತಿ ಸಮಾಧಾನ ಹೇಳಬೇಕೆಂದು ಗೊತ್ತಾಗಲಿಲ್ಲ. ಅವರೂ ಇತರ ರಂತೆ ದಿಗ್ಭ್ರಾಂತರಾಗಿದ್ದರು.

ಮೆಂಟಲ್‌ನ ದುರಂತಕ್ಕೆ ಕಾರಣವನ್ನು ಪತ್ತೆ ಹಚ್ಚುವುದಕ್ಕೆ ಮೊದಲು ಆ ಆಕಾಶವಸ್ತು ಏನೆಂದು ತಿಳಿಯಲೂ ಆಗಲಿಲ್ಲ. ಆದರೆ 'ಫ್ಲಾಯಿಂಗ್ ಸಾಸರ್'ಗಳ ತೀರಾ ಸಾಮೀಪ್ಯ ವಿಮಾನಗಳಿಗೆ ಅಪಾಯಕರವಾಗಬಹುದೆಂದು ಹೇಳಬಹುದು.

### ಮೊದಲ ವರ್ಗದ ಮುಖಾಮುಖಿ

ಈವರೆಗೆ ತಿಳಿಸಿದ ಸಂಗತಿಗಳು ಡಾ. ಅಲೆನ್ ಜೆ. ಹೈನೆಕ್ ತಿಳಿಸುವಂತೆ 'ಫ್ಲಾಯಿಂಗ್ ಸಾಸರ್' ವರದಿಗಳು ಮಾತ್ರ. ಇವಾವವೂ ಹತ್ತಿರದ ಮುಖಾ ಮುಖಿಗಳಲ್ಲ. ಎಲ್ಲರೂ ನೋಡಿದ, ರೇಡಾರ್‌ನಲ್ಲಿ ಕಂಡ ಅಥವಾ ಮಿಂಚಿ ಮಾಯವಾದ, ಕತ್ತಲಲ್ಲಿ ಚಲಿಸುವ ಬೆಳಕುಗಳು ಮತ್ತು ಬೆಳಕಿನಲ್ಲಿ ಹಾರುವ ಸಾಸರುಗಳು.

ಇದರ ನಂತರದ ಘಟನೆಗಳನ್ನಾತ ಮೊದಲನೆ ದರ್ಜೆ ಮುಖಾಮುಖಿಯೆಂದು ಕರೆಯುತ್ತಾನೆ. ಅಂದರೆ ಮನುಷ್ಯರು 'ಫ್ಲಾಯಿಂಗ್ ಸಾಸರ್'ಗಳನ್ನು ಹತ್ತಿರದಿಂದ ನೋಡಿದ್ದು.

ಈ ರೀತಿ ಮೊದಲ ವರ್ಗದ ಮುಖಾಮುಖಿಗೆ ಬ್ಲೂಬುಕ್ ತನಿಖೆಗಳಿಂದ ಆಯ್ದು ಕೊಡಬಹು ದಾದ ಒಳ್ಳೆಯ ಉದಾಹರಣೆ ಮಾರ್ಚ್ ೧೩, ೧೯೫೭ರಲ್ಲಿ ನಡೆದದ್ದು. ಅದನ್ನು ಈ ರೀತಿ ಸಂಗ್ರಹಿಸಲಾಗಿದೆ.

ಮಹಿಳೆಯೊಬ್ಬಳು ತಾನು ಕಂಡ ಫ್ಲಾಯಿಂಗ್ ಸಾಸರಿನ ಬಗ್ಗೆ ಈ ರೀತಿ ಹೇಳುತ್ತಾಳೆ:

"ನಮ್ಮ ಮನೆ ನ್ಯೂಜರ್ಸಿಯ ಗ್ರೇಟ್ ಮೆಡೋಸ್ ಹೆದ್ದಾರಿಯ ಪಕ್ಕದಲ್ಲಿದೆ. ಮನೆಯ ಹಿಂಭಾಗದಲ್ಲಿರುವ ಇಳಿಜಾರಿನಲ್ಲಿ ಆಕಾಶಯಂತ್ರ ನಿಶ್ಚಲವಾಗಿ ಆಕಾಶದಲ್ಲಿ ನಿಂತಿತ್ತು. ನನ್ನಿಂದ ೧೫೦ ಅಡಿಗಳಷ್ಟು ದೂರದಲ್ಲಿತ್ತು.

"ಆ ಯಂತ್ರದ ಆಕಾರ ಹ್ಯಾಟಿನ ಹಾಗೆ ಇತ್ತು. ಆ ವಸ್ತುವಿನ ಉದ್ದ ಸುಮಾರು ೫೦ ಅಡಿ ಇದ್ದು ಮಧ್ಯಭಾಗದಲ್ಲಿ ೩೦ ಅಡಿ ಎತ್ತರದ ಗಂಟೆಯಾ ಕಾರದ ಗುಮ್ಮಟವಿತ್ತು. ಅದರ ಕೆಳಭಾಗ ಸಮಾ ನಾಂತರವಾಗಿ ಮುಚ್ಚಿದಂತಿದ್ದು ಯಾವುದೇ ಕಿಂಡಿ, ಕಿಟಕಿಗಳು ಕಾಣಿಸಲಿಲ್ಲ.

"ಯಂತ್ರವು ಬಿಳಿಯ ಬಣ್ಣದ್ದಾಗಿದ್ದು ಪಿಂಗಾಣಿ ವಸ್ತುವಿನಂತಿತ್ತು. ಅದು ನಿಶ್ಚಲವಾಗಿ ನಿಂತಿದ್ದಂತೆ ಕಂಡರೂ ಮೆಲ್ಲನೆ ಏರಿಳಿಯುತ್ತಿತ್ತು. ಅದರಿಂದ ಚಿಕ್ಕ ವಿದ್ಯುತ್ ಮೋಟಾರಿನಿಂದ ಬರುವಂಥ ಕ್ಷೀಣ ಧ್ವನಿ ಕೇಳಿಸುತ್ತಿತ್ತು. ಅದು ನಿಂತಿರಬೇಕಾದರೆ ಅದರ ಕೆಳಭಾಗದಿಂದ ಚಿನ್ನದ ರೇಖೆಗಳಂತೆ ಕಿಡಿಗಳು ಪ್ರಕಾಶಮಾನವಾಗಿ ಹೊಮ್ಮುತ್ತಿದ್ದವು. ಅದರಿಂದ ಬರುತ್ತಿದ್ದ ಸದ್ದಿನಲ್ಲಿ ಯಾವ ಬದಲಾವಣೆಯೂ ಆಗದೆ ಅದು ಇದ್ದಕ್ಕಿದ್ದಂತೆ ಮುನ್ನೂರು ಅಡಿ ಮೇಲೇರಿ ಅನಂತರ ಭಯಂಕರ ವೇಗದಲ್ಲಿ ಕಣ್ಮ ರೆಯಾಯಿತು."

ಇದೇ ರೀತಿ ಕ್ಯಾಲಿಫೋರ್ನಿಯಾದ ರೆಡ್‌ಬ್ಲಫ್ ಊರಿನ ಇಬ್ಬರು ಗಸ್ತಿನ ಪೊಲೀಸರು ರಾತ್ರಿ ಕಂಡ ಸಾಸರ್ ಘಟನೆಯನ್ನು ಏರಿಯಾ ಕಮ್ಯಾಂಡರ್‌ಗೆ ವರದಿ ಮಾಡಿದ ಘಟನೆಯನ್ನೂ ಮೊದಲನೆಯ ದರ್ಜೆ ಮುಖಾಮುಖಿಗೆ ಸೇರಿಸಬಹುದಾಗಿದೆ.

'ಫ್ಲಾಯಿಂಗ್ ಸಾಸರ್' ವಿದ್ಯಮಾನ ಗಮನಿಸಿ ದರೆ ಈ ಘಟನೆಗಳು ನಡೆದಿರುವುದು ಜನಸಂದಣಿ ಕಡಿಮೆ ಇರುವ ಅಥವಾ ನಿರ್ಜನ ಪ್ರದೇಶಗಳಲ್ಲಿ.

ಜನಬಾಹುಳ್ಯದಿಂದ ಬೀಗುತ್ತಿರುವ ಭಾರತದಲ್ಲಿ 'ಫ್ಲಾಯಿಂಗ್ ಸಾಸರ್'ಗಳು ಇಳಿಯಲು ಜಾಗ ತುಂಬ ಕಡಿಮೆ ಎಂದೇ ಹೇಳಬಹುದು. ಎರಡನೆ ಯದಾಗಿ ನಮ್ಮಲ್ಲಿ ರಕ್ಷಣಾ ಸ್ಥಾವರಗಳೂ ಅಣು ಸಂಶೋಧನಾ ಕೇಂದ್ರಗಳೂ ಮುಂದುವರಿದ ರಾಷ್ಟ್ರ ಗಳಷ್ಟು ಇಲ್ಲ.

ಇಷ್ಟಾದರೂ ನಮ್ಮ ದೇಶದ ಪತ್ರಿಕೆಗಳಲ್ಲಿಯೂ ಆಗಾಗ ಇವುಗಳ ವರದಿ ಬರುತ್ತಲೇ ಇವೆ ಎಂಬುದನ್ನು ಮರೆಯಬಾರದು. ಜೊತೆಗೆ ವರದಿ ಯಾಗಿರುವ ಸಂಗತಿಗಳನ್ನು ತನಿಖೆಗೆ ಒಳಪಡಿಸಿ ದಾಖಲು ಮಾಡುವ ಸರ್ಕಾರಿ ಅಥವಾ ಸ್ವತಂತ್ರ ಸಂಸ್ಥೆಗಳೂ ಇಲ್ಲಿ ಇಲ್ಲ.

## ಎಕ್ಸಟರ್ ಊರಿನಲ್ಲಿ ನಡೆದದ್ದೇನು?

ಎಕ್ಸಟರ್ ಘಟನೆಯ ಪ್ರಥಮ ಅಂಕ ಆರಂಭ ವಾಗುವುದು ನಾರ್ಮನ್ ಮಾಸ್ಕರೆಲ್ಲೋ ಎಂಬ ಯುವಕನ ವರದಿಯಿಂದ. ಮಾಸ್ಕರೆಲ್ಲೋ ಎಕ್ಸಟರ್ ಬಳಿಯ ೧೫೦ನೇ ನಂಬರಿನ ಹೆದ್ದಾರಿಯ ಬಳಿ ಪ್ರಯಾಣಿಸುತ್ತಿದ್ದಾಗ ಇದ್ದಕ್ಕಿದ್ದಂತೆ ಬೆಳಕೊಂದು ಹಿಂಬಾಲಿಸುತ್ತಿರುವಂತೆ ಭಾಸವಾಯಿತು. ಹಿಂದಿರುಗಿ ನೋಡಿದಾಗ ಯಾವುದೋ ಅಪರಿಚಿತ ಯಂತ್ರದಿಂದ ಬೆಳಕು ಬರುತ್ತಿರುವುದು ಗೊತ್ತಾಯಿತು.

ಆ ಯಂತ್ರದ ಎರಡು ತುದಿಯಲ್ಲಿಯೂ ಉಜ್ವಲವಾದ ಎರಡು ಕೆಂಪು ದೀಪಗಳಿದ್ದು ಅವೆರಡರ ನಡುವೆ ಐದು ಬಿಳಿಯ ದೀಪಗಳಿದ್ದವು. ಆ ದೀಪಗಳಿಂದಾಗಿ ಸುತ್ತಲಿನ ಪ್ರದೇಶವೆಲ್ಲಾ ಬಿಸಿಲು ಬಿದ್ದಂತೆ ಕಾಣುತ್ತಿತ್ತು. ಆ ದೀಪಗಳು ಆತನಿಂದ ಸುಮಾರು ನೂರು ಅಡಿ ದೂರದಲ್ಲಿ ಮತ್ತು ನೂರು ಅಡಿ ಎತ್ತರದಲ್ಲಿದ್ದವು.

ಆ ಬೆಳಕು ಸರದಿ ಪ್ರಕಾರ ಹತ್ತುತ್ತಾ ಆರುತ್ತಾ ಇತ್ತು. ಆ ವಸ್ತು ನಿಧಾನವಾಗಿ ಏರಿಳಿಯುತ್ತಿತ್ತು. ಮಾಸ್ಕರೆಲ್ಲೋನ ತಲೆಯ ಮೇಲಿಂದ ಪಕ್ಕದ ಮೈದಾನದ ಕಡೆಗೆ ನಿಧಾನವಾಗಿ ಅದು ತೇಲಿಹೋಯಿತು. ಒಮ್ಮೊಮ್ಮೆ ಮರಗಳ ಹಿಂದೆ ಮಾಯವಾಗಿ ಮತ್ತೆ ಮೇಲೇರುತ್ತಿತ್ತು. ಕೆಲವೊಮ್ಮೆ ಬೆಳಕು ಅವನ ಮೇಲೆ ಬೀಳುವಂತೆ ವೇಗವಾಗಿ ಬರುತ್ತಿತ್ತು. ಒಂದು ಬಾರಿಯಂತೂ ಮಾಸ್ಕರೆಲ್ಲೋ ತನಗೆ ಡಿಕ್ಕಿ ಹೊಡೆದೇ ಬಿಡುತ್ತದೆಂದು ತಿಳಿದು ಪಕ್ಕದ ಗುಂಡಿಯೊಳಗೆ ನೆಗೆದು ಕುಳಿತಿದ್ದ. ಸ್ವಲ್ಪ ಸಮಯದ ನಂತರ ಅವು ದೂರವಾದವು.

ಮಾಸ್ಕರೆಲ್ಲೋ ಈ ವಿಷಯವನ್ನು ಪೊಲೀಸರಿಗೆ ತಿಳಿಸಿದ. ಅವರು ಬೀಟ್ ಮೇಲಿದ್ದ ಆಫೀಸರ್ ಬರ್ಟ್ರಾಂಡ್‌ಗೆ ತಿಳಿಸಿದರು.

ಬರ್ಟ್ರಾಂಡ್ ದೈನಂದಿನ ಗಸ್ತು ತಿರುಗುತ್ತಿದ್ದಾಗ ಒಬ್ಬಾಕೆ ಚಿಂತಾಕ್ರಾಂತಳಾಗಿ ಕಾರಿನಲ್ಲಿ ಕುಳಿತಿದ್ದಳು. ಕಾರಣ ಕೇಳಿದಾಗ ಪ್ರಕಾಶಮಾನವಾದ ಬೆಳಕು ಕಾರನ್ನು ಹಿಂಬಾಲಿಸಿಕೊಂಡು ಬರತೊಡಗಿತೆಂದೂ ಕೊನೆಗೆ ಕಾರಿನ ಮೇಲೆ ಬಂತೆಂದೂ ಆದ್ದರಿಂದ ತಾನು ಗಾಬರಿಯಿಂದ ಕಾರು ನಿಲ್ಲಿಸಿರುವುದಾಗಿಯೂ ಹೇಳಿದಳು.

ಇದೇ ಸಂದರ್ಭದಲ್ಲಿ ಪೊಲೀಸ್ ಸ್ಟೇಷನ್ನಿಗೆ ಬರ್ಟ್ರಾಂಡ್ ಬಂದಾಗ ಮಾಸ್ಕರೆಲ್ಲೋ ಕೂಡ ಇದೇ ವಿಷಯ ಕುರಿತು ಹೇಳಿದ.

ಇಬ್ಬರೂ ಕಾರಿನಲ್ಲಿ ಕುಳಿತು ಪರೀಕ್ಷಿಸಲು ಹೊರಟರು. ಆ ಬಯಲಿನಲ್ಲಿ ಕೆಲ ಹೊತ್ತಾದ ನಂತರ ಕರಿಯ ಆಕೃತಿಯೊಂದು ನೆಲದಿಂದ ಮೇಲೇರುತ್ತಿರುವುದು ಕಾಣಿಸಿತು. ಆ ಆಕೃತಿಯ ದೀಪಗಳು ಹತ್ತಿಕೊಂಡು ಇವರ ಕಡೆಗೆ ಬರತೊಡಗಿದಾಗ ಬರ್ಟ್ರಾಂಡ್ ಮಾಸ್ಕರೆಲ್ಲೋಗೆ ನೆಲದ



ಕೆಂಟುಕಿ ಪ್ರಕರಣದಲ್ಲಿ ಕಂಡಿತೆಂದು ಹೇಳಲಾದ ಆಕೃತಿ

ಮೇಲೆ ಬಿದ್ದುಕೊಳ್ಳುವಂತೆ ಹೇಳಿ ತಾನೂ ಬಿದ್ದ. ಆದರೆ ಬೆಳಕು ನೂರು ಅಡಿಗಳವರೆಗೆ ಬಂದು ಹಿಂದಕ್ಕೆ ಹೋಯಿತು. ಮತ್ತೆ ಇವರ ಕಡೆಗೆ ವೇಗವಾಗಿ ಬರಲಾರಂಭಿಸಿತು. ಈ ಬಾರಿ ಇಬ್ಬರೂ ಕಾರಿನ ಹತ್ತಿರ ಹೋಗಿ ಇನ್ನೊಬ್ಬ ಪೊಲೀಸ್ ಅಧಿಕಾರಿ ಡೇವಿಡ್ ಹಂಟ್‌ಗೆ ಬರುವಂತೆ ವಿನಂತಿಸಿಕೊಂಡರು.

ಡೇವಿಡ್ ಹಂಟ್ ಬಂದಾಗಲೂ 'ಫ್ಲಾಯಿಂಗ್ ಸಾಸರ್' ಬಯಲಿನಲ್ಲಿಯೇ ಬೆಳಕು ಬೀರುತ್ತಾ ನಿಂತಿತ್ತು. ಅನಂತರ ದೂರ ಸರಿಯುತ್ತಾ ಕಣ್ಮರೆಯಾಯಿತು.

ಜವಾಬ್ದಾರಿಯುತವಾದ ಇಬ್ಬರು ಪೊಲೀಸ್ ಅಧಿಕಾರಿಗಳೂ ಒಬ್ಬ ಯುವಕನೂ ಸಾಕ್ಷಿಯಾಗಿದ್ದ. ಈ ಘಟನೆ ಎಲ್ಲ ಪತ್ರಿಕೆಗಳಲ್ಲಿಯೂ ವರದಿಯಾಯಿತು.

ಆದರೆ ಸರ್ಕಾರವು, "ಅಮೆರಿಕಾ ವಾಯುರಕ್ಷಣಾದಳದವರು ಆಕಾಶದಲ್ಲಿ ಪರೀಕ್ಷಾರ್ಥವಾಗಿ ನಡೆಸುತ್ತಿದ್ದ ವಿಮಾನವನ್ನು ಅಧಿಕಾರಿಗಳು ಯು.ಎಫ್. ಎಂದು ಭಾವಿಸಿದ್ದಾರೆ" ಎಂದು ಹೇಳಿಕೆ ನೀಡಿ ಪೊಲೀಸ್ ಅಧಿಕಾರಿಗಳನ್ನು ಅಪಹಾಸ್ಯಕ್ಕೆ ಗುರಿಮಾಡಿತು.

ಮೊದಲ ದರ್ಜೆ ಮುಖಾಮುಖಿಯಲ್ಲಿ ಈ ರೀತಿ ಸನ್ನಿವೇಶಗಳು ಅನೇಕ ಸಾರಿ ಸಂಭವಿಸಿದೆ.

## ಎಡ್ಗರ್ ಮತ್ತು ಸೋರ್ರಸ್ ಅನುಭವಗಳು

ಎಕ್ಸೆಟರ್ ಘಟನೆಯಲ್ಲಿ ಮೊದಲ ದರ್ಜೆಯ ಮುಖಾಮುಖಿಯಲ್ಲಿ ಉಂಟಾಗುವ ತೊಂದರೆಗಳನ್ನು ಗಮನಿಸಿದೆವು. ನೋಡಿದವರಿಗೆ ಮಾತ್ರ ಸತ್ಯ; ಉಳಿದವರಿಗೆ ಗುಮಾನಿ.

ಎಡ್ಗರ್ ಅಥವಾ ಎಡ್ಡಿಯ ಮಲಗುವ ಕೋಣೆಯ ಕಿಟಕಿಯಿಂದ ಪ್ರಕಾಶಮಾನವಾದ ಬೆಳಕು ಕಾಣಿಸಿಕೊಂಡಾಗ ಅವನು ಭಯದಿಂದ ಹೊರಗೆ ಬಂದ. ಅಷ್ಟರಲ್ಲಿ ನಾಯಿಗಳೆಲ್ಲಾ ಬೊಗಳುತ್ತಾ ಮನೆಯ ಸುತ್ತ ಓಡಾಡತೊಡಗಿದ್ದವು. ಅವನು ಹೊರಬಂದಾಗ ವಿಚಿತ್ರ ಆಕಾಶಯಂತ್ರ ಕಣ್ಣಿಗೆ ಬಿತ್ತು. ಸುಮಾರು ೧೫೦ ಅಡಿ ಅಗಲಕ್ಕೂ ಮಧ್ಯಭಾಗದಲ್ಲಿ ಅದರ ಅರ್ಧದಷ್ಟು ದಪ್ಪವಾಗಿಯೂ ಇದ್ದ ಆ ಯಂತ್ರ ಬೋರಲುಹಾಕಿದ ಹ್ಯಾಟಿನಂತೆ ಕಾಣುತ್ತಿತ್ತು. ಚಾಟಿಯನ್ನು ಗಾಳಿಯಲ್ಲಿ ಬೀಸಿದರೆ ಬರುವಂಥ ಶಬ್ದ ಅದರಿಂದ ಬರುತ್ತಿತ್ತು.

ಅದು ನೇರವಾಗಿ ಎಡ್ಡಿಯ ಕಡೆ ಬಂದು ಹತ್ತು ಅಡಿಗಳ ಎತ್ತರದಲ್ಲಿ ಅವನ ತಲೆಯ ಮೇಲೆ ಹಾಯ್ದುಹೋಯಿತು.

ಎಡ್ಡಿ ಮತ್ತೊಮ್ಮೆ ಮನೆಯಿಂದ ಹೊರಬಂದು ನೋಡಿದಾಗ ಈತನ ಕಡೆಗೆ ವೇಗವಾಗಿ ಬರತೊಡಗಿತು. ಹೆದರಿದ ಎಡ್ಡಿ ಮನೆಗೆ ಹೋಗಿ ಬಂದೂಕು ತರುವಷ್ಟರಲ್ಲಿ ಅದು ಹೊರಟುಹೋಗಿತ್ತು.

ಎಡ್ಡಿಯ ಮನೆಯ ಮೇಲೆ ಮೂರು ಸಾರಿ ಆ ಯಂತ್ರ ಅಡ್ಡಾಡಿ ನಂತರ ವೇಗವಾಗಿ ಆಕಾಶದಲ್ಲಿ ಮಾಯವಾಯಿತು.

ಇಂತಹ ಸಂದರ್ಭಗಳನ್ನು ಯು.ಎಫ್.ಒ.ಗಳ ಸಾನ್ನಿಧ್ಯವನ್ನು ಮನುಷ್ಯರಿಗಿಂತ ಬೇಗ ಪ್ರಾಣಿಗಳು ಕಂಡುಕೊಂಡಿವೆ. ಇದೇ ರೀತಿ ಪ್ರಾಣಿಗಳು ವಿಚಿತ್ರವಾಗಿ ವರ್ತಿಸಿದಾಗ ಅಥವಾ ಗೂಟ ಕಿತ್ತುಕೊಂಡು ಓಡಿದಾಗ ಅಲ್ಲೆಲ್ಲಾ ಯು.ಎಫ್.ಒ.ಗಳು ಕಾಣಿಸಿಕೊಂಡಿರುವುದನ್ನು ಗಮನಿಸಲಾಗಿದೆ.

ಹಾಗಾದರೆ ಯು.ಎಫ್.ಒ.ಗಳಿಂದ ಹೊಮ್ಮುವ ಸೂಕ್ಷ್ಮ ಕಂಪನಗಳನ್ನು ಗ್ರಹಿಸುವ ಸಾಮರ್ಥ್ಯ ಪ್ರಾಣಿಗಳಿಗಿದೆಯೆ?

ಇನ್ನೊಂದು ಗಮನಾರ್ಹ ಅಂಶವೆಂದರೆ ಅವು ವಿದ್ಯುತ್ ಉಪಕರಣಗಳನ್ನು ನಿಷ್ಕ್ರಿಯಗೊಳಿಸುವುದು. ಇದಕ್ಕೆ ಉದಾಹರಣೆ ಎಂದರೆ ವಾಯುದಳದ ಅಧಿಕಾರಿ ಸೋರ್ರಸ್‌ರವರ ಅನುಭವ.

ಸೋರ್ರಸ್ ನೆವಡಾದಿಂದ ಲಾಸ್‌ವೇಗಾಸ್ ಕಡೆಗೆ ಹೋಗುತ್ತಿದ್ದಾಗ ಕಾರು ಇದ್ದಕ್ಕಿದ್ದಂತೆ ನಿಂತುಹೋಯಿತು. ಎಷ್ಟು ಪ್ರಯತ್ನಿಸಿದರೂ ಚಾಲೂ ಆಗಲಿಲ್ಲ. ಪರೀಕ್ಷಿಸಲು ಕಾರಿನಿಂದ ಇಳಿದೊಡನೆ ಸಿಳ್ಳಿನಂಥ ಸದ್ದು ಕೇಳಿಸಿತು. ಸುತ್ತಲೂ ನೋಡಿದಾಗ ಮುನ್ನೂರು ಅಡಿಗಳಷ್ಟು ದೂರದಲ್ಲಿ ನಾಲ್ಕು

ತಟ್ಟೆಯಾಕಾರದ ವಿಚಿತ್ರ ಯಂತ್ರಗಳು ನಿಂತಿದ್ದವು.

ಹತ್ತಿರಕ್ಕೆ ಹೋಗಿ ೫೦ ಅಡಿಗಳ ದೂರದಲ್ಲಿ ನಿಂತು ನೋಡಿದಾಗ ನಾಲ್ಕೂ ಯಂತ್ರಗಳು ದೇದೀಪ್ಯಮಾನವಾಗಿ ಬೆಳಗುತ್ತಿದ್ದವು. ಭೂಮಿಯ ಮೇಲೆ ನಿಲ್ಲುವುದಕ್ಕೆ ಗೋಲಾಕಾರವಾದ ಮೂರು ಲ್ಯಾಂಡಿಂಗ್ ಗೇರ್‌ಗಳಿದ್ದವು. ಒಂದೊಂದು ಗೇರ್ ಅರ್ಧಗೋಲಾಕಾರವಾಗಿ ಎರಡು ಅಡಿಗಳಷ್ಟು ದಪ್ಪವಾಗಿ ಇತ್ತು. ಸಾಸರ್ಸ್ ೧೫ ಅಡಿಗಳಷ್ಟು ಎತ್ತರವಾಗಿದ್ದವು. ಪ್ರತಿ ಯಂತ್ರದ ಸುತ್ತ ಒಂದು ಉಂಗುರದಂಥ ವಸ್ತು ಮೆಲ್ಲಗೆ ಸುತ್ತುತ್ತಾ ಇತ್ತು. ನೋಡುತ್ತಿದ್ದಂತೆಯೇ ಸಿಳ್ಳಿನ ದನಿ ನಿಧಾನವಾಗಿ ಜೋರಾಯಿತು.

ಅವು ನೆಲಬಿಟ್ಟು ಮೇಲೇರಲಾರಂಭಿಸಿದವು. ಆಗ ಅವುಗಳ ಲ್ಯಾಂಡಿಂಗ್ ಗೇರ್ ಒಳಗೆ ತೂರಿಕೊಂಡವು. ನಂತರ ಕಣ್ಮರೆಯಾದವು.

ಅರ್ಧಗಂಟೆ ಇವುಗಳನ್ನು ನೋಡಿದ ಸೋರ್ಲಸ್ ನಂತರ ಅವು ನಿಂತಿದ್ದ ಸ್ಥಳಕ್ಕೆ ಹೋಗಿ ನೋಡಿದಾಗ ಒಂದು ಸಣ್ಣ ಹಳ್ಳ ಅಲ್ಲಿ ಕಾಣಸಿತು.

ಮತ್ತೆ ಮರಳಿ ಕಾರನ್ನು ಚಾಲೂ ಮಾಡಿದಾಗ ಯಾವುದೇ ತೊಂದರೆಯಿಲ್ಲದೆ ಕಾರು ಚಲಿಸಲಾರಂಭಿಸಿತು.

ಈ ಘಟನೆಯನ್ನು ಇಲ್ಲಿ ಉಲ್ಲೇಖಿಸಿದ್ದರ ಕಾರಣ ಇವು ವಿದ್ಯುತ್ ಜಾಲದ ಮೇಲೆ ಬೀರುವ ಪರಿಣಾಮಕ್ಕಾಗಿ. ಕಾರುಗಳು, ಟ್ರಾನ್ಸ್‌ಫಾರ್ಮರ್‌ಗಳು ಇತರ ವಿದ್ಯುತ್ ಉಪಕರಣಗಳು 'ಫ್ಲಾಯಿಂಗ್ ಸಾಸರ್'ಗಳಿಗೆ ಸಮೀಪವಾದೊಡನೆ ನಿಷ್ಕ್ರಿಯಗೊಂಡಿರುವ ಘಟನೆಗಳಿವೆ. ಕ್ಯಾಪ್ಟನ್ ಮೆಂಟಲ್‌ನ ದುರಂತಕ್ಕೆ ಕಾರಣ ಇದೂ ಇರಬಹುದಾದ ಸಾಧ್ಯತೆ ಇಲ್ಲದಿಲ್ಲ.

### ವಾಸ್ತವ-ಅವಾಸ್ತಗಳ ಅಂಚಿನಿಂದ

ಮೇಲೆ ತಿಳಿಸಿರುವ ಭೌತಿಕ ಪರಿಣಾಮಗಳನ್ನು ಡಾ. ಹೈನೆಕ್ ದ್ವಿತೀಯ ದರ್ಜೆಯ ಮುಖಾಮುಖಿ ಎನ್ನುತ್ತಾರೆ.

ಇನ್ನೊಂದು ಈ ಬಗೆಯ ದ್ವಿತೀಯ ದರ್ಜೆಯ ಮುಖಾಮುಖಿಗೆ · ಉದಾಹರಣೆಯೆಂದರೆ ಲುಡ್‌ವಿಗ್‌ರ ಅನುಭವ.

ರಾತ್ರಿ ಲುಡ್‌ವಿಗ್ ಎದ್ದು ದೀಪ ಹಾಕಿದಾಗ ದೀಪ ಇದ್ದಕ್ಕಿದ್ದಂತೆಯ ಆರಿಹೋಯಿತು. ಕಿಟಕಿಯಿಂದ ನೋಡಿದಾಗ ಸಾರ್ವತ್ರಿಕವಾಗಿ ವಿದ್ಯುತ್ ಸಂಪರ್ಕ ಕಡಿದುಹೋಗಿದ್ದು ಗೊತ್ತಾಯಿತು.

ಆದರೆ ಕಿಟಕಿಯಿಂದ ಪ್ರಕಾಶಮಾನವಾದ ಬೆಳಕು ಬರುತ್ತಿರುವುದನ್ನು ಗಮನಿಸಿ ಹೊರಗೆ ನೋಡಿದಾಗ ೫೦೦ ಅಡಿಗಳ ಎತ್ತರದಲ್ಲಿ ಹಾರುವ ವಸ್ತುವಿನಿಂದ ಪ್ರಕಾಶಮಾನವಾದ ಬೆಳಕು ಬರು



೧೯೫೦ಕ್ಕೂ ಮೊದಲು ಕಂಡಂಥವು ಇಂಥ ಆಕೃತಿಗಳಂತೆ

ತ್ತಿತ್ತು.

ಅದೇ ಸಮಯದಲ್ಲಿ ಹತ್ತಿರದ ವಿಮಾನ ನಿಲ್ದಾಣದಿಂದ ವಿಮಾನ ಮೇಲೆ ಹಾರಿದೊಡನೆ ಈ ವಸ್ತುವಿನಿಂದ ಬೆಳಕು ಬರುವುದು ನಿಂತು ಹೋಯಿತು. ಮತ್ತು ವಿಮಾನ ದೂರ ಹೋದಂತೆ ಮತ್ತೆ ದೀಪ ಹತ್ತಿಕೊಂಡಿತು.

ಮರುದಿನ ಲುಡ್‌ವಿಗ್ ವಾಸಿಸುತ್ತಿದ್ದ ಬಡಾವಣೆಯ ಹಲವಾರು ಟ್ರಾನ್ಸ್‌ಫಾರ್ಮರ್‌ಗಳು ಸುಟ್ಟು ಹೋಗಿದ್ದವು. ಆಶ್ಚರ್ಯವೆಂದರೆ 'ಫ್ಲಾಯಿಂಗ್ ಸಾಸರ್' ಹಾರಿದ ದಾರಿಯುದ್ದಕ್ಕೂ ಟ್ರಾನ್ಸ್‌ಫಾರ್ಮರ್‌ಗಳು ಸುಟ್ಟು ಹೋಗಿದ್ದವು.

'ದಿ ಗ್ರೇಟ್ ಬ್ಲಾಕ್ ಔಟ್' ಎಂದು ಅಮೆರಿಕಾದಲ್ಲಿ ಪ್ರಸಿದ್ಧವಾಗಿರುವ ೧೯೬೫ರ ವಿದ್ಯುತ್ ಕುಸಿತ ಆ ದೇಶದ ಅರ್ಧಭಾಗವನ್ನೇ ಕತ್ತಲು ಆವರಿಸುವಂತೆ ಮಾಡಿತ್ತು. ಇದಕ್ಕೂ ಫ್ಲಾಯಿಂಗ್ ಸಾಸರ್ ಚಟುವಟಿಕೆಗಳೇ ಕಾರಣ ಎಂದು ತಂತ್ರಜ್ಞರು ನಂಬಿದ್ದಾರೆ.

ದ್ವಿತೀಯ ದರ್ಜೆ ಮುಖಾಮುಖಿಯ ಅನುಭವಗಳು ಪ್ರಪಂಚದ ಎಲ್ಲೆಡೆಗಳಿಂದ ಸತತವಾಗಿ ವರದಿಯಾಗುತ್ತಲೇ ಇವೆ.

ತೃತೀಯ ದರ್ಜೆ ಮುಖಾಮುಖಿಯಲ್ಲಿ 'ಫ್ಲಾಯಿಂಗ್ ಸಾಸರ್' ಒಳಗಿನಿಂದ ಮನುಷ್ಯರು, ವ್ಯಕ್ತಿಗಳು ಅಥವಾ ಜೀವಿಗಳು ಹೊರಬಂದು ಜನರನ್ನು ಸಂಧಿಸಿರುವುದು ಕಂಡುಬರುತ್ತದೆ.

### ಫಾದರ್ ಗಿಲ್‌ರತ್ತ ಕೈ ಬೀಸಿದರು

ಪಪುವಾ ನ್ಯೂಗಿನಿಯಾದ ದಟ್ಟ ಕಾಡುಗಳಲ್ಲಿ ವಾಸಿಸುವ ಜನರ ಮಧ್ಯೆ ನಡೆದ ಘಟನೆಯಿದು. ಆ ಜನಗಳಿಗೆ ಪರಲೋಕದ ವಿಷಯ ಬೋಧಿಸಲಿಕ್ಕೆ ಒಬ್ಬ ಕ್ರಿಶ್ಚಿಯನ್ ಪಾದ್ರಿ ಇದ್ದರು. ಅವರೇ ಫಾದರ್ ಗಿಲ್. ಬಾಹ್ಯಾಕಾಶ ಜೀವಿಗಳ ವಿಚಾರದಲ್ಲಿ ನಂಬಿಕೆ ವಿಶ್ವಾಸಗಳಿಲ್ಲದ ಅವರು ಒಮ್ಮೆ ತಮ್ಮ ಊಟ ಮುಗಿಸಿ ಹೊರಬಂದಾಗ ಶುಕ್ರಗ್ರಹದ ಪಕ್ಕದಲ್ಲೇ ಆ ಗ್ರಹಕ್ಕಿಂತ ಪ್ರಕಾಶಮಾನವಾದ ಒಂದು ವಸ್ತು ಕಾಣಿಸಿತು. ಅದು ೨೦೦೦ ಅಡಿ ಎತ್ತರದಲ್ಲಿತ್ತು. ಆ ವಸ್ತುವನ್ನು ಗಮನವಿಟ್ಟು ನೋಡುತ್ತಿದ್ದಾಗ ಅದರಿಂದ ಒಂದಲ್ಲ ನಾಲ್ಕು ಮಾನವಾಕೃತಿಗಳು ಕಾಣಿಸತೊಡಗಿದವು. ಮಾನವಾಕೃತಿಗಳು ಫ್ಲಾಯಿಂಗ್ ಸಾಸರಿನ ಡೆಕ್ಕಿನ ಮೇಲೆ ಓಡಾಡುತ್ತಿದ್ದವು. ಬಗ್ಗುತ್ತಾ, ನಿಲ್ಲುತ್ತಾ ಡೆಕ್ಕಿನ ಮೇಲೆ ಏನನ್ನೋ ಮಾಡುತ್ತಿದ್ದವು. ಆ ಜನರಲ್ಲಿ ಒಬ್ಬಾತ ಒಳಗೆ ಹೋಗಿ ಒಂದು ನೀಲಿ ಪ್ರಕಾಶಬೀರುವ ಸ್ಪಾಟ್‌ಲೈಟ್ ತಂದಿಟ್ಟ.

ಸ್ವಲ್ಪ ಸಮಯದ ನಂತರ ದೊಡ್ಡಗಾತ್ರದ ಫ್ಲಾಯಿಂಗ್ ಸಾಸರ್ ಜೊತೆಗೆ ದೂರದಲ್ಲಿ ಇನ್ನೆರಡು ಚಿಕ್ಕ ಫ್ಲಾಯಿಂಗ್ ಸಾಸರ್ ಕಂಡವು. ದೊಡ್ಡ ಫ್ಲಾಯಿಂಗ್ ಸಾಸರ್ ಮೋಡದ ಮಟ್ಟಕ್ಕಿಂತ ಕೆಳಗಿಳಿದುದರಿಂದ ದೊಡ್ಡದಾಗಿ ಕಾಣುತ್ತಿತ್ತು. ಇದು ಆಕಾಶದಲ್ಲಿ ನಿಶ್ಚಲವಾಗಿ ನಿಂತಿರುವಾಗ ಕೆಲವು ಚಿಕ್ಕ ಗಾತ್ರದ ಸಾಸರುಗಳು ಬಂದೂ ಬಂದೂ ಹೋಗುತ್ತಿದ್ದುದರಿಂದ ಫಾದರ್ ಗಿಲ್ ಇದನ್ನು ಮಾತೃನೌಕೆ ಎಂದು ಊಹಿಸುತ್ತಾರೆ.

ಈ ಘಟನೆಯನ್ನು ಮೂರು ಮಂದಿ ಸ್ಕೂಲ್ ಟೀಚರ್, ಎಂಟು ಮಂದಿ ವೈದ್ಯಕೀಯ ಸಿಬ್ಬಂದಿಯೂ ನೋಡುತ್ತಿದ್ದರು.

ಇವರೆಲ್ಲಾ ನೋಡುತ್ತಿರುವಂತೆಯೇ ಅದರಿಂದ ಮನುಷ್ಯರು ಮತ್ತೆ ಹೊರಬಂದು ಡೆಕ್ಕಿನ ಮೇಲೆ ಏನನ್ನೋ ಮಾಡತೊಡಗಿದರು. ಒಮ್ಮೊಮ್ಮೆ ನಾಲ್ಕೈದು ಜನ, ಒಮ್ಮೊಮ್ಮೆ ಇಬ್ಬರು ಇರುತ್ತಿದ್ದರು. ಅವರು ಬಗ್ಗಿ ಕುಳಿತೇಳುತ್ತಿದ್ದುದನ್ನು ಕಂಡರೆ ಏನನ್ನೋ ರಿಪೇರಿ ಮಾಡುತ್ತಿರುವಂತೆ ತೋರುತ್ತಿತ್ತು. ಅಷ್ಟು ದೂರದಿಂದ ಅವರೂ ನಮ್ಮಂಥ ಮನುಷ್ಯರು ಎಂದು ಗುರುತಿಸಬಹುದಾಗಿತ್ತೇ ಹೊರತು ಎಂಥವರು ಎಂದು ಹೇಳಲಾಗುತ್ತಿರಲಿಲ್ಲ.

ಇದ್ದಕ್ಕಿದ್ದಂತೆಯೇ ರಿಪೇರಿ ಮಾಡುತ್ತಿದ್ದವರು ಕೆಲಸ ನಿಲ್ಲಿಸಿ ಡೆಕ್ಕಿನಿಂದ ಬಗ್ಗಿ ಇವರತ್ತ ನೋಡುತ್ತಿದ್ದಂತೆ ಕಂಡಿತು. ಫಾದರ್ ಗಿಲ್ ತಮ್ಮ ಕೈಯೆತ್ತಿ ಅವರತ್ತ ಬೀಸಿದರು. ಅತ್ಯಾಶ್ಚರ್ಯ!! ಫಾದರ್ ಗಿಲ್‌ರವರ ಸಂಜ್ಞೆಯನ್ನು ಅನುಕರಿಸುವಂತೆ ಅವರಲ್ಲೊಬ್ಬ ತಾನೂ ಕೈ ಬೀಸಿ ಉತ್ತರಿಸಿದ. ನಂತರ

ಡೆಕ್ಕಿನ ಮೇಲಿದ್ದವರೂ ಹಾಗೆಯೇ ಮಾಡಿದರು.

ಗಿಲ್ ನಂತರ ಒಂದು ಟಾರ್ಚನ್ನು ಸಾಸರ್ ಕಡೆಗೆ ಹಿಡಿದು ಅತ್ತಿಂದಿತ್ತ ಅಲುಗಾಡಿಸುತ್ತಾ ಸಂಜ್ಞೆ ಮಾಡಿದರು. ಸ್ವಲ್ಪ ಸಮಯದ ನಂತರ ಸಾಸರ್ ಕಡೆಯಿಂದ ನೀಲಿ ಬೆಳಕು ಅಲುಗಾಡಿತು.

ಇದೇ ರೀತಿ ಗಿಲ್ ಟಾರ್ಚ್ ಸಂಜ್ಞೆಯನ್ನು ಹಲವಾರು ಬಾರಿ ಮಾಡಿದರು. ಇದ್ದಕ್ಕಿದ್ದಂತೆ ಸಾಸರ್ ಗಾತ್ರ ಹಿರಿದಾಯಿತು. ವೇಗವಾಗಿ ಇವರ ಬಳಿ ಇಳಿಯತೊಡಗಿತು. ಒಂದು ನಿಮಿಷದ ನಂತರ ನಿಂತಿತು. ಅಷ್ಟರಲ್ಲಿ ಮತ್ತೆ ಡೆಕ್ಕಿನ ಮೇಲೆ ವ್ಯಕ್ತಿಗಳು ರಿಪೇರಿ ಕೆಲಸ ಪ್ರಾರಂಭಿಸಿದಂತೆ ಕಂಡಿತು. ಆದರೆ ಮತ್ತೆ ಅವರು ಇವರತ್ತ ಗಮನ ಹರಿಸಲಿಲ್ಲ.

## ಸುತ್ತಮುತ್ತ

ಈ ಅಧ್ಯಾಯದಲ್ಲಿ ಕನ್ನಡ ನಾಡಿನ ಜನತೆಯ ಅನುಭವಗಳಿವೆ. ಇವು ಲೇಖಕರಿಗೆ ಹೇಳಿದಂತ ಹವು.

ಒಮ್ಮೆ ಲೇಖಕರು ಮೂಡಿಗೆರೆಯ ಬಸ್‌ಸ್ಟಾಂಡಿನಲ್ಲಿ ನಿಂತಿದ್ದಾಗ ಒಬ್ಬ ವ್ಯಕ್ತಿ ಫ್ಲಾಯಿಂಗ್ ಸಾಸರ್ ಬಗ್ಗೆ ಇವರನ್ನು ವಿಚಾರಿಸುತ್ತಾ ತಾನು ೧೯೮೩ರಲ್ಲಿ ಅದೇ ಮೂಡಿಗೆರೆ ಬಸ್‌ಸ್ಟಾಂಡಿನಲ್ಲಿ ಹಾರುವ ಸಾಸರನ್ನು ನೋಡಿದ್ದಾಗಿ ತಿಳಿಸಿದ್ದಾನೆ.

ಆ ಸಾಸರು ಕುಂದೂರಿನ ಕಡೆಯಿಂದ ಬೆಟ್ಟದ ಮಗ್ಗುಲಲ್ಲೇ ಬಸ್‌ಸ್ಟಾಂಡಿನ ಮೇಲೆ ಹಾರಿ ಬಂದು ಲೋಹದಿಂದ ಮಾಡಿದ ಹಾಗೆ ಹೊಳೆಯುತ್ತಿತ್ತು. ಬಸ್‌ಸ್ಟಾಂಡಿನ ಮೇಲೆ ಒಂದು ಕ್ಷಣ ನಿಂತು ಇದ್ದಕ್ಕಿದ್ದಂತೆ ದಿಕ್ಕು ಬದಲಿಸಿ ದಕ್ಷಿಣಕ್ಕೆ ಹಾರಿಹೋಯಿತು.

ಲೇಖಕರಿಗೇ ಆಶ್ಚರ್ಯವಾಗುವಂತೆ



ಒಮ್ಮೊಮ್ಮೆ ಮಸೂರದಾಕಾರದ ಇಂಥ ಮೋಡಗಳು ಹಾರಾಡುವ ತಟ್ಟೆಗಳ ಭ್ರಮೆ ಹುಟ್ಟಿಸಬಹುದು.

ಫ್ಲಾಯಿಂಗ್ ಸಾಸರುಗಳ ಬಗ್ಗೆ ಅನೇಕರು ತಮಗಾದ ಅನುಭವಗಳನ್ನು ಬರೆದು ತಿಳಿಸಿದ್ದಾರೆ; ಸಂದರ್ಶಿಸಿ ಹೇಳಿಕೊಂಡಿದ್ದಾರೆ. ಅನೇಕ ಜನ ಇವುಗಳ ಬಗ್ಗೆ ಪೂರ್ವ ತಿಳಿವಳಿಕೆಯಿಲ್ಲದೆ ಅಲಕ್ಷಿಸಿದ್ದಾರೆ. ಕೆಲವೆಡೆ ಸಾಸರುಗಳಿಂದ ಇಳಿಯುತ್ತಿದ್ದ ವ್ಯಕ್ತಿಗಳನ್ನು ನೋಡಿ ದೆವ್ವಗಳೆಂದು ಓಡಿ ಹೋಗಿದ್ದಾರೆ. ಮುನೇಶ್ವರನೆಂಬ ದೆವ್ವವೆಂದು ಚಪ್ಪಲಿ ಕಳಚಿಕೊಂಡು ನೆಲಕ್ಕೆ ಬಡಿಯುತ್ತಾ ಭೂತೋಚ್ಚಾಟನೆ ಮಾಡಿದ್ದಾರೆ.

ಪಾವಗಡದ ಅಧ್ಯಾಪಕರೊಬ್ಬರು ತಾವು ಕಂಡ ಘಟನೆಯನ್ನು ಹೀಗೆ ಹೇಳುತ್ತಾರೆ. ದೇವಸ್ಥಾನಕ್ಕೆ ಹೋಗಿದ್ದಾಗ ಒಮ್ಮೆ ರಾತ್ರಿ ೧೨ ಗಂಟೆ ಸಮಯದಲ್ಲಿ ಥಳಥಳಿಸುವ ನಕ್ಷತ್ರದಂಥ ವಸ್ತು ಗೋಚರಿಸಿತು. ಇದು ವಿಕಾರಾಕೃತಿಯಾಗಲಿ, ಮನುಷ್ಯಾಕೃತಿಯಾಗಲಿ ಆಗಿರಲಿಲ್ಲ. ಭವ್ಯವಾದ ದುಂಡನೆಯ ಪಾತ್ರೆಯಂತೆ ಇದ್ದು, ತಳ ಚಪ್ಪಟೆಯಾಗಿಯೂ ಮೇಲಿನ ಮುಚ್ಚಳ ಗುಂಡಗಾಗಿಯೂ ಇತ್ತು. ಸುತ್ತಲೂ ಹೊಮ್ಮುತ್ತಿದ್ದ ಅದರ ಪ್ರಕಾಶ ಲಕ್ಷಾಂತರ ಕ್ಯಾಂಡಲ್ ಬಲ್ಬಿನಂತಿತ್ತು. ಸದ್ದಿಲ್ಲದೆ ಹಾರುತ್ತಿದ್ದ ಅದು ದೇವಸ್ಥಾನದ ಬಾಗಿಲಿಗೆ ನೇರವಾಗಿ ಬಂದು ನಿಮಿಷ ನಿಂತು, ವೇಗವಾಗಿ ಪೂರ್ವದಿಕ್ಕಿನಲ್ಲಿ ಮುಂದುವರಿಯಿತು.

ಮತ್ತೆ ಸುಮಾರು ೧.೩೦ರ ಗಂಟೆಗೆ ಹೋದ ದಾರಿಯಲ್ಲೇ ಮರಳಿ ಬಂತು. ಆದರೆ ಈಗ ವೇಗ ಮತ್ತು ಬೆಳಕು ಅರ್ಧಕ್ಕರ್ಧ ಕಡಿಮೆಯಾಗಿತ್ತು.

ಇಂತಹ ಅನೇಕ ಘಟನೆಗಳು ಕರ್ನಾಟಕದಾದ್ಯಂತ ನಡೆದಿರಬಹುದು ಹಾಗೂ ನಡೆಯುತ್ತಿರಬಹುದು.

ಮುಂಬರಲಿರುವ ಮೂರನೇ ದರ್ಜೆಯ ಮುಖಾಮುಖಿಯಲ್ಲಿ ನಂಬಲಸಾಧ್ಯವೆನಿಸುವಂತಹ ಅನುಭವಗಳಿವೆ. ಆ ಅನುಭವಕ್ಕೆ ಒಳಗಾದವರು ಎದುರಿಸುವ ಸಮಸ್ಯೆ ಎಂದರೆ ಅಪನಂಬಿಕೆ.

## ಭಾಗ-೨
## ಇಟಲಿಯಲ್ಲಿ

ತೃತೀಯ ವರ್ಗದ ಮುಖಾಮುಖಿಯಲ್ಲಿ ಜೋಹಾನಿಸ್‌ನ ಅನುಭವ ಮೊದಲನೆಯದಾಗಿ ಕಾಣುತ್ತದೆ. ಈತ ಇಟಲಿಯ ಒಬ್ಬ ವರ್ಣಚಿತ್ರ ಕಲಾವಿದ. ಈ ಘಟನೆ ನಡೆದಾಗ ಇನ್ನೂ ಹಾರುವ ತಟ್ಟೆಗಳ ವಿಷಯ ಅಷ್ಟಾಗಿ ಪ್ರಚಲಿತವಾಗಿರಲಿಲ್ಲ. ಜೊಹಾನಿಸ್ ಅಮೆರಿಕಕ್ಕೆ ಹೋದಾಗ ತನಗಾದ ಅನುಭವ ಹಾರುವ ತಟ್ಟೆಗೆ ಸಂಬಂಧಿಸಿದ್ದೆಂದು ತಿಳಿದು 'ಫ್ಲಾಯಿಂಗ್ ಸಾಸರ್ ರಿವ್ಯೂ'ನಲ್ಲಿ ಪ್ರಕಟಿಸಿದ. ಅವನ ಅನುಭವ ಹೀಗಿದೆ;

"ಭೂಗರ್ಭ ಮತ್ತು ಮಾನವಶಾಸ್ತ್ರದ ಸಂಶೋಧಕನಾಗಿ ೧೯೫೭ರ ಆಗಸ್ಟ್ ೧೪ರ ಬೆಳಿಗ್ಗೆ ಚಿಕ್ಕ ಪಿಕ್ಕಾಸಿ, ಬುತ್ತಿ ಚೀಲದೊಡನೆ ಚೈರ್ರ್ಯೂ ನದಿಯ ಪಕ್ಕದಲ್ಲಿ ಹೊರಟೆ.

"ನಾನು ಜೇಡಿಮಣ್ಣು ಮೆತ್ತಿಕೊಂಡಿದ್ದ ಕಲ್ಲುಗಳನ್ನು ಪರೀಕ್ಷಿಸುತ್ತಾ ಹೋಗುತ್ತಿದ್ದಾಗ ಐವತ್ತು ಮೀಟರ್ ದೂರದಲ್ಲಿ ಬೋರಲುಹಾಕಿದ ಸಾಸರಿನಂಥ ವಸ್ತು ಕಾಣಿಸಿತು. ಅದರಿಂದ ಆ್ಯಂಟೆನಾದಂಥ ಕಡ್ಡಿಯೊಂದು ಹೊರಬಂದಿತ್ತು.

"ಇದಕ್ಕೆ ಸಂಬಂಧಿಸಿದವರು ಯಾರಾದರೂ ಇರುವರೆ? ಎಂದು ಸುತ್ತಲೂ ನೋಡಿದಾಗ ನಾನು ನಡೆದುಬಂದ ಹಾದಿಯಲ್ಲಿ ಐವತ್ತು ಮೀಟರು ದೂರದಲ್ಲಿ ಇಬ್ಬರು ಹುಡುಗರು ನಿಂತಂತೆ ಕಾಣಿಸಿತು. ಅವರ ಹತ್ತಿರಕ್ಕೆ ಅರ್ಧ ದೂರ ನಡೆದು ಹೋದಾಗ ಅವರನ್ನು ನೋಡಿ ಭಯಚಕಿತನಾದೆ.

"ಕಾರಣ ಇಬ್ಬರೂ ಹುಡುಗರಾಗಿರದೆ ನಾನೆಂದೂ ಊಹಿಸದಷ್ಟು ಕುಳ್ಳರಾಗಿದ್ದರು. ಅವರ ಕೈಗಳು ನೀಳವಾಗಿದ್ದು, ತಲೆಗಳು ಅಲುಗುತ್ತಿರಲಿಲ್ಲ. ಅವರನ್ನು ನೋಡಿದಷ್ಟು ದಿಗಿಲಾಗತೊಡಗಿತು.

"ಅವರು ಸುಮಾರು ತೊಂಭತ್ತು ಸೆಂಟಿಮೀಟರಿನಷ್ಟು ಎತ್ತರವಾಗಿದ್ದರು. ಗಾಢ ನೀಲಿಯ ಉಡುಪನ್ನು ಧರಿಸಿದ್ದು, ಅದು ಅರೆಪಾರದರ್ಶಕವಾಗಿದ್ದು ಪ್ಲಾಸ್ಟಿಕ್ ಅಂಗಿಯಂತಿತ್ತು. ಕುತ್ತಿಗೆ ಹಾಗೂ ಸೊಂಟದ ಬಳಿ ಬೆಲ್ಟುಗಳಿದ್ದವು. ತಲೆ ದೊಡ್ಡದಿದ್ದು ಕಣ್ಣುಗಳು ಭಯಾನಕವಾಗಿದ್ದವು. ತಲೆಯ ಮೇಲೆ ಕೂದಲಿರುವ ಯಾವುದೇ ಗುರುತಿರಲಿಲ್ಲ. ಅದರ ಬದಲು ಬಿಗಿಯಾದ ಕುಲಾವಿ ಧರಿಸಿದಂತೆ ಇತ್ತು.

ಮುಖದ ಚರ್ಮವು ಹಸಿರು ಬಣ್ಣಕ್ಕಿದ್ದು ಮೂಗು ತ್ರಿಕೋನಾಕಾರವಾಗಿತ್ತು. ಬಾಯಿ ಕತ್ತರಿಸಿದ ಬಿರುಕಿನಂತಿತ್ತು. ಬಾಯಿ ಮೀನಿನ ಬಾಯಿಯಂತೆ ಆಗಾಗ ತೆರೆದು ಮುಚ್ಚುತ್ತಿತ್ತು.

"ನಾನು ಭಯಚಕಿತನಾಗಿ ಅವರನ್ನೇ ದಿಟ್ಟಿಸುತ್ತಿದ್ದಾಗ ಅವರೂ ನನ್ನನ್ನೇ ನೋಡುತ್ತಿದ್ದರು. ನಾನು ಪಿಕಾಸಿ ಹಿಡಿದಿದ್ದ ಕೈ ಎತ್ತಿ ಅವರತ್ತ ತೋರಿಸಿ ತಮಗೇನಾದರೂ ಸಹಾಯಬೇಕೆ? ಎಂದು ಕೇಳಿದಾಗ ಇಬ್ಬರೂ ಪರಸ್ಪರ ಮುಖ ನೋಡಿಕೊಂಡು ಏನನ್ನೋ ಮಾತನಾಡಿಕೊಂಡರು. ನನ್ನ ಸಂಜ್ಞೆಯನ್ನು ಬೆದರಿಕೆಯ ಸಂಕೇತವೆಂದು ಭಾವಿಸಿರಬೇಕು. ಅವರಲ್ಲೊಬ್ಬ ತನ್ನ ಬಲಗೈಯನ್ನು ಬೆಲ್ಟಿನ ಮೇಲೆ ಇಟ್ಟುಕೊಂಡ. ತಕ್ಷಣ ಬೆಲ್ಟಿನ ಮಧ್ಯಭಾಗದಿಂದ ಹೊಗೆಯಂಥ ಬೆಳಕು ನನ್ನೆಡೆ ಹೊಮ್ಮಿತು. ಬೆಳಕು ಹೊಮ್ಮಿದೊಡನೆ ಶಾಕ್ ಹೊಡೆದಂತಾಗಿ ಕೈಯಿಂದ ಪಿಕಾಸಿ ಹಾರಿಬಿತ್ತು. ನಾನು ನಿಲ್ಲಲಾರದೆ ಕುಸಿದುಬಿದ್ದೆ.

"ಇಬ್ಬರೂ ಹತ್ತಿರ ಬಂದು ನನ್ನಿಂದ ಎರಡು ಮೀಟರ್ ದೂರದಲ್ಲಿದ್ದ ಪಿಕಾಸಿ ತೆಗೆದುಕೊಂಡರು. ಆಗ ಗಮನಿಸಿದಾಗ ಅವರ ಕೈಗಳು ಹಸಿರಾಗಿದ್ದವು. ಹಸ್ತದಲ್ಲಿ ಎಂಟು ಬೆರಳುಗಳಿದ್ದವು. ನಾಲ್ಕು ನಾಲ್ಕು ಜೊತೆ ಬೆರಳುಗಳು ಒಂದಕ್ಕೊಂದು ಎದುರುಬದುರಾಗಿದ್ದವು. ಕೀಲುಗಳಿಲ್ಲದೆ ನೇರವಾಗಿದ್ದವು. ಉಸಿರಾಡುವಾಗ ಅವರ ಎದೆಗಳು ನಾಯಿಯ ಎದೆಯಂತೆ ಏರಿಳಿಯುತ್ತಿದ್ದವು.

"ಕಡೆಗೂ ಪ್ರಯತ್ನಪಟ್ಟು ಎದ್ದು ನಿಲ್ಲುವಷ್ಟರಲ್ಲಿ ಅವರು ವಿಚಿತ್ರ ವಸ್ತುವಿನ ಬಳಿ ಹೋಗಿ ಬಂಡೆಗಳನ್ನು ಹತ್ತಿ ಅದರೊಳಗೆ ಹೋದರು. ಕ್ಷಣಗಳ ನಂತರ ಸಾಸರು ಹಾರಿತು. ಹಾರಿದ ವೇಗಕ್ಕೆ ಹತ್ತಿರದಲ್ಲಿದ್ದ ಬಂಡೆಗಳು ಅದುರಿದವು."

## ಆಕಾಶಲೋಕದ ಕುಬ್ಜರು

ಜೊಹಾನಿಸ್‌ಗೆ ಆದ ಅನುಭವ ಜಗತ್ತಿಗೆ ತಡವಾಗಿ ಬೆಳಕಿಗೆ ಬರಲು ಕಾರಣ ಆ ಘಟನೆ ಅರ್ಥವಾಗದಿದ್ದುದು ಮತ್ತು ಅಪಹಾಸ್ಯಕ್ಕೆ ಈಡಾಗುವ ಭೀತಿ.

ಇಂತಹದೇ ಅನುಭವಗಳು ದೂರ ದೂರದ ದೇಶಗಳಿಂದಲೂ ಬರತೊಡಗಿದವು. ಈ ಪೈಕಿ ಒಂದೆರಡು ಘಟನೆಗಳನ್ನು ನೋಡೋಣ.

ಈ ಘಟನೆ ನಡೆದದ್ದು ಸ್ಪೇನಿನ ಹಳ್ಳಿಯೊಂದರಲ್ಲಿ. ಮ್ಯಾಕ್ಸಿಮೋ ಹದಿನಾಲ್ಕು ವರ್ಷದ ಕುರಿಕಾಯುವ ಹುಡುಗ, ಅನಕ್ಷರಸ್ಥ. ಇದು ನಡೆದದ್ದು ೧೯೫೫ರ ಜುಲೈ ತಿಂಗಳಿನಲ್ಲಿ. ಪತ್ರಿಕೆಯೊಂದಕ್ಕೆ ಸಂದರ್ಶನ ನೀಡಿದ ಹುಡುಗನ ಅನುಭವ ಹೀಗಿದೆ:

ಎಂದಿನಂತೆ ಕುರಿ ಕಾಯಲು ಹೊರಟ ಮ್ಯಾಕ್ಸಿಮೋ. ಸುಮಾರು ಒಂದು ಗಂಟೆ ಸಮಯದಲ್ಲಿ ಅವನ ಬೆನ್ನಿನ ಹಿಂದೆ ಸಿಳ್ಳಿನಂಥ ಶಬ್ದ ಕೇಳಿಸಿತು. ಅಲಕ್ಷ್ಯದಿಂದಲೇ ತಿರುಗಿ ನೋಡಿದಾಗ ಒಂದು ಆಕಾಶಯಂತ್ರ ನೆಲದ ಮೇಲಿತ್ತು. ಅದರಿಂದ ಬೆಳಕು ಹೊಮ್ಮುತ್ತಿತ್ತು. ಅದು ಸುಮಾರು ಎರಡು ಮೀಟರಿನಷ್ಟು ಅಗಲವಾಗಿದ್ದು ಅಷ್ಟೇ ಎತ್ತರವಿತ್ತು.

ಬಲೂನೆಂದು ಪ್ರಾರಂಭದಲ್ಲಿ ಭಾವಿಸಿದ ಮ್ಯಾಕ್ಸಿಮೋ ತೆಗೆದುಕೊಳ್ಳಲು ಹತ್ತಿರ ಹೋದ. ಅಷ್ಟರಲ್ಲಿ ಮೇಲ್ಭಾಗದ ಮುಚ್ಚಳ ತೆಗೆದುಕೊಂಡು ಮೂರು ಪುಟ್ಟ ಆಕೃತಿಗಳು ಧುಮುಕುತ್ತಿರುವುದನ್ನು ಕಂಡ.

ಸುಮಾರು ಎಪ್ಪತ್ತೈದು ಸೆಂಟಿಮೀಟರಿನಷ್ಟು ಎತ್ತರದವರಾದ ಅವರ ಕಣ್ಣು ಮಂಗೋಲಿಯನ್ನರಂತೆ ಇತ್ತು. ಮುಖ ಹಳದಿಯಾಗಿತ್ತು. ಅವರು ನಡೆದು ಇವನ ಬಳಿ ಬಂದರು. ಅವನ ಆ ಕಡೆ ಇಬ್ಬರು, ಈ ಕಡೆ ಒಬ್ಬ ನಿಂತು ಏನನ್ನೋ ಕೇಳಿದರು. ಅರ್ಥವಾಗದೆ ಮೂಕನಂತೆ ನಿಂತ ಇವನನ್ನು ನೋಡಿ ವಾಪಸಾದರು.

ದಾರದಂಥ ವಸ್ತುವೊಂದನ್ನು ಹಿಡಿದುಕೊಂಡು ಆ ವಸ್ತುವಿನ ಒಳಕ್ಕೆ ಜಿಗಿದರು.

ಅವರು ಗಾಢ ನೀಲಿ ಬಣ್ಣದ ಉಡುಪನ್ನು ಧರಿಸಿ ತಲೆಗೆ ಕುಲಾವಿಯಂಥ ಟೋಪಿ ಧರಿಸಿದ್ದರು. ಕೈಗೆ ಲೋಹದ ಪಟ್ಟಿಗಳನ್ನು ಕಟ್ಟಿಕೊಂಡಿದ್ದರು.

ಸಣ್ಣಗೆ ಸಿಳ್ಳಿನಂಥ ಶಬ್ದ ಬಂದು, ಬೆಳಕು

ಕಾಲಿನಲ್ಲಿ ಬೆರಳಿರದೆ ಗೊರಸು ಇತ್ತು. ಓಡುವಾಗ, ನೆಗೆದು, ನಂತರ ತುಂಬ ದೂರದವರೆಗೆ ತೇಲಿ ಇಳಿಯುತ್ತಿದ್ದವು. ಯಾವುದೇ ಸದ್ದನ್ನು ಇವು ಮಾಡುತ್ತಿರಲಿಲ್ಲ.

ಕೈಗಳನ್ನೆತ್ತಿಕೊಂಡು ಮನೆಯ ಬಳಿ ಬರತೊಡಗಿದಾಗ ಸಟ್ಟನ್ಸ್ ಮನೆತನದವರು ಇವುಗಳತ್ತ ಗುಂಡು ಹಾರಿಸಿದರು. ಇದರಿಂದ ಅವುಗಳಿಗೆ ಏನೂ ಆಗಲಿಲ್ಲ. ಕೆಲವೊಮ್ಮೆ ಉರುಳಿ ಬಿದ್ದರೂ ಮತ್ತೆ ಎದ್ದು ಓಡುತ್ತಿದ್ದವು. ಓಡುವಾಗ ಮುಂಗಾಲು ಊರಲು ಅನುವಾಗುವಂತೆ ಕೈಬೆರಳುಗಳನ್ನು ಒಳಗೆಳೆದುಕೊಳ್ಳುತ್ತಿದ್ದವು.

ಸಟ್ಟನ್ಸ್ ಮನೆತನದವರು ಗುಂಡು ಹೊಡೆದು ಗಲಾಟೆ ಮಾಡಿದರೂ ಅವು ಆಕ್ರಮಣದ ಮನೋಭಾವನ್ನೇನೂ ತೋರಿಸಲಿಲ್ಲ. ಹೊರಗಿನ ದೀಪ ಆರಿಸಿದ ಕೂಡಲೇ ಕಿಟಕಿಯ ಬಳಿ ಬಂದು ಕುತೂಹಲದಿಂದ ನೋಡುತ್ತಾ ನಿಲ್ಲುತ್ತಿದ್ದವು.

ಈ ಜೀವಿಗಳು ಹೋದವೋ ಎಂದು ನೋಡಲು ಹೊರಬಂದ ಬಿಲ್ ಟೇಲರ್. ಕೂಡಲೇ ಮಾಡಿನ ಮೇಲಿಂದ ನೀಳವಾದ ಕೈಯೊಂದು ತಲೆಗೂದಲನ್ನು ಪರೀಕ್ಷಿಸಲೋ ಎಂಬಂತೆ ನೇವರಿಸಿತು. ತಕ್ಷಣ ಬಂದೂಕಿನಿಂದ ಗುಂಡು ಹಾರಿಸಿದಾಗ ಆ ಜೀವಿ ಬಿದ್ದು, ನಂತರ ತೇಲಿಹೋಯಿತು.

ಸಟ್ಟನ್ಸ್ ಮನೆತನದವರು ಹೆದರಿ ಪೋಲೀಸರಿಗೆ ಈ ವಿಷಯ ತಿಳಿಸಿದರು. ಪೋಲೀಸಿನವರು ಬಂದಾಗ ಆ ಜೀವಿಗಳೂ ಇರಲಿಲ್ಲ; ಹಾರುವ ನೌಕೆಯೂ ಇರಲಿಲ್ಲ.

### ಪರಲೋಕದ ಪ್ರೇಯಸಿಯೊಂದಿಗೆ

ಯುವಕನೂ, ಸುಂದರನೂ, ದೃಢಕಾಯನೂ ಆದ ವಿಲ್ಲಾಸ್ ಬೋಸ್ ಎಂಬ ರೈತನೊಬ್ಬ ಡಾ. ಫಾಂಟೇಸ್‌ರವರನ್ನು ನೋಡಲು ಬಂದು ಒಂದು ವಿಚಿತ್ರ ಸುದ್ದಿ ತಿಳಿಸಿದ.

ಅವನೊಮ್ಮೆ ಹೊಲದಲಿ ಉಳುತ್ತಿರುವಾಗ ವಿಚಿತ್ರ ಆಕಾಶ ಯಂತ್ರವೊಂದು ಬಂದು ನಿಂತಿತೆಂದೂ ಅದರಿಂದ ನಾಲ್ವರು ಬಂದು ಆತನನ್ನು ಹಿಡಿದುಕೊಂಡು ಯಂತ್ರದೊಳಕ್ಕೆ ಕರೆದೊಯ್ದರೆಂದೂ ನಂತರ ಅಲ್ಲಿ ಔಷಧಿಗಳನ್ನು ನೀಡಿ ಓರ್ವ ಹೆಣ್ಣಿನೊಂದಿಗೆ ಸಂಭೋಗಿಸಲು ಬಲಾತ್ಕರಿಸಲಾಯಿತೆಂದೂ ಈ ಘಟನೆಯ ನಂತರ ನರದೌರ್ಬಲ್ಯ, ಮೈಮೇಲೆಲ್ಲಾ ಬೊಕ್ಕೆಗಳು ಉಂಟಾಗಿವೆಯೆಂದೂ ಹೇಳಿದ.

ಈ ರೀತಿಯ ಕತೆಯೊಂದನ್ನು ನಂಬಲು ಸಾಧ್ಯವಿರಲಿಲ್ಲ. ಆದರೆ ಅವನನ್ನು ಪರೀಕ್ಷಿಸಿದ ಡಾ.ಫಾಂಟೇಸ್ ಅವನ ದೇಹದಲ್ಲಿ ಅಸಾಧಾರಣ ಪ್ರಮಾಣದ ರೇಡಿಯೋ ಅಣುವಿಕಿರಣ ಇದ್ದದ್ದನ್ನು ಗಮನಿಸಿದರು.

ಆ ಘಟನೆ ಹೀಗಿದೆ:

ಇಪ್ಪತ್ತೊಂದು ವರ್ಷದ ವಿಲ್ಲಾಸ್ ಬೋಸ್ ಸಾವೊಪಾಲೋ ಬಳಿಯ ಹಳ್ಳಿಯೊಂದರಲ್ಲಿ ತಂದೆ-ತಾಯಿ, ಅಣ್ಣಂದಿರೊಂದಿಗೆ ವಾಸವಾಗಿದ್ದ. ಉಳುಮೆಯ ಸಂದರ್ಭದಲ್ಲಿ ಬೆಳಗ್ಗೆ ಹಾಗೂ ರಾತ್ರಿ ಸರದಿ ಪ್ರಕಾರ ಹೊಲದಲ್ಲಿ ಕೆಲಸ ಮಾಡುತ್ತಿದ್ದರು. ಬೋಸ್ ಮೊದಲು ಸಾಸರ್ ನೋಡಿದ್ದು ೧೯೫೭ರ ಅಕ್ಟೋಬರ್ ೫ನೇ ತಾರೀಖಿನಂದು. ಮನೆಯ ಕಿಟಕಿಯ ಬಳಿ ನಿಂತಿದ್ದ ಸಾಸರ್ ಕೊಂಚ ಹೊತ್ತಿನ ನಂತರ ಮನೆಯ ಮೇಲೆಯೇ ಬಂದು ನಂತರ ಮಾಯವಾಯಿತು.

ಬೋಸ್ ಅಕ್ಟೋಬರ್ ೧೪ರಂದು ರಾತ್ರಿ ಹೊಲದಲ್ಲಿ ಟ್ರಾಕ್ಟರ್‌ನಿಂದ ಉಳುತ್ತಿರುವಾಗ ಇದ್ದಕ್ಕಿದ್ದಂತೆ ಫ್ಲೈಯಿಂಗ್ ಸಾಸರ್ ಕಾಣಿಸಿಕೊಂಡಿತು. ಬೋಸ್ ಮತ್ತು ಅವನ ತಮ್ಮ ಇದನ್ನು ನೋಡಿದರು. ಕೊಂಚ ಹೊತ್ತಿನ ನಂತರ ಅದು ಇದ್ದಕ್ಕಿದ್ದಂತೆಯೇ ಮಾಯವಾಯಿತು.

ಮರುದಿನ ರಾತ್ರಿ ಉಳುತ್ತಿದ್ದಾಗ ಹತ್ತು ಗಂಟೆ ಸಮಯದಲ್ಲಿ ಸಾಸರ್ ಕಾಣಿಸಿತು. ವೇಗವಾಗಿ ಬಂದು ಟ್ರಾಕ್ಟರಿನ ಮೇಲೆ ಐವತ್ತು ಅಡಿ ಎತ್ತರದಲ್ಲಿ ನಿಂತುಕೊಂಡಿತು.

ಬೋಸ್ ಹೆದರಿ ಟ್ರಾಕ್ಟರಿನಲ್ಲಿ ಓಡಿಹೋಗಲು ಯತ್ನಿಸಿದ. ಆದರೆ ಟ್ರಾಕ್ಟರ್ ನಿಂತುಹೋಯಿತು. ಎಷ್ಟು ಪ್ರಯತ್ನಿಸಿದರೂ ಸ್ಟಾರ್ಟ್ ಆಗಲಿಲ್ಲ. ಆ

ವೇಳೆಗಾಗಲೇ ಸಾಸರ್ ನೆಲದ ಮೇಲೆ ಇಳಿಯಿತು. ಟ್ರಾಕ್ಟರಿನಿಂದ ಬೋಸ್ ಇಳಿದು ಓಡಲಾರಂಭಿಸಿದ. ಅಷ್ಟರಲ್ಲಿ ಹಿಂದಿನಿಂದ ಯಾರೋ ಬಂದು ಕೈ ಹಿಡಿದಂತಾಯಿತು. ನಾಲ್ವರು ಬಲವಂತವಾಗಿ ಅವನನ್ನು ಹೊತ್ತುಕೊಂಡು ಸಾಸರ್ ಒಳಗೆ ಕೊಂಡೊಯ್ದರು.

ಒಳಗೊಂದು ಕೋಣೆ. ಅದರ ನೆಲ, ಗೋಡೆ, ಛಾವಣಿಯೆಲ್ಲ ಹೊಳೆಯುತ್ತಿದ್ದವು. ಒಳಗೆ ಹೋದೊಡನೆಯೇ ಬಾಗಿಲು ಮುಚ್ಚಿಕೊಂಡಿತು.

ನಂತರ ವಿಚಿತ್ರವಾದ ಮೇಜೂ, ಸ್ಟೂಲೂ ಇರುವಂಥ ಒಂದು ದೊಡ್ಡ ಕೋಣೆಗೆ ಹೋಗಲು ಬೋಸ್‌ಗೆ ನಿರ್ದೇಶಿಸಲಾಯಿತು. ಅವರ ಧ್ವನಿ ನಾಯಿಯ ಬೊಗಳುವಿಕೆಯಂತಿತ್ತು.

ಆ ದೊಡ್ಡ ಕೋಣೆಯಲ್ಲಿ ಬೋಸ್‌ನನ್ನು ನಗ್ನಗೊಳಿಸಲಾಯಿತು. ಸ್ಪಂಜಿನಂತಹ ವಸ್ತುವನ್ನು ಯಾವುದೋ ದ್ರಾವಕದಲ್ಲಿ ಅದ್ದಿತಂದು ಮೈಮೇಲೆ ತಿಕ್ಕಿ ತಿಕ್ಕಿ ಹಚ್ಚಲಾಯಿತು.

ನಂತರ ಆ ಅನ್ಯಗ್ರಹ ನಿವಾಸಿಗಳು ಆತನನ್ನು ಇನ್ನೊಂದು ಕೋಣೆಗೆ ಕರೆದುಕೊಂಡು ಹೋದರು. ಇಬ್ಬರು ಎಂಥದ್ದೋ ಉಪಕರಣವನ್ನು ಹೊತ್ತು ತಂದು, ಆ ಉಪಕರಣವನ್ನು ಬೋಸ್‌ನ ಕುತ್ತಿಗೆಗೆ ತಾಗಿಸಿದೊಡನೆ ಅದರ ತುದಿಯಲ್ಲಿದ್ದ ಫ್ಲಾಸ್ಕಿಗೆ ಇವನ ರಕ್ತ ತೊಟ್ಟು ತೊಟ್ಟಾಗಿ ಬೀಳತೊಡಗಿತು. ಆದರೆ ಬೋಸ್‌ಗೆ ಕೊಂಚವೂ ನೋವಾಗಲಿಲ್ಲ. ಸ್ವಲ್ಪದಿನಗಳ ನಂತರ ಆ ಸ್ಥಳ ಕಪ್ಪಾಯಿತು.

### ಮರೀಚಿಕೆಯೋ, ಮೋಹಿನಿಯೋ!

ಕೋಣೆಯಲ್ಲಿ ಇವನನ್ನು ಬಿಟ್ಟು ಹೋದ ಅರ್ಧಗಂಟೆಯ ನಂತರ ವಿಚಿತ್ರ ವಾಸನೆ ಬರಲಾರಂಭಿಸಿತು. ಗೋಡೆಯ ತೂತುಗಳಿಂದ ಒಂದೇ ಸಮನೆ ಗಾಳಿ ಬರುತ್ತಿರುವುದನ್ನು ಬೋಸ್ ಗಮನಿಸಿದ. ಸ್ವಲ್ಪ ಹೊತ್ತಿನ ನಂತರ ಬಟ್ಟೆ ಸುಟ್ಟರೆ ಬರುವಂಥ ವಾಸನೆ ಬರಲಾರಂಭಿಸಿತು. ಆ ವಾಸನೆ ಸಹಿಸಲಾರದೆ ಬೋಸ್‌ಗೆ ವಾಂತಿ ಬಂತು.

ಇನ್ನೂ ಸ್ವಲ್ಪ ಕಾಲದ ನಂತರ ಬಾಗಿಲು ತೆರೆಯಿತು. ಆಶ್ಚರ್ಯ! ಅಲ್ಲೊಬ್ಬ ನಗ್ನ ಸುಂದರಿ ನಿಂತಿದ್ದಳು. ಅವನಿಗಿಂತ ಸ್ವಲ್ಪ ಕುಳ್ಳಗಿದ್ದ ಅವಳು ಬಹಳ ಸುಂದರವಾಗಿದ್ದಳು. ಕೂದಲು ಸಂಪೂರ್ಣ ಬಿಳಿಯ ಬಣ್ಣದ್ದಾಗಿದ್ದು ಹೆಗಲವರೆಗೆ ಇತ್ತು. ಅವರಿಗೆ ಅಗಲವಾದ ನೀಲಿ ಕಣ್ಣುಗಳಿದ್ದು, ಕೆನ್ನೆ ಕೊಂಚ ಉಬ್ಬಿತ್ತು. ಮೂಗು ನೀಳವಾಗಿತ್ತು. ಮೈಮಾಟ ಹೇಳಿ ಮಾಡಿಸಿದಂತಿತ್ತು. ಅವಳ ಕಂಕುಳು ಮತ್ತು ಜನನೇಂದ್ರಿಯದ ಬಳಿ ರಕ್ತದಷ್ಟು ಕೆಂಪಾದ ಕೂದಲಿತ್ತು.

ಕಣ್ಣಿನಲ್ಲಿ ಬಯಕೆಯನ್ನು ವ್ಯಕ್ತಪಡಿಸುತ್ತಾ ಬಂದು ಬೋಸ್‌ನನ್ನು ತಬ್ಬಿಕೊಂಡು ಕೆನ್ನೆ ತಿಕ್ಕತೊಡಗಿದಳು. ಅಂಥ ಭಯ, ವಿಚಿತ್ರ ಸನ್ನಿವೇಶದಲ್ಲೂ ಅವಳ ಪ್ರಚೋದನೆಗೆ ಬೋಸ್ ಪ್ರತಿಕ್ರಿಯಿಸಲಾರಂಭಿಸಿದ. ಬಹುಶಃ ಇದಕ್ಕೆ ಕಾರಣ ಅವರು ಹಚ್ಚಿದ ಔಷಧದ ಪ್ರಭಾವವಿರಬೇಕೆಂದು ಹೇಳುತ್ತಾನೆ ಆತ. ನಂತರ ಉದ್ರೇಕಗೊಂಡು ಅವಳೊಡನೆ ಸಂಭೋಗದಲ್ಲಿ ತೊಡಗಿದ. ಸ್ವಲ್ಪ ಹೊತ್ತಿನ ನಂತರ ಏದುಸಿರು ಬಿಡುತ್ತಾ ಅವನಿಂದ ಅವಳು ದೂರವಾದಳು.

ಆ ಹೊತ್ತಿಗೆ ಬಾಗಿಲು ತೆರೆದು ಒಬ್ಬ ಅವಳನ್ನು ಕರೆದ. ಬಾಗಿಲ ಹತ್ತಿರ ನಿಂತು ಮೌನವಾಗಿ ಅವನತ್ತ ನೋಡುತ್ತಾ ಒಮ್ಮೆ ಬೋಸ್‌ನನ್ನೂ



೧೯೬೭ರಲ್ಲಿ ಪ. ವರ್ಜೀನಿಯದವನೊಬ್ಬ ನೋಡಿದುದಾಗಿ ಹೇಳಿದ ಹಾರಾಡುವ ತಟ್ಟೆ

ಅವಳ ಹೊಟ್ಟೆಯನ್ನೂ ಇನ್ನೊಮ್ಮೆ ಮೇಲಕ್ಕೆ ಆಕಾಶದತ್ತಲೂ ಬೊಟ್ಟುಮಾಡಿ ತೋರಿಸಿ ಹೊರಟು ಹೋದಳು.

ನಂತರ ಇನ್ನೊಬ್ಬ ಬಟ್ಟೆ ಧರಿಸಲು ಸಂಜ್ಞೆ ಮಾಡಿದ. ಸಾಸರಿನ ಹೊರಗೆ ಕರೆದುಕೊಂಡು ಬಂದು ಆ ಯಂತ್ರವನ್ನು ತೋರಿಸಲಾರಂಭಿಸಿದ. ಯಂತ್ರ ಅಂಡಾಕಾರದ್ದಾಗಿದ್ದು ಸುತ್ತಲೂ ಪ್ಲಾಟ್‌ಫಾರಂನಂತಿತ್ತು. ಅದರ ನಡುವಿನ ಗುಮ್ಮಟ ಮೆಲ್ಲಗೆ ತಿರುಗುತ್ತಿತ್ತು. ಅದರಲ್ಲಿ ಸಾಲಾಗಿ ಚಿಕ್ಕ ದೀಪಗಳಿದ್ದು, ಇಡೀ ಯಂತ್ರಕ್ಕೆ ಕಿಟಕಿಗಳಿರಲಿಲ್ಲ.

ಸಾಸರಿನ ವ್ಯಕ್ತಿ ಬೋಸ್‌ಗೆ ಸಾಸರಿನ ಗುಮ್ಮಟ ತೋರಿಸಿದ. ಗಾಜಿನಂಥ ವಸ್ತುವಿನಿಂದ ಮಾಡಿದ ಅದು ತಿರುಗುವಾಗ ಅದರಿಂದ ನೀಲಿಯ ಪ್ರಭೆ ಬರುತ್ತಿತ್ತು. ಅದರಿಂದ ಸಣ್ಣದಾಗಿ ಗುಣಗುಣಿಸುವ ಶಬ್ದವೂ ಬರುತ್ತಿತ್ತು.

ಯಂತ್ರದ ಆಚೆಯ ಭಾಗ ತೋರಿಸಿದ ನಂತರ ಅವನು ಬೋಸ್‌ಗೆ ಇಳಿಯುವಂತೆ ಮೆಟ್ಟಿಲ ಕಡೆಗೆ ಸಂಜ್ಞೆ ಮಾಡಿದ. ಬೋಸ್ ಇಳಿದ ನಂತರ ತನ್ನತ್ತ ಮತ್ತು ಭೂಮಿಯತ್ತ ತೋರಿಸಿ ಅನಂತರ ಆಕಾಶದಲ್ಲಿ ದಕ್ಷಿಣಾಭಿಮುಖವಾಗಿ ತಾರಾಮಂಡಲದತ್ತ ಕೈ ತೋರಿಸಿದ. ಅವನು ಒಳಗೆ ಹೋದೊಡನೆ ಬಾಗಿಲು ಮುಚ್ಚಿಕೊಂಡಿತು.

ಯಂತ್ರ ಐವತ್ತು ಮೀಟರು ಹೋದ ನಂತರ ಇದ್ದಕ್ಕಿದ್ದಂತೆ ಅದರ ಪ್ರಭೆ ಹೆಚ್ಚಾಗುತ್ತಾ ಹೋಯಿತು. ದಕ್ಷಿಣ ದಿಕ್ಕಿನತ್ತ ಮಿಂಚಿನಂತೆ ಮಾಯವಾಯಿತು.

ಇದೇ ಸಂದರ್ಭದಲ್ಲಿ ಇಂತಹುದೇ ಇನ್ನೊಂದು ಘಟನೆ ಅಮೆರಿಕದಲ್ಲಿ ನಡೆಯಿತು.

### ಕಳೆದುಹೋದ ಕಾಲ

೧೯೬೧ರ ಸೆಪ್ಟೆಂಬರ್ ೧೯ರಂದು ಬೆರ್ನೆಹಿಲ್ ಮತ್ತು ಬೆಟ್ಟಿ ಎಂಬ ಇಬ್ಬರು ದಂಪತಿಗಳು ಕೆನಡಾದಲ್ಲಿ ತಮ್ಮ ರಜಾದಿನಗಳನ್ನು ಮುಗಿಸಿ ಅಮೆರಿಕಕ್ಕೆ ಹಿಂದಿರುಗುತ್ತಿದ್ದರು. ಲಾಂಕಾಸ್ಟರ್ ಹಳ್ಳಿ ದಾಟಿದ ಕೂಡಲೇ ಬೆಟ್ಟಿ ಆಕಾಶದಲ್ಲಿ ಚಲಿಸುತ್ತಿರುವ ಬೆಳಕನ್ನು ನೋಡಿದರು. ಹಾಗೆಯೇ ಇವರು ಕಾರಿನಲ್ಲಿ ಮುಂದುವರಿಯುತ್ತಿರುವಾಗ ಬೆಳಕು ಇವರನ್ನು ಹಿಂಬಾಲಿಸಿ ಬರುತ್ತಿರುವುದನ್ನು ಗಮನಿಸಿದರು. ಅದೊಂದು ಫ್ಲೈಯಿಂಗ್ ಸಾಸರ್ ಆಗಿತ್ತು.

ಇಂಡಿಯನ್ ಹೆಡ್ ಎಂಬ ಸ್ಥಳದಲ್ಲಿ ಬೆರ್ನೆ ಕಾರು ನಿಲ್ಲಿಸಿ ಬೈನಾಕ್ಯುಲರ್ ಮುಖಾಂತರ ಆಕಾಶವಾಹನದತ್ತ ನೋಡಿದ. ಅದರಲ್ಲಿ ಸಾಲಾಗಿ ಕಿಟಕಿಗಳೂ, ಕಿಟಕಿಗಳಲ್ಲಿ ಜನರ ಮುಖಗಳೂ ಕಾಣತೊಡಗಿತು. ಬೆರ್ನೆಗೆ ಭಯವಾಗಿ ವೇಗವಾಗಿ ಕಾರು ಚಲಾಯಿಸತೊಡಗಿದ. ಕಾರಿನ ಮೇಲೆ ಸಾಸರ್ ಹಿಂಬಾಲಿಸುತ್ತಿತ್ತು. ಸ್ವಲ್ಪ ಸಮಯದಲ್ಲಿ ಕಾರಿನ ಸಮೀಪದಲ್ಲೇ ಬೀಪ್ ಬೀಪ್ ಎಂಬ ಶಬ್ದ ಕೇಳಿಸತೊಡಗಿತು. ಇಬ್ಬರಿಗೂ ಒಂದು ರೀತಿ ಅಮಲು ಬಂದಂತಾಯಿತು.

ಸ್ವಲ್ಪ ಹೊತ್ತಿನಲ್ಲಿಯೇ ಅಮಲು ಇಳಿದು ಮನಸ್ಸು ತಿಳಿಯಾಯಿತು. ಬೀಪ್ ಬೀಪ್ ಶಬ್ದ ನಿಧಾನವಾಗಿ ದೂರವಾಯಿತು. ಕಾರಿನಲ್ಲಿ ಚಲಿಸಲು ಪ್ರಾರಂಭಿಸಿ ಗಡಿಯಾರ ನೋಡಿಕೊಂಡಾಗ ಇಬ್ಬರ ಗಡಿಯಾರವೂ ಎರಡು ಗಂಟೆ ಮುಂದಿತ್ತು.

ಊರು ತಲುಪಿ ಅಲ್ಲಿನ ಗಡಿಯಾರ ನೋಡಿದಾಗ ತಮ್ಮ ಗಡಿಯಾರ ಸರಿಯಾಗಿಯೇ ಇದ್ದುದ್ದನ್ನು ನೋಡಿಕೊಂಡರು. ಹಾಗಾದರೆ ಎರಡು ಗಂಟೆ ಸಮಯ ಎಲ್ಲಿ ಕಳೆದರೆಂಬುದು ಗೊತ್ತಾಗಲಿಲ್ಲ.

ಇದಾದ ಕೆಲವು ಕಾಲದ ನಂತರ ಇಬ್ಬರಿಗೂ ರಕ್ತದ ಒತ್ತಡ, ಅಲ್ಸರ್ ಪ್ರಾರಂಭವಾಯಿತು. ಜೊತೆಗೆ ಮಾನಸಿಕವಾಗಿ ಅಸ್ವಸ್ಥರಾಗಿ ಮನಃಶಾಸ್ತ್ರಜ್ಞ ಡಾ. ಬೆಂಜಾಮಿನ್ ಸಿಮೋನ್ ಬಳಿ ಚಿಕಿತ್ಸೆಗಾಗಿ ಹೋದರು. ಆ ವೈದ್ಯರು ಇಬ್ಬರನ್ನೂ ಸಮ್ಮೋಹಿನಿಗೆ ಒಳಪಡಿಸಿದಾಗ ಪ್ರಯಾಣಕಾಲದಲ್ಲಿ ಕಳೆದು ಹೋದ ಎರಡು ಗಂಟೆಗಳ ಅವಧಿಯ ವೃತ್ತಾಂತ ಹೊರಬಂತು.

ಅಂದು ಪ್ರಯಾಣದ ಸಮಯದಲ್ಲಿ ಕಾರು ಬಿಡುತ್ತಿರುವಾಗ ಬೀಪ್ ಸದ್ದು ಕೇಳಿಬಂದಿತಷ್ಟೆ. ಆಗ ಅವರಿಗೆ ಮಂಪರು ಆರಂಭವಾಯಿತು. ಆಗ ಸಾಸರಿನಿಂದ ಕೆಲವು ವ್ಯಕ್ತಿಗಳು ಬಂದು ಇಬ್ಬರನ್ನೂ ಎತ್ತಿಕೊಂಡು ಆಕಾಶಯಂತ್ರದೊಳಕ್ಕೆ ಹೋದರು.

ಅಲ್ಲಿ ಇಬ್ಬರನ್ನೂ ಬೇರೆ ಬೇರೆಯಾಗಿ ಮಲಗಿಸಲಾಯಿತು. ಬೆರ್ನೆಯ ದೇಹದಿಂದ ರಕ್ತ, ಚರ್ಮದ ಸ್ಯಾಂಪಲ್, ಕೂದಲನ್ನೆಲ್ಲಾ ಸಂಗ್ರಹಿಸಿದರು. ಹಾಗೆಯೇ ಬೆಟ್ಟಿಯನ್ನು ಮಲಗಿಸಿ ಅವಳ ಸ್ಯಾಂಪಲ್‌ಗಳನ್ನು ಸಂಗ್ರಹಿಸಿ ಗರ್ಭಕೋಶದ ಪರೀಕ್ಷೆ ಮಾಡಿದರು. ನಂತರ ಬೆಟ್ಟಿ ಅವರ ಮುಖ್ಯಸ್ಥನೊಡನೆ ಸಂಭಾಷಿಸಿದಳು. ಆಕೆಗೆ ಒಂದು ಪುಸ್ತಕ ಕೊಟ್ಟ. ಅದರಲ್ಲಿ ವಿಚಿತ್ರವಾದ ಲಿಪಿಯಲ್ಲಿ ಬರೆದ ವಾಕ್ಯಗಳಿದ್ದವು.

ಆ ಘಟನೆಗೆ ಯಾವುದೇ ಸಾಕ್ಷಿ ಉಳಿಸುವ ಇಷ್ಟವಿಲ್ಲವೆಂದು ಮುಖ್ಯಸ್ಥ ಹೇಳಿ ಬೆಟ್ಟಿಯನ್ನು ಕಾರಿಗೆ ಒಯ್ಯುವಾಗ ಅವಳಿಂದ ಪುಸ್ತಕವನ್ನು ಹಿಂದೆಗೆದುಕೊಂಡ. ಅಲ್ಲದೆ ಈ ಘಟನೆ ಅವರ ಸ್ಮೃತಿಪಟಲದಿಂದ ಸಂಪೂರ್ಣ ಅಳಿಸಲ್ಪಡುತ್ತದೆ ಎಂದೂ ತಿಳಿಸಿದ.

ಆ ವ್ಯಕ್ತಿಗಳ ಚಹರೆಯೆಲ್ಲವೂ ನೀಲಿಕಣ್ಣುಗಳು, ಮಂಗೋಲಿಯನ್ನರಂತಿದ್ದ ಕಣ್ಣಿನ ರೆಪ್ಪೆಗಳು, ತುಟಿಯೇ ಇಲ್ಲದೆ ಬಿರುಕಿನಂಥ ಬಾಯಿ ಇತ್ಯಾದಿ ವಿಲ್ಲಾಸ್ ಬೋಸ್ ವರ್ಣಿಸಿದ ಹಾಗೆಯೇ ಇತ್ತು. ಈ ಎಲ್ಲಾ ವಿವರಗಳನ್ನು ಬೆಟ್ಟಿ ಮತ್ತು ಬೆರ್ನೆಯರನ್ನು ಸಮ್ಮೋಹನಗೊಳಿಸಿ ಸಂಗ್ರಹಿಸಲಾಯಿತು.

### ಆಡಮ್‌ಸ್ಕೀ ಮತ್ತು ನಕ್ಷತ್ರಯಾತ್ರಿ

ಆಡಮ್‌ಸ್ಕೀ ಒಬ್ಬ ಖಗೋಳಶಾಸ್ತ್ರಜ್ಞ ಮತ್ತು ತತ್ವಶಾಸ್ತ್ರದ ಉಪನ್ಯಾಸಕ. ಇವನಿಗೆ ಫ್ಲಾಯಿಂಗ್ ಸಾಸರ್‌ಗಳ ಬಗ್ಗೆ ಕುತೂಹಲ ಪ್ರಾರಂಭವಾದದ್ದು ೧೯೪೬ರ ಅಕ್ಟೋಬರ್ ತಿಂಗಳಲ್ಲಿ. ಇದಕ್ಕೆ ಕಾರಣ ಅಮೆರಿಕ ಸರ್ಕಾರ ಆಕಾಶದಿಂದ ಉದುರಿ ಬೀಳುವ ಉಲ್ಕೆಗಳನ್ನು ಲೆಕ್ಕಹಾಕಿ ಹೇಳಿರೆಂದು ರೇಡಿಯೋ, ಟಿ.ವಿ.ಗಳಲ್ಲಿ ಪ್ರಸಾರ ಮಾಡಿದ್ದು. ಆ ಕಾರಣ ಆಡಮ್‌ಸ್ಕೀ ಪಾರ್ಕೋಂದರಲ್ಲಿ ಸಂಗಡಿಗರೊಂದಿಗೆ ಕುಳಿತು ಆಕಾಶ ವೀಕ್ಷಣೆ ಮಾಡುತ್ತಿದ್ದಾಗ ಉದ್ದವಾದ ಕಪ್ಪಗಿನ ಬೆಲೂನಿನಂಥ ಆಕೃತಿ ನಿಶ್ಚಲವಾಗಿ ನಿಂತಿದ್ದನ್ನು ನೋಡಿದ. ಈ ಯಂತ್ರ ಇದ್ದಕ್ಕಿದ್ದಂತೆ ತನ್ನ ಹಿಂಭಾಗದಿಂದ ನೀಲಿ ಜ್ವಾಲೆಯಂಥ ಬೆಳಕನ್ನು ಬಿಡುತ್ತಾ ಆಕಾಶದಲ್ಲಿ ಮಾಯವಾಯಿತು. ಈ ಯಂತ್ರವನ್ನು ಸಾನ್‌ಡೀಗೋ ನಗರದ ಸಾವಿರಾರು ಜನ ನೋಡಿದರು.

ಇದಾದ ಸ್ವಲ್ಪ ದಿನದಲ್ಲಿ ಆಡಮ್‌ಸ್ಕೀ ಆಕಾಶದಲ್ಲಿ ಪ್ರಕಾಶಮಾನವಾಗಿ ಹಾರುತ್ತಿದ್ದ ತಟ್ಟೆಗಳ ಸಮೂಹವನ್ನೇ ನೋಡಿದ. ಸಾಲುಸಾಲಾಗಿ ಬರುತ್ತಿದ್ದ ಆ ಪ್ರಜ್ವಲಿಸುವ ವಸ್ತುಗಳ ಒಂದೊಂದು ಸಾಲೂ ಆಕಾಶದ ಒಂದು ನಿಶ್ಚಿತ ಸ್ಥಾನಕ್ಕೆ ಬಂದೊಡನೆ ಚಕ್ಕನೆ ನಿಂತು ದಿಕ್ಕು ಬದಲಿಸಿ ಅಸಾಧ್ಯ ವೇಗದಲ್ಲಿ ಬೇರೆ ದಿಕ್ಕಿಗೆ ಮುಂದುವರಿಯುತ್ತಿದ್ದವು.

ಕೆಲವು ದಿನಗಳ ತರುವಾಯ ಆಡಮ್‌ಸ್ಕೀ ನಾಲ್ಕು ಮಿಲಿಟರಿ ಅಧಿಕಾರಿಗಳನ್ನು ಸಂಧಿಸಿದ. ಇವರಲ್ಲಿ ಇಬ್ಬರು ಅಮೆರಿಕದ ನೌಕಾಪಡೆಯಲ್ಲಿ ಮಿಲಿಟರಿ ವಿಜ್ಞಾನಿಗಳು. ಮೌಂಟ್ ಪಾಲೋಮಾರ್‌ನ ಅತಿ ದೊಡ್ಡ ಟೆಲಿಸ್ಕೋಪಿನಲ್ಲಿ ಛಾಯಾಚಿತ್ರ ತೆಗೆಯಲು ಸಾಧ್ಯವಿರಲಿಲ್ಲವಾದ್ದರಿಂದ ಈ



ವರ್ಜೀನಿಯಾದಲ್ಲಿ ಗಜ್ಜರಿಯಂಥ ಆಕೃತಿ ತೋರಿದ್ದುಂಟು (೧೯೬೮)

ವಿಜ್ಞಾನಿಗಳು ಆಡಮ್‌ಸ್ಕೀ ತನ್ನ ಖಗೋಳಶಾಸ್ತ್ರ ಅಧ್ಯಯನಕ್ಕೆಂದು ಇಟ್ಟುಕೊಂಡಿದ್ದ ಟೆಲಿಸ್ಕೋಪಿನ ಸಹಾಯದಿಂದ ಹಾರುವ ತಟ್ಟೆಗಳ ಚಿತ್ರ ತೆಗೆದು ಕೊಡಲು ಕೇಳಿಕೊಂಡರು. ಆ ಪ್ರಕಾರ ಆಡಮ್‌ಸ್ಕೀ ಹಾರುವ ತಟ್ಟೆಗಳ ಅನೇಕ ಫೋಟೋ ತೆಗೆದು ಅಮೆರಿಕದ ವಾಯುಪಡೆಯ ಸಂಶೋಧನಾ ವಿಭಾಗಕ್ಕೆ ಕಳುಹಿಸಿದ.

೧೯೫೧ ಮತ್ತು ೧೯೫೨ನೇ ವರ್ಷದಲ್ಲಿ 'ಫ್ಲಾಯಿಂಗ್ ಸಾಸರ್' ಚಟುವಟಿಕೆಗಳು ಪಶ್ಚಿಮಾರ್ಧ ಗೋಳದಲ್ಲಿ ಹೆಚ್ಚಿದವು. ಕ್ಯಾಲಿಫೋರ್ನಿಯಾದ ಅರಿಜೋನಾ ಮರುಭೂಮಿಯಲ್ಲಿ ಸಾಸರ್‌ಗಳು ಇಳಿದ ವರದಿ ಬರತೊಡಗಿದವು.

ಆಡಮ್‌ಸ್ಕೀ ಅರಿಜೋನಾ ಮರುಭೂಮಿಗೆ ಹೋಗಲು ನಿರ್ಧರಿಸಿದ. ೧೯೫೨ರ ಆಗಸ್ಟ್ ತಿಂಗಳಲ್ಲಿ ಶ್ರೀ ಮತ್ತು ಶ್ರೀಮತಿ ಎ.ಸಿ. ಬೇಯ್ಲಿ ಎಂಬ ದಂಪತಿಗಳು ಆಡಮ್‌ಸ್ಕೀಯನ್ನು ಭೇಟಿಯಾಗಿ ಸಾಸರ್‌ಗಳ ಅನ್ವೇಷಣೆಗೆ ತಮ್ಮನ್ನು ಕರೆದುಕೊಂಡು ಹೋಗುವಂತೆ ಕೇಳಿಕೊಂಡರು.

ಬೇಯ್ಲಿ ಮತ್ತು ಅವರೊಡನೆ ವಿಲಿಯಂಸನ್ ಎಂಬ ದಂಪತಿಗಳೊಡನೆ ನವೆಂಬರ್ ೨೦ ರಂದು ಆಡಮ್‌ಸ್ಕೀ ಕ್ಯಾಲಿಫೋರ್ನಿಯಾದ ಬೈಥೇ ತಲುಪಿದರು. ಅಲ್ಲಿ ಮರುಳುಗಾಡಿನ ಏಕಾಂತದಲ್ಲಿ ವಿಮಾನದ ಹಾರಾಟ ಕೇಳಿಬಂತು. ತಲೆಯೆತ್ತಿ ನೋಡಿದಾಗ ವಿಮಾನದ ಹಿಂದೆ ಇದ್ದಕ್ಕಿದ್ದಂತೆ ದೊಡ್ಡ ಸಿಗಾರ್ ಮಾದರಿಯ ಆಕಾಶಯಂತ್ರ ಕಾಣಿಸಿತು. ನಿಧಾನವಾಗಿ ತೇಲುತ್ತಾ ಅವರ ಸಮೀಪದಲ್ಲೇ ಎನ್ನುವಂತೆ ಆಕಾಶದಲ್ಲಿ ನಿಶ್ಚಲವಾಗಿ ನಿಂತಿತು.

### ಅವಿಸ್ಮರಣೀಯ ನವೆಂಬರ್ ಇಪ್ಪತ್ತು

ಆಡಮ್‌ಸ್ಕೀಯ ಮಾತುಗಳಲ್ಲೇ ಹೇಳುವುದಾದರೆ, "ಆ ಆಕಾಶನೌಕೆಯನ್ನು ನಾವೆಲ್ಲಾ ಹೆಚ್ಚು ಕಡಿಮೆ ಏಕಕಾಲದಲ್ಲಿ ನೋಡಿದೆವು- ಅದರ ಮೇಲೆ ವಿಚಿತ್ರ ಚಿಹ್ನೆಯಿತ್ತು.

"ಹಾರುವ ತಟ್ಟೆ ನಮ್ಮ ತಲೆಯ ಮೇಲೆ ನಿಶ್ಚಲವಾಗಿ ನಿಂತ ರೀತಿಯಿಂದ ಒಳಗಿದ್ದವರಿಗೆ ಏನೋ ನಿಶ್ಚಿತ ಉದ್ದೇಶವಿದೆಯೆಂದು ಅನ್ನಿಸಿತು. ಫ್ಲಾಯಿಂಗ್ ಸಾಸರ್ ಇಳಿಯಲು ಮತ್ತು ಸಾಧ್ಯವಾದರೆ ನಮ್ಮೊಡನೆ ಸಂಪರ್ಕಿಸಲು ಇದು ಸಮರ್ಪಕ ಸ್ಥಳವಲ್ಲವೆಂದು ಎನ್ನಿಸಿತು. ಆದ್ದರಿಂದ ಕಾರಿನಲ್ಲಿ ಒಂದರ್ಧ ಮೈಲಿ ಸಾಗಿ ಅಲ್ಲಿ ನನ್ನ ಟೆಲಿಸ್ಕೋಪಿನ ಪೆಟ್ಟಿಗೆ ತೆಗೆದ ಮತ್ತು ಉಳಿದವರಿಗೆ ನಮ್ಮ ಹಳೆಯ ಜಾಗದಿಂದ ನನ್ನನ್ನು ಬೈನಾಕ್ಯುಲರ್‌ನಲ್ಲಿ ಗಮನಿಸುತ್ತಿರಲು ಹೇಳಿದೆ.

"ನಾನು ಟೆಲಿಸ್ಕೋಪಿನ ಪೀಸನ್ನು ಜೋಡಿಸುತ್ತಾ ನಿಂತಾಗ ಇದ್ದಕ್ಕಿದ್ದಂತೆ ನನ್ನ ಸಮೀಪದ ಕಣಿವೆಯೊಂದರ ಬಳಿ ದಿಣ್ಣೆಯ ಮೇಲೆ ಯಾರೋ ಕೈ ಬೀಸಿ ಕರೆಯುತ್ತಿದ್ದರು. ಸದ್ದಿಲ್ಲದೆ ಬಂದ ಅವನನ್ನು ನೋಡಿ ನನಗೆ ಆಶ್ಚರ್ಯವಾಯಿತು.

"ಅವನ ಸಮೀಪ ಹೋದಂತೆ ನನಗೂ ಅವನಿಗೂ ಇದ್ದ ವ್ಯತ್ಯಾಸ ಗೋಚರಿಸಿತು. ಸ್ಕೀ ಆಟಗಾರರು ಧರಿಸುವಂತಹ ಪೈಜಾಮವನ್ನಾತ ಧರಿಸಿದ್ದ. ಕೂದಲು ಹೆಗಲಿನವರೆಗೂ ಇಳಿದಿತ್ತು. ಆತನನ್ನು ನೋಡುತ್ತಿದ್ದರೆ ಸಂಶಯ, ಜಾಗರೂಕತೆ, ವ್ಯಾಕುಲ ಇತ್ಯಾದಿಗಳೆಲ್ಲ ಬರುತ್ತಿದ್ದರೂ ಅವನ ಹತ್ತಿರ ಹೋಗುತ್ತಿದ್ದಂತೆ ಪ್ರಶಾಂತ ವ್ಯಕ್ತಿತ್ವದ ಸಾನ್ನಿಧ್ಯದಲ್ಲಿರುವ ನೆಮ್ಮದಿ ಬರತೊಡಗಿತು.

"ಇದು ಅವರ ಸ್ನೇಹದ ಸಂಕೇತವಿರಬೇಕು, ಅವನು ತನ್ನ ಅಂಗೈಯನ್ನು ನನ್ನ ಅಂಗೈಗೆ ಮೆಲ್ಲಗೆ ತಾಗಿಸಿದ. ಅವನ ಕೈ ಪುಟ್ಟ ಮಗುವಿನ ಕೈಯಂತೆ ಮೃದುವಾಗಿಯೂ ನುಣುಪಾಗಿಯೂ ಇತ್ತು. ಆತ ಸುಮಾರು ಐದು ಅಡಿ ಆರು ಅಂಗುಲ ಎತ್ತರವಿದ್ದು ಸುಮಾರು ೧೩೫ ಪೌಂಡು ತೂಕವಿರುವಂತೆ ತೋರಿತು. ನಮ್ಮ ಭೂಮಿಯ ವಯೋಮಾನದ ಪ್ರಕಾರ ಸುಮಾರು ೨೮ ವರ್ಷದವನಂತೆ ಆತ ಕಾಣುತ್ತಿದ್ದ.

"ಅವನ ಹಣೆಯ ಮುಂಭಾಗ ಎತ್ತರವಾಗಿದ್ದು, ಮುಖ ಗುಂಡಾಗಿತ್ತು. ಅಗಲವಾದ ಹಸಿರು ಬಣ್ಣದ ಕಣ್ಣೆಗಳಿದ್ದು ಕನ್ನೆ ಮೂಳೆ ಗಲ್ಲಗಳು ಪೌರಸ್ತ್ಯ ದೇಶದವರನ್ನು ಹೋಲುತ್ತಿದ್ದವು. ನಮ್ಮಂತೆಯೇ ಸಾಲು ಸಾಲು ಬಿಳಿಯ ಹಲ್ಲುಗಳಿದ್ದವು.

ತಲೆಯಿಂದ ಕಾಲಿನವರೆಗೂ ಒಂದೇ ಉಡು

ಪಿತ್ತು. ಸೊಂಟದ ಬಳಿ ಬೆಲ್ಟ್ ಧರಿಸಿದ್ದ. ಉಂಗುರವಾಗಲಿ, ಕೈಗಡಿಯಾರವಾಗಲಿ ಇರಲಿಲ್ಲ. ಬಟ್ಟೆಯಿಂದ ನೇಯ್ದದಂತಹ ಪಾದರಕ್ಷೆ ಧರಿಸಿದ್ದ.

"ನಮ್ಮ ಭಾಷೆ ಅರ್ಥವಾಗದ ಕಾರಣ ಎಲ್ಲಕ್ಕೂ ನಕ್ಕು ತಲೆಯನ್ನು ಆಡಿಸುತ್ತಿದ್ದ. ಆಗ ಆತನೊಡನೆ ಸಂಜ್ಞೆ ಮತ್ತು ಟೆಲಿಪತಿಯ ಮುಖಾಂತರ ಸಂಭಾಷಿಸಲೆತ್ನಿಸಿದೆ. ಮನಸ್ಸಿನಲ್ಲಿ ಗ್ರಹವನ್ನು ಕಲ್ಪಿಸಿಕೊಳ್ಳುತ್ತ ಸಂಜ್ಞೆ ಮಾಡಿದೆ. ಆತ ಅರ್ಥವಾದವನಂತೆ ಪ್ರತಿಕ್ರಿಯಿಸಿದ. ನಂತರ ಸೂರ್ಯನನ್ನು ತೋರಿಸುತ್ತಾ ಸನ್ನೆ ಮಾಡಿದೆ, ತದನಂತರ ಒಂದು ವೃತ್ತ ತೋರಿಸಿ ಮರ್ಕ್ಯುರಿ ಎಂದೆ. ಮತ್ತೊಂದು ವೃತ್ತವನ್ನು ಕೊಂಚ ದೊಡ್ಡದಾಗಿ ನಿರ್ದೇಶಿಸುತ್ತ ವೀನಸ್ ಎಂದೆ. ಮೂರನೆ ವೃತ್ತವನ್ನು 'ಅರ್ತ್' ಎಂದೆ. ಅವನೂ ಆಕಾಶವನ್ನು ತೋರಿಸುತ್ತಾ ಒಂದಾದ ಮೇಲೊಂದು ವೃತ್ತಗಳನ್ನೆಳೆದು ತನ್ನನ್ನು ತೋರಿಸಿದ. 'ಹಾಗಾದರೆ ಶುಕ್ರ ಗ್ರಹದವನೇ ನೀನೂ?' ಎಂದಾಗ ಹೌದೆಂದು ತಲೆಯಲುಗಿಸಿದ. ಎರಡು ಮೂರು ಬಾರಿ ವೀನಸ್ ಎಂದು ಹೇಳಿದೆ. ಅವನೂ ಹಾಗೆಯೇ ಹೇಳಿದ.

"ಅವನ ಧ್ವನಿ ತಾರಕಸ್ವರದಲ್ಲಿದ್ದಂತೆ ಅನ್ನಿಸಿತು. ಭೂಮಿಗೆ ಬರುತ್ತಿರುವ ಕಾರಣವನ್ನು ಕೇಳಿದಾಗ ಇಲ್ಲಿಗೆ ಸ್ನೇಹಿತರಂತೆ ಬರುತ್ತಿರುವುದಾಗಿಯೂ ಭೂಮಿಯ ಅಣುವಿಕಿರಣದ ಬಗ್ಗೆ ಕಳವಳವಾಗಿದೆಯೆಂದೂ ಹೇಳಿದ. ನಂತರ ಅಣುವಿಕಿರಣವು ಗಿಡಗಳಿಗೂ ಮಾನವರಿಗೂ ಹಾನಿಕರವೆಂದು ತಿಳಿಸಿದ.

ಗುರುತ್ವಾಕರ್ಷಣ ಶಕ್ತಿಯನ್ನು ಬಳಸಿಕೊಂಡು ಭೂಮಿಯ ವಾತಾವರಣದೊಳಕ್ಕೆ ಸಾಸರುಗಳನ್ನು ಮಾತೃನೌಕೆಯಾದ ಸಿಗಾರ್ ಮಾದರಿಯ ನೌಕೆಯೊಳಗೆ ತಂದು ನಂತರ ಸಾಸರ್‌ಗಳಲ್ಲಿ ಯಾನ ಮಾಡುತ್ತಾರೆಂದೂ ತಿಳಿಸಿದ.

### ಅನಂತಾಕಾಶದ ಕಡೆಗೆ

ಹೀಗೆಯೇ ಸಂಜ್ಞೆಯ ಮುಖಾಂತರ ಮಾತನಾಡುತ್ತಾ, "ನೀವು ದೇವರನ್ನು ನಂಬುತ್ತೀರಾ?" ಎಂದು ಕೇಳಿದಾಗ ಅದಕ್ಕೆ ಅವನು, ತಾವು ಸೃಷ್ಟಿಕರ್ತನನ್ನು ಅರಿತಿದ್ದೇವೆಂದೂ ತಮ್ಮ ನಡೆನುಡಿಗಳು ಅವನ ಇಚ್ಛೆಯನ್ನನುಸರಿಸಿ ನಡೆಯುತ್ತ

ಹೆಲ್ಮೆಟ್ ನಮೂನೆಯ ಈ ವಸ್ತುವನ್ನು ೧೯೬೩ರಲ್ಲಿ ಕೆಲ ಇಂಗ್ಲಿಷ್ ಹುಡುಗರು ನೋಡಿದರೆಂದು ವರದಿ



111

ವೆಂದೂ ಹೇಳಿದ. ಭೂಮಿಯಂತೆ ಈ ತಾರಾಮಂಡಲದ ಅನೇಕ ಗ್ರಹಗಳಲ್ಲಿ ವಿಕಾಸಗೊಂಡ ಜೀವಿಗಳಿವೆಯೆಂದೂ ಅವರೆಲ್ಲ ಬಹುಪಾಲು ಮಾನವರನ್ನೇ ಹೋಲುತ್ತಾರೆಂದೂ ಹೇಳಿದ.

"ಆದರೆ ಸಾಸರನ್ನು ನೋಡುವ ಅಪೇಕ್ಷೆ ವ್ಯಕ್ತಪಡಿಸಿದಾಗ, ಅವನ ಛಾಯಾಚಿತ್ರ ತೆಗೆದುಕೊಳ್ಳುವುದಕ್ಕೆ ಒಪ್ಪಲಿಲ್ಲ.

"ನಾನು ಗಡಿಬಿಡಿಯಲ್ಲಿ ಆತನ ಹೆಸರನ್ನಾಗಲಿ ಚಂದ್ರಮಂಡಲದ ಬಗ್ಗೆಯಾಗಲಿ ಕೇಳಲಿಲ್ಲ, ಆದರೆ ಆತ ತನ್ನ ಭಾಷೆಯಲ್ಲಿ ಮತ್ತೆ ಮತ್ತೆ ತನ್ನ ಪಾದರಕ್ಷೆಗಳತ್ತ ಬೆರಳುಮಾಡಿ ತೋರಿಸುತ್ತಾ ಏನೋ ಹೇಳಿದ. ಆದರೆ ಏನೂ ತಿಳಿಯಲಿಲ್ಲ. ಆತ ಹೇಳುತ್ತಿದ್ದ ರೀತಿಯಿಂದ ಅತಿ ಮುಖ್ಯವಾದದ್ದೇನನ್ನೋ ಹೇಳುತ್ತಿದ್ದಾನೆ ಎನ್ನಿಸಿತು.

"ಆತ ನಿಧಾನವಾಗಿ ಸಾಸರಿನತ್ತ ನಡೆಯತೊಡಗಿದ. ನನ್ನ ಬಳಿಯಿದ್ದ ಫೋಟೋ ಪ್ಲೇಟುಗಳಲ್ಲಿ ಒಂದನ್ನು ತೆಗೆದುಕೊಂಡು ನಂತರ ಹಿಂದಿರುಗಿಸುವುದಾಗಿ ತಿಳಿಸಿದ. ಸಾಸರಿನೊಳಕ್ಕೆ ಹೋದ ನಂತರ ಯಾರೋ ಇಬ್ಬರು ಮಾತನಾಡುತ್ತಿರುವುದು ಕೇಳಿಸಿತು.

"ಕೆಲವು ಕ್ಷಣಗಳಲ್ಲಿ ಸಾಸರ್ ಆಕಾಶದಲ್ಲಿ ಮರೆಯಾಯಿತು. ಗಗನಯಾತ್ರಿ ನಿಂತಿದ್ದ ಸ್ಥಳದಲ್ಲಿ ಆತನ ಹೆಜ್ಜೆಗುರುತುಗಳು ಆಳವಾಗಿ ಮೂಡಿದ್ದವು. ಇದರ ಎರಕವನ್ನು ಪ್ಲಾಸ್ಟರ್ ಆಫ್ ಪ್ಯಾರಿಸ್‌ನಿಂದ ತೆಗೆದೆವು.

"ನನ್ನ, ಗಗನಯಾತ್ರಿಯ ಭೇಟಿಯನ್ನು ಬೇಯ್ಲಿ ಮತ್ತು ವಿಲಿಯಂಸನ್ ದಂಪತಿಗಳು ದೂರದಿಂದ ವೀಕ್ಷಿಸಿದ್ದರು.

"ಫೋಟೋ ಪ್ಲೇಟನ್ನು ಒಯ್ದಿದ್ದ ಗಗನಯಾತ್ರಿ ಡಿಸೆಂಬರ್ ೩ನೇ ತಾರೀಖು ನನ್ನ ಮನೆಯ ಬಳಿಯ ನಿರ್ಜನ ಪ್ರದೇಶದಲ್ಲಿ ಸಾಸರಿನಲ್ಲಿ ಬಂದು ಕೆಳಕ್ಕೆ ಹಾಕಿದ. ಆ ಫಿಲ್ಮನ್ನು ಡೆವಲಪ್ ಮಾಡಿದಾಗ ಏನೇನೋ ವಿಚಿತ್ರ ಗಣಿತ ಸಂಜ್ಞೆಗಳೂ, ಸಾಸರಿನ ನಕ್ಷೆಯೂ ಇತ್ತು. ಆದರ ಅರ್ಥ ತಿಳಿಯಲಿಲ್ಲ."

ಇದಿಷ್ಟೂ ಆಡಮ್‌ಸ್ಕೀಯ ಅನುಭವ.

ಇಲ್ಲಿ ಆಡಮ್‌ಸ್ಕೀ ಗಗನಯಾತ್ರಿಯ ಜೊತೆಗಿನ ಸಂಜ್ಞಾರೂಪದ ಸಂಭಾಷಣೆಯನ್ನು ತನಗೆ ತೋಚಿದಂತೆ ಅರ್ಥೈಸಿದ್ದಾನೆ. ಆದ್ದರಿಂದ ಆಡಮ್‌ಸ್ಕೀಯ ತೀರ್ಮಾನಗಳು ಪ್ರಶ್ನಾರ್ಹವಾಗಿವೆ. ಇದೇ ಸತ್ಯವೆಂಬ ತಿಳುವಳಿಕೆಗೆ ಬರಲಾಗುವುದಿಲ್ಲ.

## ಈ ಒಗಟನ್ನು ಬಿಡಿಸಬಲ್ಲನೆ?

ಯು.ಎಫ್.ಒ.ಗಳಿಗೆ ಸಂಬಂಧಿಸಿದಂತೆ ನಮಗಿರುವ ಮೊದಲ ಸಮಸ್ಯೆ ಎಂದರೆ ಅವುಗಳೊಡನೆ ಇರುವ ಸಂಪರ್ಕ ಮಾಧ್ಯಮಗಳ ಕೊರತೆ ಮತ್ತು ನಮ್ಮ ಪೂರ್ವಾಗ್ರಹ. ಇವು ಮಾನವ ವರ್ಗಕ್ಕೆ ಸಿಗದೆ ನುಣುಚಿಕೊಳ್ಳುತ್ತಿವೆಯೇ ಹೊರತು ಸಂಪರ್ಕ ಸಾಧಿಸುತ್ತಿಲ್ಲ.

ಆದರೆ ಈ ಎಲ್ಲ ಜೀವಿಗಳ ವರ್ತನೆ ಮತ್ತು ಕೌಶಲವನ್ನು ಗಮನಿಸಿದರೆ ಇವು ತಂತ್ರಜ್ಞಾನದಲ್ಲಿ ನಮಗಿಂತ ಮುಂದಿರುವುದು ಸ್ಪಷ್ಟವಾಗುತ್ತದೆ. ಯು.ಎಫ್.ಒ.ಗಳು ಮುಂದುವರಿದ ತಂತ್ರಜ್ಞಾನ ಪ್ರದರ್ಶಿಸಿವೆ ಎಂದ ಮಾತ್ರಕ್ಕೆ ಅವುಗಳು ವೈಜ್ಞಾನಿಕವಾಗಿ ಮುಂದುವರಿದಿವೆಯೆಂದು ಹೇಳಲು ಸಾಧ್ಯವೆ?

ನಾವು ದೂರದ ಬಾಹ್ಯಾಕಾಶಯಾನಕ್ಕೆ ರೋಬಾಟ್‌ಗಳನ್ನು ಬಳಸುತ್ತಿರುವಂತೆಯೇ ಯು.ಎಫ್.ಒ.ಗಳಿಂದ ಬರುತ್ತಿರುವವರೂ ಯಂತ್ರಮಾನವರೆ? ಹಾಗಾದರೆ ಇವುಗಳನ್ನು ಸೃಷ್ಟಿಸಿದವರು ಯಾರು?

ಯು.ಎಫ್.ಒ.ಗಳು ಸಂಪರ್ಕಾತೀತವಾಗಿ ಉಳಿದಿರುವುದರಿಂದ ಉದ್ಭವಿಸಿರುವ ಸಮಸ್ಯೆಗಳು.

ಆಡಮ್‌ಸ್ಕೀ, ಕ್ರೆಸ್ಪೆಡಾನ್ ಮುಂತಾದವರು ಯಾವುದೋ ಒಂದು ರೀತಿಯಿಂದ ಸಂಪರ್ಕ ಸಾಧಿಸಿದವರ ಹೇಳಿಕೆಗಳಲ್ಲಿ ಅವರು ಕೊಡುವ ಸಾಕ್ಷ್ಯಾಧಾರಗಳಲ್ಲಿ ಪರಸ್ಪರ ಹೊಂದದ ವಿರೋಧಾಭಾಸಗಳಿವೆ.

ಯು.ಎಫ್.ಒ.ಗಳು ದೂರದ ತಾರಾಲೋಕದಿಂದ ಬಂದವೆ? ಅಥವಾ ಕಾಲದೇಶಗಳ ನಮ್ಮ ಪರಿಮಿತಿಯಾಚೆಗೆ ನಮ್ಮೊಡನೆಯೆ ಇನ್ನೊಂದು ಪ್ರತಿವಿಶ್ವ ಇದೆಯೆ? ಆ ಆಯಾಮದಿಂದ ಈ

ಆಯಾಮಕ್ಕೆ ಯು.ಎಫ್.ಒ. ಗಳು ಬಂದುಹೋಗುತ್ತಿವೆಯೇ?

ಈ ಎಲ್ಲಾ, ಊಹೆ, ಕಲ್ಪನೆಗಳನ್ನು ಪಕ್ಕಕ್ಕೆ ಇಟ್ಟು ಯೋಚಿಸುವುದಾದರೆ 'ಯು.ಎಫ್.ಒ.'ಗಳ ಅಧ್ಯಯನ ಮಾಡುವ ಪ್ರತಿಯೊಬ್ಬರೂ ಒಂದು ವಿಷಯವನ್ನು ಜ್ಞಾಪಕದಲ್ಲಿಟ್ಟುಕೊಳ್ಳುವುದು ಒಳ್ಳೆಯದು: ಯು.ಎಫ್.ಒ. ಅಧ್ಯಯನವೆಂದರೆ ನಂಬಿಕೆ, ಅಪನಂಬಿಕೆಗಳನ್ನು ಮೀರಿ ಶುದ್ಧ ಅರಿವನ್ನು ಅರಸುವುದು.

## ಬಾಹ್ಯಾಕಾಶದ ಬುದ್ಧಿಜೀವಿಗಳ ಅನ್ವೇಷಣೆ

ವಿಜ್ಞಾನದ ಹೊಸ ಹೊಸ ಅನ್ವೇಷಣೆಗಳೆಲ್ಲ ಮಾನವನ ಸ್ವಪ್ರತಿಷ್ಠೆಯನ್ನು ಹಂತಹಂತವಾಗಿ ಕೆಳಗಿಳಿಸಿವೆ. ಸ್ವಪ್ರತಿಷ್ಠೆಗೆ ಈಗ ಆಸರೆಯಾಗಿರುವುದು ಇಡೀ ಬ್ರಹ್ಮಾಂಡದಲ್ಲಿ ಇರುವ ಬುದ್ಧಿಯುತ ಜೀವಿ ತಾನೊಬ್ಬನೇ ಎಂಬ ಕಲ್ಪನೆ. ಚಂದ್ರಲೋಕಕ್ಕೆ ಕಳುಹಿಸಿರುವ ಗಗನಯಾತ್ರಿಗಳ ಅನುಭವ ಮರೀನರ್ ಮತ್ತು ವಾಯೇಜರ್ ಕಳುಹಿಸಿರುವ ಮಾಹಿತಿ ಈ ಕಲ್ಪನೆಯನ್ನೇ ಪ್ರೋತ್ಸಾಹಿಸಿದೆ,

ಆದರೆ ಕೆಲವು ವಿಜ್ಞಾನಿಗಳು ಬ್ರಹ್ಮಾಂಡದಲ್ಲಿ ಜೀವ ಇಲ್ಲ ಎಂದರೆ ಇನ್ನು ಕೆಲವು ವಿಜ್ಞಾನಿಗಳು ಈ ಬ್ರಹ್ಮಾಂಡ ನಿಯಮಬದ್ಧ ಎನ್ನುವುದಾದರೆ ಈ ಕೋಟ್ಯಂತರ ಸೂರ್ಯಗಳ ಕೋಟಿ ಕೋಟಿ ಗ್ರಹಗಳಲ್ಲಿ ಜೀವೋತ್ಪತ್ತಿಗೆ ಅನುಕೂಲಕರ ಪರಿಸರ ಇರುವ ಕಡೆಗಳಲ್ಲಿ ಜೀವ ಅನಿವಾರ್ಯ ಎನ್ನುತ್ತಾರೆ.

ನೋಬೆಲ್ ಪ್ರಶಸ್ತಿ ಪಡೆದ ಖಭೌತ ವಿಜ್ಞಾನಿ ಡಾ. ಎರ್ರಿಕ್ ಚೈಸನ್ ವಿಶ್ವದ ಆಯುರ್‌ಮಾನವನ್ನು ಮೂರು ವಿಭಾಗವಾಗಿ ವಿಂಗಡಿಸುತ್ತಾರೆ.

ಮೊದಲನೆಯದು ರೇಡಿಯೆಶನ್ ಯುಗ, ಎರಡನೆಯದು ವಸ್ತುಯುಗ, ಮೂರನೇಯದು ಜೀವಯುಗ, ನಾವಿನ್ನು ವಸ್ತುಯುಗದ ಪೂರ್ವಾರ್ಧದಲ್ಲೇ ಇದ್ದೇವೆ. ಜೀವಯುಗದಲ್ಲಿ ಜೀವ ಮತ್ತು ಅದರ ಪ್ರಜ್ಞೆ ವಿಶ್ವದ ಪ್ರಧಾನ ಶಕ್ತಿಯಾಗಬಹುದೆಂದಿದ್ದಾರೆ.

ಬ್ರಹ್ಮಾಂಡದಲ್ಲಿ ಜೀವದ ಅನ್ವೇಷಣೆಯ ಸಮಾನ ಧ್ಯೇಯವಿರುವ ಪ್ರಪಂಚದ ಅನೇಕ ಖ್ಯಾತ ವಿಜ್ಞಾನಿಗಳೆಲ್ಲ ಸೇರಿ ಒಂದು ಪ್ರಯೋಗ ಪ್ರಾರಂಭಿಸಿದ್ದಾರೆ. ಅದರ ಹ್ರಸ್ವರೂಪ seti ಎಂದರೆ search for extraterrestrial intelligence ಎಂದು. ಈ ಪ್ರಯೋಗದಲ್ಲಿ ವಿಜ್ಞಾನ ಶಾಖೆಯ ಅತ್ಯುನ್ನತ ವಿಜ್ಞಾನಿಗಳೆಲ್ಲ ಬಾಹ್ಯಾಕಾಶದ ಬುದ್ಧಿಜೀವಿಗಳ ಹುಡುಕಾಟದಲ್ಲಿ ತೊಡಗಿದ್ದಾರೆ. ಕೆಲವು ವಿಜ್ಞಾನಿಗಳ ಪ್ರಕಾರ ಈ ಹುಡುಕಾಟ ವ್ಯರ್ಥ.

seti ವಿಜ್ಞಾನಿಗಳಲ್ಲಿ ಒಬ್ಬರಾದ ಡಾ. ಆಲ್ಬರ್ಟ್ ಹಿಬ್ಸ್ ಪ್ರಕಾರ "ಮೂರು ಕಾರಣಗಳಿಂದ ನಮಗೆ



೧೯೬೮ರ ಜುಲೈ ೧ ರಂದು ಬ್ರಾಜಿಲಿನ ಬೊಟುಕಾಟು ಎಂಬಲ್ಲಿ ಹುಡುಗನೊಬ್ಬ ಇಂಥದನ್ನು ಕಂಡನಂತೆ



ಇಲಿನಾಯ್ಸ್‌ನಲ್ಲಿ (೧೯೬೭) ಕಂಡ ಹಾರಾಡುವ ತಟ್ಟೆಗೆ ಹಳದಿ-ಕಿತ್ತಲೆ-ಕೆಂಬಣ್ಣದ ದೀಪಗಳಿದ್ದವಂತೆ



ಟೆಕ್ಸಾಸಿನ ಒಂದು ಕುಟುಂಬ ೧೯೬೭ರ ಫೆಬ್ರವರಿಯಲ್ಲಿ ಕಂಡಿತೆನ್ನಲಾದ ಫ್ಲಾಯಿಂಗ್ ಸಾಸರ್

ಅವರ ಸುಳಿವು ಸಿಗುತ್ತಿಲ್ಲ. ಮೊದಲನೆಯದು ನಮಗೆ ಸುಳಿವುಗಳಿಗೆ ಹೇಗೆ ಎಲ್ಲಿ ನೋಡಬೇಕೆಂದು ಗೊತ್ತಿಲ್ಲ, ಎರಡನೇಯದು ಬಾಹ್ಯಾಕಾಶ ಜೀವಿಗಳು ಸುಳಿವು ಕೊಡುತ್ತಿಲ್ಲ. ಮೂರನೇಯದು ಯು.ಎಫ್.ಓ. ಬಗ್ಗೆ ವೈಜ್ಞಾನಿಕ ಅನ್ವೇಷಣೆಗೆ ಗಟ್ಟಿ ಸಾಕ್ಷ್ಯಾಧಾರಗಳು ಇನ್ನೂ ದೊರಕಿಲ್ಲ ಅಥವಾ ನಮ್ಮ ಮೂಗಿನ ನೇರಕ್ಕೆ ಬೇಕಾದಂಥ ಸಾಕ್ಷಾಧಾರ ಬಯಸುತ್ತಾ ತಪ್ಪು ಮಾಡುತ್ತಿದ್ದೇವೆ".

ಒಟ್ಟಿನಲ್ಲಿ ಈ ಎಲ್ಲ ವಿವೇಚನೆಯ ತೀರ್ಮಾನ ಇಷ್ಟು: ವಿಶ್ವಪರ್ಯಟನ ಮಾಡುವಷ್ಟು ಮುಂದುವರಿದ ಜೀವಿಗಳಿರುವುದಾದರೆ ಅವರ ಅಸ್ತಿತ್ವ ಇರುವುದು ನಮಗೆ ಗೊತ್ತಾಗುವುದು ಆ ಜೀವಿಗಳ ಇಚ್ಛೆಯನ್ನು ಅವಲಂಬಿಸಿದೆಯೆ ಹೊರತು ನಮ್ಮ ಇಚ್ಛೆಯನ್ನಲ್ಲ.

## ತರ್ಕದ ಮಹಿಮೆ

ಒಮ್ಮೆ ವಿದೇಶಿ ರಾಜನೊಬ್ಬ ವಿಜಯನಗರದ ಶ್ರೀ ಕೃಷ್ಣದೇವರಾಯನಿಗೆ ಒಂದು ಬುಟ್ಟಿ ಹಣ್ಣುಗಳನ್ನೂ ಅವುಗಳ ಸೇವನೆಯಿಂದ ಆಯಸ್ಸು ವೃದ್ಧಿಸುತ್ತದೆ ಎಂಬ ಸಂದೇಶವನ್ನೂ ಕಳಿಸಿದನಂತೆ. ಆಗ ಅಲ್ಲಿಯೇ ಇದ್ದ ತೆನಾಲಿ ರಾಮಕೃಷ್ಣ ಅವುಗಳಲ್ಲಿ ಒಂದನ್ನು ತೆಗೆದುಕೊಂಡು ಕಚ್ಚಿಬಿಟ್ಟನಂತೆ. ಇದನ್ನು ಕಂಡು ಕೋಪಗೊಂಡ ಕೃಷ್ಣರಾಯ ತೆನಾಲಿಗೆ ಮರಣದಂಡನೆ ವಿಧಿಸಿಬಿಟ್ಟನಂತೆ. ಆಗ ತೆನಾಲಿ "ಬರಿ ಕಚ್ಚಿದ್ದಕ್ಕೆ ಮರಣ ಬಂತು, ಪೂರ್ತಿ ತಿಂದಿದ್ದರೆ ಏನಾಗುತ್ತಿತ್ತೋ?" ಎಂದು ಗೊಣಗಿದಾಗ ಆತನ ತರ್ಕದಲ್ಲಿದ್ದ ಜಾಣ್ಮೆಯನ್ನು ಮೆಚ್ಚಿದ ರಾಜ ತನ್ನ ವಿದೂಷಕನನ್ನು ಕ್ಷಮಿಸಿದನಂತೆ.

ಕೆ. ವೆಂಕಣ್ಣಾಚಾರ್

### ಸ್ವಾಸ್ಥ್ಯ ಸಲಹೆಗಳು

# ಊಟ ಬಲ್ಲವನಿಗೆ ರೋಗವಿಲ್ಲ

ವಿವಿಧ ಡಾಕ್ಟರುಗಳಿಂದ

ಊಟ ಬಲ್ಲವನಿಗೆ ರೋಗವಿಲ್ಲ ಎಂದು ಹಿರಿಯರು ಹೇಳಿದ್ದರಲ್ಲಿ ಅತಿಶಯೋಕ್ತಿಯೇನೂ ಇಲ್ಲ. ಸಮಯಕ್ಕೆ ಸರಿಯಾಗಿ, ಹಿತಮಿತವಾದ, ಪೌಷ್ಟಿಕವಾದ ಆಹಾರವನ್ನು ಸೇವಿಸಿದಲ್ಲಿ ಸ್ವಾಸ್ಥ್ಯವನ್ನು ಕಾಯ್ದುಕೊಳ್ಳಲು ಖಂಡಿತವಾಗಿಯೂ ಅನುವಾಗುವುದು. ಬರಿ ಆಹಾರ ಸೇವನೆಯಿಂದ ರೋಗವನ್ನು ನಿವಾರಿಸಲು ಸಾಧ್ಯವಿಲ್ಲ ನಿಜ. ಆದರೆ ಆಹಾರವನ್ನು ಆಯ್ದುಕೊಳ್ಳುವಲ್ಲಿ ಜಾಗರೂಕತೆ ವಹಿಸಿದರೆ ಬಹಳಷ್ಟು ತೊಂದರೆಗಳು ಬಾರದಂತೆ ನೋಡಿಕೊಳ್ಳಬಹುದು ಹಾಗೂ ಬಂದ ತೊಂದರೆಗಳು ಹೆಚ್ಚು ಮಟ್ಟಿಗೆ ದೂರವಾಗುವಂತೆಯೂ ಮಾಡಬಹುದು. ಅಂತಹ ಪ್ರಸಂಗಗಳಲ್ಲಿ ಡಾಕ್ಟರರ ಔಷಧಿ ಹೆಚ್ಚು ಪ್ರಯೋಜನಕರ.

## ಉದ್ವಿಗ್ನತೆ

ಅಕಾರಣವಾಗಿ ಉದ್ವಿಗ್ನತೆ ಉಂಟಾಗುತ್ತದೆಯೆ? ಹಾಗಾದರೆ ಒಂದೊಮ್ಮೆ ನೀವು ಕಾಫಿ ಭಕ್ತರಾಗಿದ್ದರೆ ಕಾಫಿಯ ಸೇವನೆಯನ್ನು ಮಿತಗೊಳಿಸಿ. ಕಾಫಿಯಲ್ಲಿನ ಕ್ಯಾಫೀನ್

ಉದ್ವಿಗ್ನತೆಯನ್ನು ಹೆಚ್ಚಿಸುತ್ತದೆ. ಅದು ಚಟಕಾರಕವೂ ಹೌದು. ಕಾಫಿಯ ಸೇವನೆಯನ್ನು ಒಮ್ಮೆಲೆ ನಿಲ್ಲಿಸಿದರೆ ಹಿಂದೆಗೆಯುವ ಲಕ್ಷಣಗಳು (Withdrawal Symptoms) ಕಂಡು ಬರುವುದರಿಂದ ಸೇವಿಸುವ ಪ್ರಮಾಣವನ್ನು ನಿಧಾನವಾಗಿ ತಗ್ಗಿಸುತ್ತಾ ಬನ್ನಿ. ಆದಷ್ಟು ಸಿಹಿ ತಿಂಡಿಗಳನ್ನು ತಿನ್ನಬೇಡಿ. ಬೇಕಷ್ಟು ತೃಣಧಾನ್ಯಗಳಿಂದ ತಯಾರಿಸಿದ ಪದಾರ್ಥಗಳನ್ನು ಸೇವಿಸಿ. ಮೊಳಕೆ ಬಂದ ಕಾಳುಗಳನ್ನು ಬೇಯಿಸದೆ ಸೇವಿಸುವುದು ಒಳ್ಳೆಯದು.

## ಆಸ್ತಮಾ

ಕ್ಯಾನಿನಲ್ಲಿ ಬರುವ ಆಹಾರ ಪದಾರ್ಥಗಳ ರುಚಿಯಾಗಲಿ ಸುವಾಸನೆಯಾಗಲಿ ದೀರ್ಘಕಾಲ ಉಳಿಯುವಂತೆ, ಆಹಾರ ಪದಾರ್ಥ ತಾಜಾ ಆಗಿ ಉಳಿಯಲು ರಕ್ಷಕ ದ್ರವ್ಯಗಳನ್ನು ಬೆರೆಸಲಾಗಿರುತ್ತದೆ. ಆಸ್ತಮಾ ಇರುವವರಿಗೆ ಇವು ಖಂಡಿತಕ್ಕೂ ಸಲ್ಲ. ಆಸ್ತಮಾ ತೊಂದರೆಯಿರುವ ಸಂದರ್ಭದಲ್ಲಿ ಮಾಂಸ, ಹಾಲು ಹಾಗೂ ಬೆಣ್ಣೆಯ ಸೇವನೆಯನ್ನು ಮಿತಗೊಳಿಸಿ. ಮಧುಮೇಹವಿಲ್ಲದಿದ್ದರೆ ಎಷ್ಟು ಸಾಧ್ಯವೋ ಅಷ್ಟು ಹಣ್ಣುಗಳನ್ನು ತಿನ್ನಿ. ತರಕಾರಿಯನ್ನು ಸೇವಿಸಿ. ಆಸ್ತಮಾದ ತೊಂದರೆ ಸ್ವಲ್ಪ ಹೆಚ್ಚಾದಾಗ ಸ್ಟ್ರಾಂಗ್ ಕಾಫಿ ಕೊಂಚ ಪರಿಹಾರವನ್ನು ಒದಗಿಸೀತು.

## ಕ್ಯಾನ್ಸರ್

ಅತಿ ಸರ್ವತ್ರ ವರ್ಜಯೇತ್. ತಂಬಾಕಿನ ಸೇವನೆಯನ್ನು ವರ್ಜಿಸಿ. ಬೀಡಿ-ಸಿಗರೇಟ್ ಬಿಟ್ಟುಬಿಡಿ. ರಾಸಾಯನಿಕಗಳು ಹೆಚ್ಚಾಗಿರುವ ವಾತಾವರಣದಿಂದ ಸಾಧ್ಯವಾದಷ್ಟು ದೂರವಿರಿ. ಉಪ್ಪು ಹಾಗೂ ಸಕ್ಕರೆಯ ಸೇವನೆಯನ್ನು ಕಡಿಮೆ ಮಾಡಿ. ತಾಜಾ ಹಣ್ಣು ಹಾಗೂ ತರಕಾರಿಗಳನ್ನು ಹೆಚ್ಚು ಹೆಚ್ಚಾಗಿ ಸೇವಿಸಿ. ಕರಿದ ಪದಾರ್ಥಗಳನ್ನೂ ಮೊಟ್ಟೆಯಿಂದ ಮಾಡಿದ ಆಹಾರ ಪದಾರ್ಥಗಳನ್ನೂ ಆದಷ್ಟು ಮಟ್ಟಿಗೆ ಸೇವಿಸಬೇಡಿ. ಬಿಳಿ ಅಕ್ಕಿಯನ್ನು ಬದಲು ಕುಟ್ಟಿದ ಅಕ್ಕಿಯನ್ನು (ಪಾಲಿಷ್ ಮಾಡದ ಅಕ್ಕಿ) ಬಳಸುವುದು ಒಳ್ಳೆಯದು.

## ಮಲಬದ್ಧತೆ

ಸಾಕಷ್ಟು ನೀರು ಕುಡಿಯಿರಿ. ಹಸಿ ಸೊಪ್ಪನ್ನು ಬಳಸಿರಿ. ಬ್ರೆಡ್ ತಿನ್ನುವುದಾದರೆ ಇಡಿಗಾಳಿನ ಹಿಟ್ಟಿನಿಂದ ಮಾಡಿದ ಬ್ರೆಡ್ ತಿನ್ನಿರಿ. ಹಣ್ಣು-ಹಂಪಲುಗಳನ್ನು - ಅದರಲ್ಲೂ ವಿಶೇಷವಾಗಿ ಬಾಳೆಹಣ್ಣುಗಳನ್ನು - ಹೆಚ್ಚು ಹೆಚ್ಚಾಗಿ ಸೇವಿಸಿರಿ. ರಾಗಿ ಮುದ್ದೆ ಬಹಳ ಒಳ್ಳೆಯದು.

## ನಿರುತ್ಸಾಹ

ಕಾರಣವಿಲ್ಲದೆ ನಿರುತ್ಸಾಹವೆನಿಸುತ್ತದೆಯೆ? ಮನಸ್ಸಿಗೆ ಮಂಕು ಕವಿದಂತಾಗಿದೆಯೆ? ತಾಜಾ ಹಣ್ಣುಗಳನ್ನು - ಅದರಲ್ಲೂ ಮುಖ್ಯವಾಗಿ ಕಿತ್ತಳೆ ಹಾಗೂ ಬಾಳೆಹಣ್ಣುಗಳನ್ನು- ಹೆಚ್ಚು ಹೆಚ್ಚಾಗಿ ಸೇವಿಸಿರಿ. ಆಹಾರದಲ್ಲಿ ತರಕಾರಿಗಳೂ ಹೆಚ್ಚಿನ ಪ್ರಮಾಣದಲ್ಲಿರಲಿ. ನೆಲಗಡಲೆ, ಗೋಡಂಬಿಗಳನ್ನು ತಿನ್ನಿರಿ.

## ಮಧುಮೇಹ

ಸಿಹಿ ತಿಂಡಿಗಳನ್ನಾಗಲಿ ಸ್ನಿಗ್ಧ ಪದಾರ್ಥಗಳ ಸೇವನೆಯನ್ನಾಗಲಿ ಮಿತಗೊಳಿಸಿ. ಮಾಂಸಾಹಾರಿಗಳಾದವರು ಸಾಧ್ಯವಾದಷ್ಟು ಮಟ್ಟಿಗೆ ಅದನ್ನು ತ್ಯಜಿಸಿ. ಮಿತವಾದ ಶಾಕಾಹಾರಕ್ಕೆ ಹೊಂದಿಕೊಳ್ಳುವುದು ಒಳ್ಳೆಯದು.

## ಯಕೃತ್ತಿನ ರೋಗಗಳು

ಮಾಂಸಾಹಾರಿಗಳಾಗಿದ್ದರೆ ಮೊಟ್ಟೆ ಹಾಗೂ ಹಂದಿಯ ಮಾಂಸ ವರ್ಜ್ಯ. ನೀರುಳ್ಳಿಗಳನ್ನು ಬಳಸಬೇಡಿ. ಸಿಹಿ ಪದಾರ್ಥ ಹಾಗೂ ಕರಿದ ಪದಾರ್ಥಗಳಿಂದ ದೂರವಿರಿ. ತುಪ್ಪವಂತೂ ಬೇಡವೇ ಬೇಡ. ತಾಜಾ ಹಣ್ಣು ತರಕಾರಿಗಳನ್ನು ಸಾಕಷ್ಟು ಸೇವಿಸಿರಿ.

## ತಲೆನೋವು

ಸ್ಟ್ರಾಂಗ್ ಚಹ ಅಥವಾ ಕಾಫಿ ಬೇಡವೇ ಬೇಡ. ಚಾಕೊಲೇಟ್, ಗಿಣ್ಣು, ನಿಂಬೆಹಣ್ಣು, ಕಿತ್ತಳೆ, ಬಾಳೆಹಣ್ಣು ಹಾಗೂ ಕರಿದ ಪದಾರ್ಥಗಳ ಬಗ್ಗೆ ನಿಗಾ ವಹಿಸಿ.

## ಅಧಿಕ ರಕ್ತದೊತ್ತಡ

ಸಾಧ್ಯವಾದ ಮಟ್ಟಿಗೆ ಕರಿದ ಪದಾರ್ಥಗಳನ್ನು ತಿನ್ನಬೇಡಿ. ಉಪ್ಪಿನ ಉಪಯೋಗವನ್ನು ತಗ್ಗಿಸಿ. ಸೇಬು, ಕಿತ್ತಳೆ, ಬಾಳೆ, ಕ್ಯಾಬೇಜು ಹಾಗೂ ಬಟಾಟೆಯನ್ನು ಹೆಚ್ಚು ಪ್ರಮಾಣದಲ್ಲಿ ಸೇವಿಸಿ. ಬೀಟ್‌ರೂಟ್ ಒಳ್ಳೆಯದು.

## ಅಜೀರ್ಣ

ಹೆಚ್ಚು ಮಸಾಲೆ ಹಾಕಿದ ಪದಾರ್ಥಗಳನ್ನು ತಿನ್ನಬೇಡಿ. ಬಹಳ ಬಿಸಿಯಾದ ಅಥವಾ ತಣ್ಣಗಾದ ಪದಾರ್ಥಗಳನ್ನು ಸೇವಿಸುವ ಅಭ್ಯಾಸವಿದ್ದರೆ ಅದನ್ನು ಬಿಟ್ಟುಬಿಡಿ. ಒಬ್ಬೊಬ್ಬರ ಪ್ರಕೃತಿಯೂ ಭಿನ್ನ. ಒಬ್ಬೊಬ್ಬರಿಗೆ ಒಂದೊಂದು ಪದಾರ್ಥ ಆಗುವುದಿಲ್ಲ. ಯಾವುದೇ ಪದಾರ್ಥವನ್ನು ಸ್ವಲ್ಪ ತಿಂದರೂ ಹೊಟ್ಟೆ ಭಾರವಾದಂತೆ ಅನಿಸಿದರೆ ಅಂತಹ ಪದಾರ್ಥದಿಂದ ದೂರವಿರಿ.

## ಮೂತ್ರಕೋಶದಲ್ಲಿ ಕಲ್ಲು

ಸಾಧ್ಯವಾದಷ್ಟು ಹೆಚ್ಚು ನೀರನ್ನು ಕುಡಿಯಿರಿ. ಬ್ರೆಡ್ಡನ್ನು ಧಾರಾಳವಾಗಿ ಸೇವಿಸಿರಿ. ಸ್ಟ್ರಾಂಗ್ ಕಾಫಿ ಅಥವಾ ಚಹಾ ಕುಡಿಯಬೇಡಿ. ಸಿಹಿ ಪದಾರ್ಥಗಳನ್ನಾಗಲಿ ಮಾಂಸಾಹಾರವನ್ನಾಗಲಿ ಸೇವಿಸಬೇಡಿ.

## ಹೃದಯ ಧಮನಿಗಳು ಪೆಡಸಾಗತೊಡಗಿದ್ದರೆ

ಆದಷ್ಟು ಮಟ್ಟಿಗೆ ಸ್ನಿಗ್ಧ ಪದಾರ್ಥಗಳನ್ನು ಸೇವಿಸಲೇಬೇಡಿ.

## ಮುಟ್ಟಿನ ಮೊದಲಿನ ತೊಂದರೆಗಳು

ತೊಂದರೆಗಳು ಕಡಿಮೆಯಾಗಲು ಹಾಲು, ಗಿಣ್ಣು, ಕೆನೆ, ಉಪ್ಪು, ಸಕ್ಕರೆ ಹಾಗೂ ಸ್ಟ್ರಾಂಗ್ ಚಹಾ, ಕಾಫಿಗಳ ಸೇವನೆಯನ್ನು ಮಿತಗೊಳಿಸಿ.

## ಸಂಧಿವಾತ

ಸಂಧಿವಾತದ ತೊಂದರೆಯಿರುವವರು ತರಕಾರಿಯನ್ನು ಹೆಚ್ಚು ಪ್ರಮಾಣದಲ್ಲಿ ಸೇವಿಸಬೇಕು ಹಾಗೂ ಮಾಂಸ, ಹಾಲು, ಗಿಣ್ಣು ಮತ್ತು ಬೆಣ್ಣೆ ಅಥವಾ ತುಪ್ಪದ ಉಪಯೋಗವನ್ನು ತಗ್ಗಿಸಬೇಕು.

## ಜಠರ ವ್ರಣಗಳು

ಖಾರವಾದ ತಿಂಡಿಗಳು ನಿಮ್ಮಂಥವರಿಗಲ್ಲ. ಹೆಚ್ಚು ಮಸಾಲೆ ಬೆರೆತ ಪದಾರ್ಥಗಳೂ

ನಿಮಗೆ ಬೇಡ. ಚಹಾ, ಕಾಫಿಗಳನ್ನು ಹೆಚ್ಚಾಗಿ ಕುಡಿಯುತ್ತಿದ್ದರೆ ಸೇವನೆಯನ್ನು ಮಿತಗೊಳಿಸಿ. ಮದ್ಯಪಾನವನ್ನು ಬಿಟ್ಟುಬಿಡಿ. ಹಾಲಿನ ಸೇವನೆಯಿಂದ ಕೆಲಮಟ್ಟಿಗೆ ಸಮಾಧಾನ.

## ನಿರುಪದ್ರವಿಯಾದ ಉಪದ್ರವಗಳು

### ತೇಗು

ನೀವು ಆಹಾರ ಸೇವಿಸುವಾಗ ನಿಮಗರಿವಿಲ್ಲದೆ ಹವೆಯನ್ನೂ ಸೇವಿಸುತ್ತೀರಿ. ಅವಸರದಲ್ಲಿ ತಿಂದಷ್ಟೂ ಅಥವಾ ಕುಡಿದಷ್ಟೂ ಜಠರದಲ್ಲಿ ಸಂಗ್ರಹಗೊಳ್ಳುವ ಹವೆಯ ಪ್ರಮಾಣವೂ ಹೆಚ್ಚು. ಈ ಪ್ರಮಾಣ ಹೆಚ್ಚಿದಂತೆಲ್ಲ ಹೆಚ್ಚಿನ ಒತ್ತಡವುಂಟಾಗಿ ಸಂಗ್ರಹಗೊಂಡ ಹವೆ ಜೋರಾಗಿ ಹೊರಬರುತ್ತದೆ. ಅದೇ ತೇಗು.

ಚ್ಯೂಯಿಂಗ್ ಗಮ್‌ಅನ್ನು ಜಗಿಯುವುದಾಗಲಿ ಹೊಗೆಸೊಪ್ಪನ್ನು ಸೇದುವುದಾಗಲಿ ಒಳಗೆ ಹವೆ ಸಂಗ್ರಹಗೊಳ್ಳಲು ಅನುವಾಗುತ್ತದೆ. ಇಂಗಾಲಾಮ್ಲಯುಕ್ತ ಪಾನೀಯಗಳೂ ಇದಕ್ಕೆ ಹೊರತಲ್ಲ. ಆದ್ದರಿಂದ ಆಹಾರವನ್ನು ಚೆನ್ನಾಗಿ ನುರಿಸಿ, ಸಾವಕಾಶವಾಗಿ ತಿನ್ನಿರಿ. ಆಹಾರವನ್ನು ನುರಿಸುವಾಗ ತುಟಿಗಳನ್ನು ಮುಚ್ಚಿರಿ. ಇಂಗಾಲಾಮ್ಲಯುಕ್ತ ಪಾನೀಯಗಳನ್ನು ಬಾಟಲಿನಿಂದ ನೇರವಾಗಿಯಾಗಲಿ ಕೊಳವೆಯ ಮೂಲಕವಾಗಿಯಾಗಲಿ ಸೇವಿಸಿದರೆ ಹೆಚ್ಚು ಹವೆಯು ಒಳಗೆ ಸಂಗ್ರಹಗೊಳ್ಳುವುದರಿಂದ ಗ್ಲಾಸಿಗೆ ಸುರಿದ ನಂತರವೇ ಪಾನೀಯವನ್ನು ಸೇವಿಸಿರಿ. ಕುಡಿಯುವಾಗ ಅವಸರ ಬೇಡ.

ಐಸ್ ಕ್ರೀಮಿನಲ್ಲಾಗಲಿ ಆಮ್ಲೆಟ್ಟಿನಲ್ಲಾಗಲಿ ನಮ್ಮ ಕಣ್ಣಿಗೆ ಕಾಣದಷ್ಟು ಚಿಕ್ಕದಾದ ರಂಧ್ರಗಳು ಅಸಂಖ್ಯವಾಗಿವೆ. ಅವುಗಳಲ್ಲೆಲ್ಲ ಹವೆಯು ಸಂಗ್ರಹಗೊಂಡಿರುತ್ತದೆ. ಆದ್ದರಿಂದ ಅಂತಹ ರಂಧ್ರಮಯ ಆಹಾರವನ್ನು ಹೆಚ್ಚಿಗೆ ಸೇವಿಸಬೇಡಿ. ಹೊಗೆಸೊಪ್ಪನ್ನು ಸೇದುವುದೇ ಇದ್ದರೆ ಊಟಕ್ಕೆ ಮೊದಲು ಅಥವಾ ಮಧ್ಯದಲ್ಲಿ ಸೇದಬೇಡಿ. ಅಜೀರ್ಣದಿಂದಲೂ ತೇಗು ಬರುವುದರಿಂದ ಹೊಟ್ಟೆ ಭಾರವಾಗುವ ಹಾಗೆ ಉಣ್ಣಬೇಡಿ. ಇಷ್ಟಾದರೂ ಅಜೀರ್ಣವಾದರೆ ಅಜೀರ್ಣಹರ ಮಾತ್ರೆಗಳನ್ನು ಸೇವಿಸಿರಿ. ತೇಗು ಬಂದರೆ ಅದನ್ನು ಹತ್ತಿಕ್ಕಬೇಡಿ. ಅದರಿಂದ ಜೀರ್ಣವಾಗುವ ಕ್ರಿಯೆಗೇ ತೊಂದರೆ.

### ಹೊಟ್ಟೆಯಲ್ಲಿ ಸದ್ದು

ನುರಿಸಲ್ಪಟ್ಟ ಆಹಾರ, ದ್ರವಾಹಿ ಪದಾರ್ಥಗಳು ಹಾಗೂ ವಾಯುವು ಜಠರಮಾರ್ಗದಲ್ಲಿ ಸಂಚರಿಸುತ್ತಲೇ ಇದ್ದು ತತ್ಪರಿಣಾಮವಾಗಿ ಗುರು ಗುರು ಸಪ್ಪಳ ಕೇಳಿಬರುತ್ತದೆ. ಆದ್ದರಿಂದ ಈ ಸದ್ದು ಅನಾರೋಗ್ಯದ ಲಕ್ಷಣವಲ್ಲ. ಸಪ್ಪಳ ಮೇಲಿಂದ ಮೇಲೆ ಕೇಳಿಬಂದಾಗ ಸ್ವಲ್ಪ ಆಹಾರ ಸೇವಿಸಿದರೆ ಸಾಕು. ಅದನ್ನು ಜೀರ್ಣಿಸಲು ಉತ್ಪನ್ನವಾಗುವ ಅಂತ್ರರಸವು ಜಠರ ಮಾರ್ಗದಲ್ಲಿರುವ ವಾಯುವನ್ನು ಮುಂದೆ ಸಾಗಿಸುವುದರಿಂದ ಗುರುಗುರು ಶಬ್ದ ತಾನಾಗಿಯೇ ಶಮನಗೊಳ್ಳುವುದು. ಇಂಗಾಲಾಮ್ಲ ವಾಯುವಿನಿಂದ ಯುಕ್ತವಾದ ಪಾನೀಯವನ್ನು ಬಹುವಾಗಿ ಸೇವಿಸಿದ್ದರೆ ಅಂಗಾತ ಮಲಗಿ ಆಗಾಗ ಹೊಟ್ಟೆಯನ್ನು ಒತ್ತಿಕೊಳ್ಳಿ.

### ವಾಯು ಪ್ರಕೋಪ

ಜನರು ಆಗಾಗ 'ಗ್ಯಾಸ್' ಆದ ಬಗ್ಗೆ ಗೊಣಗುಟ್ಟುತ್ತಿರುವುದನ್ನು ಕೇಳುತ್ತೇವೆ. ಸೇವಿಸಿದ

ಆಹಾರ ಅರ್ಧಮರ್ಧ ಅರಗಿದಾಗ ಜಠರದಲ್ಲಿಯ ಬ್ಯಾಕ್ಟೀರಿಯಗಳು ಆ ಆಹಾರದ ಮೇಲೆ ಪ್ರತಿಕ್ರಿಯಿಸಿ ಹುದುಗೆಬ್ಬಿಸುತ್ತವೆ. ಪರಿಣಾಮವಾಗಿ 'ಗ್ಯಾಸ್'ತಯಾರಾಗುತ್ತದೆ. ಆದ್ದರಿಂದ ಪಚನಕ್ಕೆ ಜಡವಾದ ವಸ್ತುಗಳನ್ನು ಸೇವಿಸಿದಷ್ಟೂ ಗ್ಯಾಸ್ ಆಗುವ ಸಂಭವ ಹೆಚ್ಚು. ಮಾನಸಿಕ ಒತ್ತಡವಿದ್ದಾಗ ಸೇವಿಸಿದ ಆಹಾರ ಹೆಚ್ಚು ವೇಗವಾಗಿ ಚಲಿಸುವುದರಿಂದ ಪಚನವಾಗಲು ವೇಳೆ ದೊರೆಯುವುದಿಲ್ಲ. ಹೀಗಾಗಿಯೂ ಅದು ಗ್ಯಾಸ್ ಆಗಲು ಕಾರಣವಾಗುತ್ತದೆ. ವಿಶ್ರಾಂತಿಯನ್ನು ಪಡೆಯುವ ಮೂಲಕ ಹಾಗೂ ಸುಲಭವಾಗಿ ಜೀರ್ಣವಾಗುವಂತಹ ಆಹಾರವನ್ನು ಸೇವಿಸುವ ಮೂಲಕ ವಾಯು ಪ್ರಕೋಪವಾಗದಂತೆ ನೋಡಿಕೊಳ್ಳಬಹುದು. ಇಷ್ಟಾದರೂ ಗ್ಯಾಸ್ ಆದರೆ ಡಾಕ್ಟರರನ್ನು ಕಾಣದೆ ವಿಧಿಯಿಲ್ಲ.

## ಬಿಕ್ಕಳಿಕೆ

ಶ್ವಾಸದ್ವಾರ ಅತ್ಯಲ್ಪ ಕಾಲದ ವರೆಗೆ ಮುಚ್ಚಿದಾಗ ವಪೆಯ ಅನೈಚ್ಛಿಕ ಸ್ನಾಯುಗಳು ಸಂಕೋಚನಗೊಂಡದ್ದೇ ಬಿಕ್ಕಳಿಕೆಗೆ ಕಾರಣ. ಆದರೆ ಹೀಗೇಕಾಗುತ್ತದೆಂಬುದು ಇನ್ನೂ ಗೊತ್ತಾಗಿಲ್ಲ. ಹೆಂಗಸರಿಗಿಂತ ಗಂಡಸರಿಗೇ ಬಿಕ್ಕಳಿಕೆ ಬರುವುದು ಹೆಚ್ಚೆಂಬ ಗುಮಾನಿ ಇದೆ. ಸಾಕಷ್ಟು ನೀರು ಕುಡಿದರೆ ಬಿಕ್ಕಳಿಕೆ ನಿಲ್ಲುತ್ತದೆಂಬ ವಿಶ್ವಾಸ ಎಷ್ಟೋ ಕಡೆ ಪ್ರಚಲಿತವಾಗಿದೆ. ಎರಡು ಚಮಚೆ ಸಕ್ಕರೆ ತಿಂದರೂ ಅದು ನಿಲ್ಲುವುದೆಂಬ ವಿಶ್ವಾಸ ದಕ್ಷಿಣ ಅಮೆರಿಕದ ದೇಶಗಳಲ್ಲಿ ಬಲವಾಗಿದೆ. ಬಿಕ್ಕಳಿಕೆ ತಾನಾಗಿಯೆ ನಿಲ್ಲುವುದುಂಟು. ಅಪರೂಪದ ಪ್ರಸಂಗದಲ್ಲಿ, ಬಿಕ್ಕಳಿಕೆ ತೀವ್ರವಾದಾಗ, ಡಾಕ್ಟರರು ಮಾತ್ರೆಗಳನ್ನೋ ಚುಚ್ಚುಮದ್ದನ್ನೋ ವಿಧಿಸುವುದುಂಟು.

## ಗೊರಕೆ

ಐದು ಜನ ಗೊರಕೆ ಹೊಡೆಯುವವರಿದ್ದರೆ ಅವರಲ್ಲಿ ನಾಲ್ಕು ಜನ ಗಂಡಸರೇ ಆಗಿರುತ್ತಾರೆ ಎಂಬುದೊಂದು ಲೆಕ್ಕಾಚಾರ. ಶ್ವಾಸಮಾರ್ಗದಲ್ಲಿ ಗಂಟಲಿನ ಹಿಂದೆ ವಾಯು ಸಂಚಾರಕ್ಕೆ ವ್ಯತ್ಯಯ ಉಂಟಾದಾಗ ಅದು ಗೊರಕೆಯ ರೂಪದಲ್ಲಿ ಪ್ರಕಟವಾಗುತ್ತದೆಂಬುದು ವೈದ್ಯಕೀಯ ವಲಯದ ಸಮಾಧಾನ.

ಆದರೆ ಗೊರಕೆಗೆ ಇದೊಂದೇ ಕಾರಣವಲ್ಲ. ಅಲರ್ಜಿಯುಂಟಾದಾಗ, ನೆಗಡಿ ಬಂದಾಗ ಅಥವಾ ಆಸ್ತಮಾ ಬಂದಾಗಲೂ ಗೊರಕೆ ಬರಲು ಪ್ರಾರಂಭವಾಗಬಹುದು. ಸ್ಥೂಲಕಾಯರಾದವರೆ ಗೊರಕೆ ಹೊಡೆಯುವ ಸಂಭವ ಹೆಚ್ಚು. ಶೇಕಡಾ ಹತ್ತರಷ್ಟು ದೇಹದ ತೂಕವನ್ನು ಇಳಿಸಿಕೊಂಡರೂ ಗೊರಕೆ ಬರುವುದು ನಿಲ್ಲುವುದೆಂದು ಎಷ್ಟೋ ಡಾಕ್ಟರರು ಹೇಳುತ್ತಾರೆ. ಅಂಗಾತ ಮಲಗಬೇಡಿ; ಮಗ್ಗುಲಾಗಿ ಮಲಗಿ. ಮಲಗುವುದಕ್ಕಿಂತ ಮೂರು ಗಂಟೆಗಳ ಮೊದಲು ಮದ್ಯಾರ್ಕ ಬೆರೆತ ಪಾನೀಯಗಳನ್ನು ಸೇವಿಸಲೇಬೇಡಿ. ಅದರಿಂದ ಗೊರಕೆ ಬರುವುದು ಇನ್ನಷ್ಟು ಹೆಚ್ಚೇ ಆದೀತು.

## ದೇಹದ ದುರ್ಗಂಧ

ಸ್ವೇದಗ್ರಂಥಿಗಳು ಸದಾ ಬೆವರನ್ನು ಸುರಿಸುತ್ತಲೇ ಇರುತ್ತವೆ. ಹೀಗೆ ಸುರಿದ ಬೆವರು ಆವಿಯಾಗುತ್ತಲೇ ಇರುತ್ತದೆ. ಸುರಿದ ಬೆವರೆಲ್ಲ ಆವಿಯಾಗಿ ಹೋಗಿದ್ದರೆ ದುರ್ಗಂಧದ ಪ್ರಶ್ನೆಯೇ ಇರುತ್ತಿರಲಿಲ್ಲ. ಆವಿಯಾಗದ ಬೆವರಿನಲ್ಲಿ ಕೆಲವು ಬ್ಯಾಕ್ಟೀರಿಯಗಳು ಬೆಳೆಯುತ್ತವೆ. ಅವುಗಳಿಂದಲೇ ದುರ್ಗಂಧ ಉಂಟಾಗುವುದು. ಇಂಥವರು ಮೈಯನ್ನು ಮೇಲಿಂದ ಮೇಲೆ ತೊಳೆದುಕೊಂಡು ಶರೀರವನ್ನು ಸ್ವಚ್ಛವಾಗಿಟ್ಟುಕೊಳ್ಳುವುದು ಇದಕ್ಕಿರುವ

ಸುಲಭದ ಹಾದಿ. ಬೆವರನ್ನು ಹೀರಿಕೊಳ್ಳುವುದರಿಂದ ಟಾಲ್ಕಂ ಪೌಡರನ್ನು ಕಂಕುಳಲ್ಲಿ ಹಾಕಿಕೊಳ್ಳುವುದು ಒಂದು ಉಪಾಯವಾದರೆ ಬೆವರು ನಿರೋಧಕಗಳನ್ನು ಬಳಸುವುದು ಮತ್ತೊಂದು ಉಪಾಯ. ದೇಹ ಬಿಸಿಯಾಗಿದ್ದಾಗ ಅವು ಸ್ವೇದಗ್ರಂಥಿಗಳನ್ನು ಪ್ರವೇಶಿಸುವುದಿಲ್ಲವಾದ್ದರಿಂದ ದೇಹ ಸಾಮಾನ್ಯ ಸ್ಥಿತಿಯಲ್ಲಿದ್ದಾಗ ಬೆವರು ನಿರೋಧಕಗಳನ್ನು ಬಳಸುವುದೇ ಒಳ್ಳೆಯದು. ಬೆಳ್ಳುಳ್ಳಿ, ನೀರುಳ್ಳಿಗಳಂತಹ ಕಟು ವಾಸನೆಯ ಪದಾರ್ಥಗಳನ್ನು ಸೇವಿಸಿದಾಗ ಆಹಾರದ ಸತ್ವವು ರಕ್ತಪ್ರವಾಹದಲ್ಲಿ ತೂರಿಕೊಂಡು ಬಂದು, ಸ್ವೇದ ಗ್ರಂಥಿಗಳಲ್ಲಿ ಪ್ರವೇಶಿಸಿಯೂ ದುರ್ವಾಸನೆಯುಂಟು ಮಾಡಬಹುದು.

## ಬಾಯಿಯ ದುರ್ವಾಸನೆ

ನೀವು ಏನನ್ನೇ ತಿನ್ನಿ, ಏನನ್ನೇ ಕುಡಿಯಿರಿ ಅಥವಾ ಸೇದಿರಿ, ಅದು ಬಾಯಿಯ ದುರ್ಗಂಧಕ್ಕೆ ಕಾರಣವಾಗುತ್ತದೆ. ವೈದ್ಯಕೀಯದಲ್ಲಿ ಇದಕ್ಕೆ ಹ್ಯಾಲಿಟೋಸಿಸ್ ಎಂದು ಹೆಸರು. ಹಲ್ಲುಗಳ ಸಂದುಗಳಲ್ಲೂ ನಾಲಿಗೆಯ ಮೇಲಿನ ಬಿಳಿ ಪೊರೆಯಲ್ಲೂ ಸೂಕ್ಷ್ಮಾತಿಸೂಕ್ಷ್ಮವಾದ ಆಹಾರದ ಕಣಗಳು ಕುಳಿತುಕೊಂಡು ಬ್ಯಾಕ್ಟೀರಿಯಗಳಿಗೆ ಆಹಾರವಾಗುತ್ತವೆ. ಮೊದಲೆ ಹೇಳಿದ ಹಾಗೆ ಈ ಬ್ಯಾಕ್ಟೀರಿಯಗಳೇ ದುರ್ಗಂಧವನ್ನು ಉತ್ಪಾದಿಸುವವು. ಹಲ್ಲುಗಳನ್ನು, ನಾಲಿಗೆಯನ್ನು ಸ್ವಚ್ಛವಾಗಿಟ್ಟುಕೊಂಡರೆ ಬಾಯಿಯಿಂದ ದುರ್ಗಂಧ ಬರುವ ಪ್ರಮೇಯವೇ ಇರುವುದಿಲ್ಲ.

## ಪಾದಗಳ ದುರ್ವಾಸನೆ

ಬೂಟುಗಳನ್ನು ತೆಗೆಯುತ್ತಲೇ ಕೋಣೆಯ ತುಂಬಾ ದುರ್ವಾಸನೆ ಪಸರಿಸುವುದುಂಟು. ಇದಕ್ಕೂ ಸ್ವೇದ ಗ್ರಂಥಿಗಳಿಂದ ಹೊರಹೊಮ್ಮಿದ ಬೆವರಿನಲ್ಲಿ ಬ್ಯಾಕ್ಟೀರಿಯಗಳು ಬೆಳೆದದ್ದೇ ಕಾರಣ. ಇಂಥವರು ದಿನಾಲು ಪೂತಿನಾಶಕದ ಗುಣವಿರುವ ಸೋಪು ಬಳಸಿ ಕಾಲು ತೊಳೆಯಬೇಕು. ತೊಳೆದ ನಂತರ ಸ್ವಲ್ಪವೂ ತೇವಾಂಶ ಉಳಿಯದ ಹಾಗೆ ಒರೆಸಬೇಕು. ಇದು ಬೇಡವಾದರೆ ವಿನಿಗರ್ ಬೆರೆತ ನೀರಿನಲ್ಲಿ ಕಾಲನ್ನು ತೊಳೆಯಬಹುದು. ಕಾಲುಗಳು ಬಹಳವಾಗಿ ಬೆವರುವ ಪ್ರವೃತ್ತಿಯವರಲ್ಲೇ ಹೀಗೆ ದುರ್ಗಂಧ ಬರುವುದಾದ್ದರಿಂದ ಅಂಥವರು ದಿನಕ್ಕೆ ಎರಡು ಸಲವಾದರೂ ಕಾಲು ಚೀಲಗಳನ್ನು ಬದಲಿಸಬೇಕು. ಬೆವರು ನಿರೋಧಕಗಳಿಂದಲೂ ಇಂಥವರಿಗೆ ಸಹಾಯವಾಗಬಹುದು. ಆದರೆ ಈ ಬೆವರು ನಿರೋಧಕಗಳಲ್ಲಿರುವ ಪದಾರ್ಥಗಳಿಗೆ ಅವರು ಅಲರ್ಜಿಕರಾಗಿರಬಾರದಷ್ಟೆ. ಪಾದರಕ್ಷೆಗಳಲ್ಲಿನ ತೇವಾಂಶ ಸಂಪೂರ್ಣವಾಗಿ ಹೊರಟುಹೋಗುವುದರಿಂದ ಅವುಗಳನ್ನು ದಿನ ಬಿಟ್ಟು ದಿನ ಉಪಯೋಗಿಸಬೇಕು. ಬೇಸಿಗೆಯಲ್ಲಿ ಪಾದಗಳನ್ನು ತಂಪಾಗಿಯೂ ಒಣದಾಗಿಯೂ ಇಟ್ಟಿರುವುದರಿಂದ ಪಾದದ ದುರ್ವಾಸನೆಯ ತೊಂದರೆಯಿರುವವರು ಅರಳೆಯ ಎಳೆಗಳಿಂದ ತಯಾರಿಸಿದ ಕಾಲುಚೀಲಗಳನ್ನೇ ಉಪಯೋಗಿಸಬೇಕು.

## ನೆಗಡಿ

ಸಾಮಾನ್ಯವಾಗಿ ಎಲ್ಲರಿಗೂ ವರ್ಷದಲ್ಲಿ ಒಮ್ಮೆಯಾದರೂ ಇದು ಬರುವಂಥಾದ್ದೇ. ದೊಡ್ಡ ವ್ಯಾಧಿಯಲ್ಲ ನಿಜ. ಆದರೆ ಅದರಿಂದಾಗುವ ತೊಂದರೆ ಅಷ್ಟಿಷ್ಟಲ್ಲ. ಇದೊಂದು ವೈರಸ್ ಮೂಲದ ವ್ಯಾಧಿ. -ರೈನೋವೈರಸ್ಸಿನಿಂದ ಬರುವಂಥಾದ್ದು. ನಾಸಿಕನಾಳ, ಬಾಯಿಗಳು ಒಂದುಗೂಡುವ ಸಂಧಿಸ್ಥಾನವೇ ಅದಕ್ಕೆ ಆಶ್ರಯಸ್ಥಾನ. ನೆಗಡಿ ಬಂದಾಗ ಆದಷ್ಟು ಮೂಗನ್ನು ತುರಿಸಿಕೊಳ್ಳಬೇಡಿ. ಕಣ್ಣನ್ನು ಒರೆಸಿಕೊಳ್ಳಬೇಡಿ. ಮೂಗನ್ನು

ಒರೆಸಲು ಕರವಸ್ತ್ರವನ್ನು ಉಪಯೋಗಿಸುವ ಬದಲು ಟಿಶ್ಯೂಪೇಪರ್ ಬಳಸಿ. ಪ್ರತಿಸಲ ಮೂಗನ್ನು ಒರೆಸಿದಾಗ ಪೇಪರನ್ನು ಒಗೆದು ಬಿಡುವುದರಿಂದ ರೈನೋವೈರಸ್ ಒಂದೆಡೆ ಕಲೆತು ಬೆಳೆಯುವ ಸಂಭವ ಕಡಿಮೆ. ಕರವಸ್ತ್ರವನ್ನು ಉಪಯೋಗಿಸಲೇಬೇಕೆಂದರೆ ಪ್ರತಿದಿನ ಅದನ್ನು ತೊಳೆಯುವ ಮೊದಲು ಕುದಿಯುವ ನೀರಿನಲ್ಲಿ ಮುಳುಗಿಸಿ ವೈರಸ್‌ರಹಿತಗೊಳಿಸಿ.

ಕೈಗಳನ್ನು ಸ್ವಚ್ಛವಾಗಿಟ್ಟುಕೊಳ್ಳಿ. ಅವುಗಳನ್ನು ತೊಳೆಯುವಾಗ ರೋಗಾಣುನಿರೋಧಕವಾದ ಸೋಪನ್ನು ಬಳಸಿ. ಕೆಮ್ಮುವ, ಸೀನುವ ಜನರಿಂದ ಆದಷ್ಟು ದೂರವಿರಿ. ನಿಮಗೇ ನೆಗಡಿಯಾಗಿದ್ದರೆ ಕೆಮ್ಮುವಾಗ ಕರವಸ್ತ್ರ ಉಪಯೋಗಿಸಿ ನಿಮ್ಮಲ್ಲಿನ ರೈನೋವೈರಸ್ ಉಳಿದವರಿಗೆ ತಲುಪದಂತೆ ಜಾಗ್ರತೆ ವಹಿಸಿ.

ವಿಟಮಿನ್ ಸಿ ಇಂದ ಏನಾದರೂ ಪ್ರಯೋಜನವುಂಟೆ? ಎಂಬುದು ಮೇಲಿಂದ ಮೇಲೆ ಕೇಳಿಬರುವ ಪ್ರಶ್ನೆ. ಸಿ ಜೀವಸತ್ವದಿಂದ ನೆಗಡಿ ಬರುವುದನ್ನು ತಡೆಗಟ್ಟುವುದು ಸಾಧ್ಯವಿಲ್ಲ ನಿಜ. ಆದರೆ ನೆಗಡಿ ಬಂದ ನಂತರ ಸಿ ಜೀವಸತ್ವ ಅದನ್ನು ಆದಷ್ಟು ಬೇಗ ದೇಹದಿಂದ ಹೊರದೂಡುತ್ತದೆ ಎಂದು ನೆಗಡಿಯ ಬಗೆಗೆ ಸಂಶೋಧನೆ ನಡೆಸಿದ ಈಲಿಯಟ್ ಡಿಕ್ ಹಾಗೂ ಜಾಕ್ ಗ್ವಾಲ್‌ಟ್ನಿ ಹೇಳುತ್ತಾರೆ. ಅವರ ಪ್ರಕಾರ ನೆಗಡಿ ಬಂದಾಗ ೫೦೦ ಮಿಲಿಗ್ರಾಮಿನ ನಾಲ್ಕು ಸಿ ಜೀವನ ಸತ್ವಗಳ ಮಾತ್ರೆಗಳನ್ನು ಪ್ರತಿದಿನ ತೆಗೆದುಕೊಳ್ಳುವುದು ಒಳ್ಳೆಯದು.

ಅಲ್ಲದೆ ನೆಗಡಿ ಬಂದಾಗ ಸಾಕಷ್ಟು ನೀರು ಕುಡಿಯಿರಿ. ಶ್ಲೇಷ್ಮ ತೆಳುವಾಗಿ ಹೊರಬೀಳಲು ಅನುವಾಗುವುದು. ಮೂಗು ಕಟ್ಟಿದ್ದರೆ ಅದನ್ನು ಸರಿಪಡಿಸಲು ಪೇಟೆಯಲ್ಲಿ ಬೇರೆ ಬೇರೆ ಬಗೆಯ ದ್ರಾವಕಗಳಿವೆ. ಡಾಕ್ಟರರ ಸಲಹೆ ಪಡೆದು ಅವುಗಳಲ್ಲೊಂದನ್ನು ಆರಿಸಿಕೊಳ್ಳಿರಿ. ಆದರೆ ಒಂದು ಸಲಕ್ಕೆ ಮೂರು ದಿನಕ್ಕಿಂತ ಹೆಚ್ಚಿನ ಅವಧಿಗೆ ಉಪಯೋಗಿಸಬೇಡಿ. ಮೂಗು ಉಬ್ಬಿಕೊಳ್ಳಬಹುದು. ನಿದ್ದೆ ಸರಿಯಾಗಿ ಬರುವ ಹಾಗೆ ನೋಡಿಕೊಳ್ಳಿ. ದೇಹದ ರಕ್ಷಣಾ ವ್ಯವಸ್ಥೆ ಬಲಗೊಳ್ಳಲು ಅದರಿಂದ ಅನುವಾಗುವುದು.

ಅಲರ್ಜಿಗೆ ಪ್ರತಿಕ್ರಿಯೆಯಾಗಿ ಹೊರಬೀಳುವ ಹಿಸ್ಟಮೈನುಗಳಿಗೂ ನೆಗಡಿಗೂ ಸಂಬಂಧವೇ ಇಲ್ಲ ಎಂಬ ಭಾವನೆ ಇತ್ತೀಚಿನವರೆಗೂ ವೈದ್ಯಕೀಯ ವಲಯದಲ್ಲಿ ಸಾರ್ವತ್ರಿಕವಾಗಿತ್ತು. ಆದರೆ ಆಂಟಿಹಿಸ್ಟಮೈನುಗಳು ಪೂರ್ಣಪ್ರಮಾಣದ ಪ್ರಯೋಜನವನ್ನು ಒದಗಿಸದಿದ್ದರೂ ಮೂಗು ಸೋರುವುದನ್ನು ಶೇಕಡಾ ೩೦ರಷ್ಟು ಹಾಗೂ ಸೀನುವುದನ್ನು ಶೇಕಡಾ ಐವತ್ತರಷ್ಟು ಕಡಿಮೆಗೊಳಿಸುತ್ತವೆಂದು ಗ್ವಾಲ್‌ಟ್ನಿ ಅವರ ಪ್ರಯೋಗಗಳು ತಿಳಿಸುತ್ತವೆಯಾದ್ದರಿಂದ ಕನಿಷ್ಠ ಪ್ರಮಾಣದಲ್ಲಿ ಅವುಗಳನ್ನು ಉಪಯೋಗಿಸುವುದರಲ್ಲಿ ತಪ್ಪೇನಿಲ್ಲ.

ನೆಗಡಿ ಬಂದಾಗ ಗಂಟಲು ಕಟ್ಟುವುದು ಅಥವಾ ಗಂಟಲು ಊದಿಕೊಳ್ಳುವುದು ಸಾಮಾನ್ಯ. ಆಗ ಬಿಸಿಯಾದ ಉಪ್ಪು ನೀರಿನಿಂದ ಮುಕ್ಕಳಿಸಿರಿ. ಈ ಉಪ್ಪು ನೀರು ಬ್ಯಾಕ್ಟೀರಿಯಗಳನ್ನಾಗಲಿ ವೈರಾಣುಗಳನ್ನಾಗಲಿ ಕೊಲ್ಲುವುದಿಲ್ಲ ನಿಜ. ಆದರೆ ಗಂಟಲಿಗೆ ಸಮಾಧಾನವೆನಿಸುವುದಂತೂ ನಿಜ. ಅಲ್ಲದೆ ಗಂಟಲು ಉಬ್ಬಿದಾಗ ಸ್ರವಿಸಲ್ಪಟ್ಟ ತುರಿಕೆಯುಂಟು ಮಾಡುವ ಸ್ರಾವಕಗಳು ನೀರಿನೊಂದಿಗೆ ತೊಳೆದು ಹೋಗುವುದರಿಂದ ಹೆಚ್ಚಿನ ಉಪಶಮನ ಲಭ್ಯ.

ನೆಗಡಿ ಬಂದಾಗ ಮೊದಲ ಮೂರು ದಿನ ಮೂಗು ಬಹುವಾಗಿ ಸೋರುತ್ತಿರುವುದು.

ಮೇಲಿಂದ ಮೇಲೆ ಕೆಮ್ಮು ಬರುತ್ತಿರುವುದು. ನಂತರದ ಅವಧಿಯನ್ನು ತಲಪುವಷ್ಟರಲ್ಲೇ ದೇಹದ ರಕ್ಷಣಾ ವ್ಯವಸ್ಥೆ ಸಾಕಷ್ಟು ಚುರುಕಾಗಿರುವುದು. ಆದ್ದರಿಂದ ಮೊದಲ ಮೂರು ದಿನಗಳಲ್ಲಿ ಇತರರಿಗೆ ರೈನೋವೈರಸ್ಸುಗಳು ಹಬ್ಬುವ ಸಂಭವ ಬಹಳ. ಈ ಕಾರಣದಿಂದ ಈ ಕಾಲದಲ್ಲಿ ನಿಮ್ಮ ಸುತ್ತಮುತ್ತಲಿನವರಿಗೆ ನೆಗಡಿ ಪಸರಿಸದ ಹಾಗೆ ಜಾಗ್ರತೆ ವಹಿಸಿ.

ಬಂದ ನೆಗಡಿ ಎಷ್ಟು ದಿನ ಇರುತ್ತದೆಯೆನ್ನುವುದು ಒಂದು ಸ್ವಾರಸ್ಯದ ಪ್ರಶ್ನೆ. ಆದರೆ ಎಲ್ಲವೂ ದೇಹಪ್ರಕೃತಿಯನ್ನೇ ಅವಲಂಬಿಸಿರುವುದರಿಂದ ಅದಕ್ಕೆ ಖಚಿತವಾದ ಉತ್ತರವಿಲ್ಲ. ಕೆಲವರಿಗೆ ಮೂರು ದಿನಗಳಲ್ಲಿಯೆ ನೆಗಡಿ ಹೊರಟು ಹೋದರೆ, ಇನ್ನು ಕೆಲವರಲ್ಲಿ ವಾರದವರೆಗೆ ಬಾಧಿಸೀತು. ಆದರೆ ಸುಮಾರು ಹತ್ತು ದಿನಗಳಲ್ಲಿ ನೆಗಡಿ ವಾಸಿಯಾಗುವುದು ಸಾಮಾನ್ಯ. ಒಮ್ಮೊಮ್ಮೆ ಈ ಹತ್ತು ದಿನಗಳ ಅವಧಿಯಲ್ಲಿ ಮುಖ ಊದಿಕೊಳ್ಳುವುದುಂಟು. ಕಿವಿಯ ಮಧ್ಯ ಭಾಗಕ್ಕಾಗಲಿ ಮೂಗಿನ ನಳಿಕೆಗಾಗಲಿ ರೋಗಾಣುಗಳು ತಗುಲಿಕೊಂಡಿರುವುದರಿಂದ ಹೀಗಾಗಿರಬಹುದು. ಅಂತಹ ಪ್ರಸಂಗದಲ್ಲಿ ತಡ ಮಾಡದೆ ಡಾಕ್ಟರರಿಗೆ ತೋರಿಸಿರಿ. ಸೈನಸ್ಸಿಗೆ ತಗುಲಿದ ರೋಗಾಣುಗಳು ಸಂಪೂರ್ಣವಾಗಿ ನಾಶವಾಗಲು ದೀರ್ಘಕಾಲವೇ ಹಿಡಿಯಬಹುದು. ಇದೆಲ್ಲಕ್ಕಿಂತ ಮುಖ್ಯವಾಗಿ ನೆಗಡಿ ಬಂದಾಗ ಆದಷ್ಟು ಹರ್ಷಚಿತ್ತದಿಂದ ಇರಿ. ಧನಾತ್ಮಕವಾದ ಮನೋಭಾವ ದೇಹದ ರಕ್ಷಣಾ ವ್ಯವಸ್ಥೆಯನ್ನು ಇನ್ನಷ್ಟು ಬಲಪಡಿಸುತ್ತದೆನ್ನುವುದು ಇತ್ತೀಚಿನ ಸಂಶೋಧನೆಗಳಿಂದ ಕಂಡುಬಂದ ತಥ್ಯ.

### ಸಂಧಿವಾತ

ಸಂಧಿವಾತದಲ್ಲಿ ರೂಮಾಟೈಡ್ ಆರ್ಥ್ರೈಟಿಸ್ ಹಾಗೂ ಆಸ್ಟಿಯೋಆರ್ಥ್ರೈಟಿಸ್ ಎಂದು ಎರಡು ವಿಧ.

ಮೊದಲನೆಯ ವಿಧದ್ದು ಸಾವಕಾಶವಾಗಿ ಬರುವಂಥಾದ್ದು; ಬರಿ ಕೀಲುಗಳಿಗಷ್ಟೇ ಅಲ್ಲ, ಸುತ್ತಲಿನ ಅಂಗಾಂಶಕ್ಕೂ ಸರಿಪಡಿಸಲು ಬಾರದಂತಹ ಹಾನಿಯನ್ನು ಉಂಟುಮಾಡುವಂಥಾದ್ದು. ನೋವು ಒಮ್ಮೆ ಹೆಚ್ಚಾದರೆ ಮತ್ತೊಮ್ಮೆ ಕಡಿಮೆಯಾಗುವುದು. ಹೀಗಾಗಿಯೆ ಎಷ್ಟೋ ಸಲ ಆ ಬಗ್ಗೆ ಅಲಕ್ಷ್ಯದ ಮನೋಭಾವ ತಲೆತೋರುವುದು. ರೋಗ ಉಲ್ಬಣಿಸಿ ಡಾಕ್ಟರರ ಬಳಿ ಹೋಗುವವೇಳೆಗೆ ಕೀಲುಗಳು ಪೂರ್ಣವಾಗಿ ವಿರೂಪಗೊಂಡಿರುವವು.

ಇದು ಎಲ್ಲ ಜನಾಂಗದವರಿಗೂ ಎಲ್ಲ ವಯಸ್ಸಿನವರಿಗೂ ಬರುವ ರೋಗ. ಜಗತ್ತಿನಲ್ಲಿ ಶೇಕಡಾ ಮೂರರಷ್ಟು ಜನ ಈ ವಿಧದ ಸಂಧಿವಾತದಿಂದ ಬಳಲುತ್ತಿದ್ದಾರೆಂದು ಒಂದು ಅಂದಾಜು. ಹೆಂಗಸರ ಮೇಲೆಯೆ ಈ ರೋಗಕ್ಕೆ ಪ್ರೀತಿ ಹೆಚ್ಚು-ರೂಮೆಟೈಡ್ ಆರ್ಥ್ರೈಟಿಸ್ ತಗುಲಿದವರ ಪೈಕಿ ಒಬ್ಬ ಗಂಡಸಾಗಿದ್ದರೆ, ಮೂವರು ಹೆಂಗಸಾಗಿರುತ್ತಾರೆ. ಆಯುಷ್ಯದ ಮೂರನೆ ಅಥವಾ ನಾಲ್ಕನೆಯ ದಶಕದಲ್ಲಿ ಇದು ಪ್ರಾರಂಭವಾಗುವ ಸಂಭವ ಹೆಚ್ಚು.

ರೂಮೆಟೈಡ್ ಆರ್ಥ್ರೈಟಿಸ್ ಏಕೆ ಬರುತ್ತದೆನ್ನುವುದು ಗೊತ್ತಿಲ್ಲ. ಶರೀರದ ರಕ್ಷಣಾತ್ಮಕ ವ್ಯವಸ್ಥೆಯಲ್ಲಿ ಅವಾಂಛಿತ ಬದಲಾವಣೆಯಾದದ್ದರಿಂದಲೇ ಇದು ಬರುತ್ತದೆಂದು ಹೇಳಲಾಗುತ್ತಿದೆಯಾದರೂ ಕೆಲವರಲ್ಲಿ ಮಾತ್ರ ಈ ಬದಲಾವಣೆ ಏಕೆ ಕಂಡುಬರುತ್ತಿದೆಯೆನ್ನುವುದಕ್ಕೆ ವೈದ್ಯಕೀಯದ ಬಳಿ ಉತ್ತರವಿಲ್ಲ.

ಬಹಳಷ್ಟು ಪ್ರಸಂಗಗಳಲ್ಲಿ ಸಣ್ಣಗೆ ನೋವು ಕಾಣಿಸಿಕೊಳ್ಳುವ ಮೂಲಕ ರೋಗ

ಪ್ರಾರಂಭವಾಗುತ್ತದೆ. ಬರಬರುತ್ತಾ ಸಂದುಗಳು ಸೆಟೆದುಕೊಳ್ಳುತ್ತವೆ. ಕೈ ಮೊಳಕೈ ಮುಂಗಾಲಿನಂತಹ ಸಂದುಗಳು ಉಬ್ಬಿಕೊಳ್ಳುತ್ತವೆ. ಮೊದಲು ಸಣ್ಣ ಸಂದುಗಳಲ್ಲಿ ಸಣ್ಣದಾದ ನೋವಿನೊಡನೆ ಕಾಣಿಸಿಕೊಂಡ ನೋವು ಕ್ರಮವಾಗಿ ದೊಡ್ಡ ಕೀಲುಗಳಿಗೂ ಹಬ್ಬುತ್ತದೆ. ಒಮ್ಮೊಮ್ಮೆ ತೀವ್ರವಾಗಿಯೆ ನೋವು ಪ್ರಾರಂಭವಾಗಬಹುದು. ಆಗ ಜ್ವರ ಬರಬಹುದು. ಅತಿಯಾಗಿ ಆಯಾಸವಾಗಬಹುದು. ಶರೀರದ ತೂಕ ಒಮ್ಮೆಲೇ ಇಳಿದು ಹೋಗಬಹುದು. ಆದರೆ ಹೀಗೆ ತೀವ್ರವಾಗಿ ರೋಗ ಪ್ರಾರಂಭವಾಗುವುದು ಸಂಧಿವಾತರೋಗಿಗಳ ಪೈಕಿ ಶೇಕಡಾ ಹತ್ತರಷ್ಟು ಜನರಲ್ಲಿ ಮಾತ್ರ.

ಮೊದಲು ಕೀಲುಗಳಲ್ಲಿ ನೋವು ಕಾಣಿಸಿದ್ದು ನರಗಳ ಸೆಳೆತಕ್ಕೆ ದಾರಿ ಮಾಡಿಕೊಡುತ್ತದೆ. ರೋಗ ಬಲಿತಂತೆ ಸಂದುಗಳು ವಿರೂಪವಾಗಿ ಹಾಳಾಗುವವು. ಡಾಕ್ಟರರಿಗೆ ಮೊದಲೆ ತೋರಿಸಿದರೆ ಸಂದುಗಳು ಹೆಚ್ಚು ವಿರೂಪಗೊಳ್ಳುವುದನ್ನು ತಪ್ಪಿಸಬಹುದು. ಈ ಬಗೆಯ ಸಂಧಿವಾತ ಕಂಡುಬಂದಾಗ ಡಾಕ್ಟರರು ರೋಗಿಗೆ ಸಂಪೂರ್ಣ ವಿಶ್ರಾಂತಿಯನ್ನು ವಿಧಿಸಿ ನೋವು ನಿವಾರಕಗಳನ್ನು ಕೊಡುತ್ತಾರೆ. ರೋಗದ ಕಾರಣ ಗೊತ್ತಾಗದ್ದರಿಂದ ರೋಗ ಲಕ್ಷಣಗಳನ್ನು ಪರಿಹರಿಸುವತ್ತಲೇ ಡಾಕ್ಟರರ ಗಮನ. ರೋಗವನ್ನು ಗುಣಪಡಿಸುವಂತಹ ಅಸ್ತ್ರ ಸದ್ಯಕ್ಕಂತೂ ವೈದ್ಯಕೀಯದ ಬಳಿ ಇಲ್ಲ.

ಆಸ್ಟಿಯೋಆರ್ಥ್ರೈಟಿಸ್ ಸಾಮಾನ್ಯವಾಗಿ ಮಧ್ಯ ವಯಸ್ಸು ದಾಟಿದ ನಂತರವೇ ಬರುವುದು ಹೆಚ್ಚು. ಸಂದುಗಳ ನಡುವಿನ ಮೃದ್ವಸ್ಥಿ ಕ್ಷಯಿಸುತ್ತಾ ಹೋಗುವುದೇ ರೋಗದ ಪ್ರಮುಖ ಲಕ್ಷಣ. ನೋವು ಹೆಚ್ಚಿದಾಗಲೂ ಸಂದು ಉಬ್ಬಿಕೊಳ್ಳುವುದಿಲ್ಲ. ತೊಡೆ, ಕಾಲು, ಸೊಂಟ ಹೀಗೆ ಹೆಚ್ಚು ಒತ್ತಡ ಬೀಳುವ ಸಂದುಗಳಿಗೇ ಈ ರೋಗ ಬರುವ ಸಂಭವ ಹೆಚ್ಚು. ಸಾವಕಾಶವಾಗಿ ಬರುವ ರೋಗವಿದು. ಸಂದುಗಳಲ್ಲಿ ಮೊದಲು ಸಣ್ಣದಾಗಿ ನೋವು ಕಾಣಿಸಿಕೊಂಡು ತಂತಾನೆ ಮಾಯವಾಗುವುದು. ಕೆಲದಿನಗಳ ನಂತರ ಮತ್ತೆ ಇದರ ಪುನರಾವರ್ತನೆ. ನೋವು ಬಹಳವಾಗಿರುವುದಿಲ್ಲವಾದ್ದರಿಂದ ಪ್ರಾರಂಭಿಕಾವಸ್ಥೆಯಲ್ಲಿ ರೋಗಿಗಳು ರೋಗವನ್ನು ಅಲಕ್ಷಿಸುವುದೇ ಹೆಚ್ಚು. ಸಂದುಗಳನ್ನು ಹೆಚ್ಚಿಗೆ ಉಪಯೋಗಿಸಿದಷ್ಟೂ ನೋವು ಹೆಚ್ಚು. ಅದಕ್ಕೆ ವಿಶ್ರಾಂತಿ ಕೊಟ್ಟಾಗ ನೋವು ಶಮನಗೊಳ್ಳುತ್ತದೆ. ರೋಗ ಉಲ್ಬಣಿಸಿದಂತೆಲ್ಲ ನೋವೂ ಹೆಚ್ಚುತ್ತದೆ. ಸಂದುಗಳಿಗೆ ವಿಶ್ರಾಂತಿ ಕೊಟ್ಟಾಗ ನೋವು ಕಡಿಮೆಯಾಗುವುದರಿಂದ ಸಂದುಗಳನ್ನು ನಿಷ್ಕ್ರಿಯವಾಗಿಸುವ ಪ್ರವೃತ್ತಿಯೂ ಹೆಚ್ಚುತ್ತದೆ. ರೋಗ ವೃದ್ಧಿಸಿದಾಗ ಸಂದುಗಳ ಸುತ್ತಲಿನ ಸ್ನಾಯುಗಳು ಪೆಡಸಾಗುವುದಲ್ಲದೆ ಕ್ಷಯಿಸಿದ ಮೃದ್ವಸ್ಥಿಯ ಜಾಗದಲ್ಲಿ ಬಿರುಸಾದ ಹೊಸ ಮೂಳೆ ಬೆಳೆಯುವುದರಿಂದ ಸಂದುಗಳನ್ನು ಚಲಿಸುವುದು ಕಠಿಣವೂ ವೇದನಾಮಯವೂ ಆಗುತ್ತದೆ. ಅಂತಹ ಸ್ಥಿತಿಯಲ್ಲಿ ಸಂದಿನಿಂದ ಕರಕರ ಶಬ್ದ ಕೇಳಿಬರುವುದೂ ಉಂಟು.

ಆಸ್ಟಿಯೋ ಆರ್ಥ್ರೈಟಿಸ್ ಬಂದಾಗ ಗ್ರಸ್ತವಾದ ಸಂದುಗಳಿಗೆ ವಿಶ್ರಾಂತಿ ಕೊಡುವುದು ಅತ್ಯಗತ್ಯ. ಏಣಿಯನ್ನಾಗಲಿ ಮೆಟ್ಟಿಲುಗಳನ್ನಾಗಲಿ ಹತ್ತದಿರುವುದೇ ಕ್ಷೇಮ.

ನೋವು ಬಂದಾಗ ಆ ಭಾಗಕ್ಕೆ ಬಿಸಿ ನೀರಿನ ಕಾವು ಕೊಟ್ಟರೆ ನೋವು ಶಮನಗೊಳ್ಳುತ್ತದೆ. ಇದರ ಬದಲು ನೋವಾದ ಸಂದುಗಳ ಮೇಲೆ ಇನ್‌ಫ್ರಾರೆಡ್ ಕಿರಣಗಳನ್ನು ಬೀರುವುದರಿಂದಲೂ ನೋವು ಕಡಿಮೆಯಾಗುವುದು. ಆದರೂ ನೋವಾದ ಭಾಗದ ಸುತ್ತ ಬಿಸಿನೀರಿನಲ್ಲಿ ಅದ್ದಿದ ಬಟ್ಟೆಯನ್ನು ಬಿಗಿಯುವುದೇ ಹೆಚ್ಚು

ಪ್ರಯೋಜನಕರವೆಂಬುದು ಅನುಭವಿಗಳ ಅಭಿಮತ. ಆದರೆ ನೋವನ್ನು ಶಮನಗೊಳಿಸಲು ಇಷ್ಟೇ ಉಪಾಯ ಸಾಲದು. ನೋವು ನಿವಾರಕಗಳೂ ಅಗತ್ಯವಾಗಬಹುದು. ಇದೂ ಅಲ್ಲದೆ ನರಗಳನ್ನು ಗಟ್ಟಿಗೊಳಿಸಲು, ಸಂದುಗಳಿಗೆ ಹೆಚ್ಚಿನ ಚಾಲನೆ ಒದಗಿಸಲು ಫಿಜಿಯೋಥೆರಪಿಯ ವ್ಯಾಯಾಮಗಳೂ ಉಂಟು. ಸ್ಥೂಲದೇಹಿಗಳಾದವರಿಗೇ ಆಸ್ಟಿಯೋ ಆರ್ಥ್ರೈಟಿಸ್ ಬರುವ ಸಂಭವ ಹೆಚ್ಚಾಗಿರುವುದರಿಂದ ಆ ರೋಗ ಬಂದ ಭೀಮಕಾಯರು ಶರೀರದ ತೂಕ ಇಳಿಸಿಕೊಳ್ಳುವುದು ಕ್ಷೇಮ. ತೂಕ ಕಡಿಮೆಯಾದಂತೆಯೇ ಸಂದುಗಳ ನೋವೂ ಕಡಿಮೆಯಾಗುತ್ತದೆ. ತೂಕ ಹೆಚ್ಚಿತೋ ಮತ್ತೆ ನೋವು ಹಾಜರು. ಆದ್ದರಿಂದ ಆಸ್ಟಿಯೋಆರ್ಥ್ರೈಟಿಸ್ ಬಂದ ಸ್ಥೂಲದೇಹಿಗಳು ಕಡಿಮೆ ಮಾಡಿಕೊಂಡ ಶರೀರದ ತೂಕವು ಹೆಚ್ಚಾಗದ ಹಾಗೆ ನೋಡಿಕೊಳ್ಳಲು ಸದಾ ಹೆಣಗಬೇಕಾಗುತ್ತದೆ.

## ಬೆನ್ನುನೋವು

ಒಂದು ಅಂದಾಜಿನ ಪ್ರಕಾರ ಮೂಳೆತಜ್ಞರ ಬಳಿ ಬರುವ ಪ್ರಕರಣಗಳಲ್ಲಿ ಅಪಘಾತಕ್ಕೆ ಸಂಬಂಧಿಸಿದವುಗಳನ್ನು ಹೊರತುಪಡಿಸಿದರೆ ಶೇಕಡಾ ಮೂವತ್ತರಷ್ಟು ಪ್ರಕರಣಗಳು ಬೆನ್ನುನೋವಿಗೇ ಸಂಬಂಧಿಸಿದವುಗಳು.

ಅನೇಕ ಕಾರಣಗಳಿಂದ ಬೆನ್ನುನೋವು ಬರಬಹುದು. ದೇಹದ ಭಾರ ಹೆಚ್ಚಾಗಿ ಬರಬಹುದು. ಸಂಧಿವಾತದಿಂದ ಬರಬಹುದು. ಮೂತ್ರಪಿಂಡದ ತೊಂದರೆಯಿಂದಾಗಿ ಬರಬಹುದು ಅಥವಾ ಬೆನ್ನುಮಣಿಯು ಸ್ವಸ್ಥಾನದಿಂದ ಸರಿದದ್ದರಿಂದ ಬರಬಹುದು. ಇಂತಹ ಪ್ರಸಂಗಗಳಲ್ಲಿ ಎಕ್ಸ್-ರೇ ತೆಗೆಯುವ ಮೂಲಕ ನಿದಾನಿಸಬಹುದು ಅಥವಾ ಎರಡು ವಿಭಿನ್ನ ಅವಧಿಗಳ ಮಧ್ಯೆ ತೆಗೆದ ಎಕ್ಸ್‌ರೇಗಳಿಂದ ರೋಗದ ಬೆಳವಣಿಗೆಯ ಗತಿಯನ್ನು ಗುರುತಿಸಿ ಚಿಕಿತ್ಸೆ ನೀಡಬಹುದು. ಆದರೆ ಇವೆಲ್ಲ ಕಾರಣಗಳ ಹೊರತಾಗಿಯೂ ಬೆನ್ನುನೋವು ಬರಬಹುದು. ಕುಳಿತು ಕೆಲಸ ಮಾಡುವಾಗ ಹೆಚ್ಚು ಕಾಲ ಬಗ್ಗಿಕೊಂಡೇ ಇರುವವರಿಗೆ ಬೆನ್ನು ಹುರಿಯ ಮೇಲೆ ಒತ್ತಡ ಹೆಚ್ಚಿ ಬೆನ್ನುನೋವು ಬರಬಹುದು. ಸರಿಯಾದ ರೀತಿಯಲ್ಲಿ ಕುಳಿತು ಕೆಲಸ ಮಾಡುವ ಪ್ರವೃತ್ತಿಯನ್ನು ರೂಢಿಸಿಕೊಂಡರೆ ಕಾಲಕ್ರಮೇಣ ಬೆನ್ನುನೋವು ಮಾಯವಾಗುವುದು. ಇನ್ನು ಕೆಲವರು ಗಂಟೆಗಟ್ಟಲೆ ಕುಳಿತುಕೊಂಡೇ ಕೆಲಸ ಮಾಡುವರು. ಅವರ ವೃತ್ತಿಯೇ ಹಾಗೆ. ಅಂಥವರು ಬೆನ್ನಿಗೆ ಆಧಾರವನ್ನು ಒದಗಿಸಿಕೊಂಡು ಕೆಲಸ ಮಾಡಿದರೆ ಬೆನ್ನು ನೋವಿನ ಭಯ ಅಷ್ಟಾಗಿ ಇರುವುದಿಲ್ಲ. ಮೂರು-ನಾಲ್ಕು ಮಕ್ಕಳಿಗೆ ಜನ್ಮ ಕೊಟ್ಟ, ಆಫೀಸಿನಲ್ಲಿ ಕೆಲಸ ಮಾಡುವ ಸ್ಥೂಲಕಾಯದ ತಾಯಂದಿರು ಕೆಲವೊಮ್ಮೆ ಬೆನ್ನುನೋವನ್ನು ತಂದುಕೊಳ್ಳುವುದುಂಟು. ಹೆಚ್ಚು ವಿಶ್ರಾಂತಿ ಪಡೆಯದೆ ಸರಿಯಾಗಿ ಕೆಲಸ ಮಾಡುವುದೇ ಇವರಿಗೆ ತಕ್ಕ ಔಷಧ.

ಆದರೆ ಸರಿಯಾದ ಭಂಗಿಯಲ್ಲಿ ಕುಳಿತುಕೊಂಡು ಕೆಲಸ ಮಾಡದೆ ಇರುವುದರಿಂದ ಹಾಗೂ ಬೆನ್ನುಹುರಿಗೆ ಆಧಾರವಾದ ಸ್ನಾಯುಗಳು ಬಲಹೀನವಾದ್ದರಿಂದ ಬೆನ್ನುನೋವು ಬರುವ ಸಂಭವವೇ ಹೆಚ್ಚು. ಕಾರಣ ಗೊತ್ತಾದ ಮೇಲೆ ಚಿಕಿತ್ಸೆ ನೀಡುವುದು ಸುಲಭ. ಬೆನ್ನುನೋವು ಅಸಹನೀಯವಾದಾಗ ಸಂಪೂರ್ಣ ವಿಶ್ರಾಂತಿ ಅವಶ್ಯ. ಆಗ ಬಿಸಿ ನೀರಿನ ಚೀಲದಿಂದಾಗಲಿ ಇನ್‌ಫ್ರಾರೆಡ್ ಕಿರಣಗಳನ್ನು ನೀಡುವುದರಿಂದಾಗಲಿ ನೋವನ್ನು ಶಮನಗೊಳಿಸಬಹುದು. ಮುಂಜಾನೆ ಹಾಗೂ ಸಂಜೆ ಹೀಗೆ ಎರಡೂ ಹೊತ್ತು

ನಿಯತವಾಗಿ ಈ ವ್ಯಾಯಾಮಗಳನ್ನು ಮಾಡಬೇಕು.

೧. ನೆಲಕ್ಕೆ ಮುಖಮಾಡಿ ಅಂಗಾತ ಮಲಗಿ ಇದೇ ಸ್ಥಿತಿಯಲ್ಲಿ ಕೈಗಳನ್ನು ಮೇಲಕ್ಕೆ ಎತ್ತಿ.

೨. ತಲೆಯನ್ನೂ ಕಾಲುಗಳನ್ನೂ ಎತ್ತಿ ಮೂರುನಾಲ್ಕು ಸೆಕೆಂಡುಗಳ ಕಾಲ ಇದೇ ಸ್ಥಿತಿಯಲ್ಲಿ ಇರಿ.

೩. ಅನಂತರ ನಿಧಾನವಾಗಿ ತಲೆಯನ್ನು, ಕಾಲುಗಳನ್ನು ಮೊದಲಿನ ಸ್ಥಾನಕ್ಕೆ ಇಳಿಸಿ. ಹತ್ತು ಸೆಕೆಂಡುಗಳವರೆಗೆ ವಿಶ್ರಾಂತಿ ಪಡೆಯಿರಿ. ನಂತರ ಈ ವ್ಯಾಯಾಮವನ್ನು ಮತ್ತೆ ಪ್ರಾರಂಭಿಸಿ. ಒಂದು ಸಮಯಕ್ಕೆ ಹತ್ತು ಸಲ ಈ ವ್ಯಾಯಾಮ ಸಾಕು.

ಇದರ ಬದಲಿಗೆ ಯೋಗಾಸನಗಳಲ್ಲಿ ಆಸಕ್ತಿಯಿರುವವರು ಭುಜಂಗಾಸನ, ಶಲಭಾಸನ ಹಾಗೂ ಧನುರಾಸನಗಳನ್ನು ಹಾಕಬಹುದು. ಈ ವ್ಯಾಯಾಮಗಳಿಂದಾಗಲಿ ಯೋಗಾಸನಗಳಿಂದಾಗಲಿ ಬೆನ್ನುನೋವು ಕಾಲಕ್ರಮೇಣ ಮಾಯವಾಗುವುದು. ಆದರೆ ಹಾಗೆಂದು ವ್ಯಾಯಾಮವನ್ನು ಬಿಟ್ಟುಬಿಡುವಂತಿಲ್ಲ. ಹಾಗೆ ಮಾಡಿದರೆ ಮತ್ತೆ ಅದು ಬಂದೀತು ಜೋಕೆ. ಸರಿಯಾದ ಭಂಗಿಯಲ್ಲಿ ಕುಳಿತುಕೊಂಡು ಕೆಲಸ ಮಾಡದೆ ಬೆನ್ನು ನೋವನ್ನು ತಂದುಕೊಂಡಿದ್ದರೆ ಸರಿಯಾದ ಭಂಗಿಯನ್ನು ರೂಢಿಸಿಕೊಳ್ಳುವುದೇ ನೋವು ಮತ್ತೆ ಬಾರದಹಾಗೆ ನೋಡಿಕೊಳ್ಳಲು ಇರುವ ಏಕೈಕ ಉಪಾಯ. ಸರಿಯಾದ ಅಂಗವಿನ್ಯಾಸವನ್ನು ಈ ಕೆಳಗೆ ಚಿತ್ರಗಳ ಮೂಲಕ ವಿವರಿಸಲಾಗಿದೆ.

ತಪ್ಪು





೧. ಪದಾರ್ಥವನ್ನು ಎತ್ತುವಾಗ ಭಾರವಾದ ಸಾಮಾನನ್ನೆತ್ತುವಾಗ ಮೊಣಕಾಲನ್ನು ಬಗ್ಗಿಸಿರಿ. ಬೆನ್ನನ್ನು ಬಗ್ಗಿಸಬೇಡಿ.

೨. ಟೇಬಲ್ಲಿನ ಮೇಲೆ ಕೆಲಸಮಾಡುವಾಗ ಬೆನ್ನನ್ನು ಅತಿಯಾಗಿ ತಗ್ಗಿಸಬೇಡಿ. ಸಾಧ್ಯವಿದ್ದಷ್ಟು ಅದು ನೇರವಾಗಿರುವಂತೆ ನೋಡಿಕೊಳ್ಳಿ.

೩. ಮೊಣಕಾಲೂರುವಾಗ ಮೊಣಕಾಲೂರಿ ಕೆಲಸ ಮಾಡುವಾಗ ಬೆನ್ನುಹುರಿ ಅರ್ಧಚಂದ್ರಾಕೃತಿಯಲ್ಲಿ ಕೊಂಚ ಬಗ್ಗಿರಲಿ.

೪. ಕೂಡುವಾಗ ಆಫೀಸಿನಲ್ಲಿ ಕೆಲಸ

ಸರಿ









ಮಾಡುವಾಗಲಾಗಲಿ ಕಾರು ನಡೆಸುವಾಗಲಾಗಲಿ ಬೆನ್ನಹಿಂದೆ ಮೆತ್ತೆಯನ್ನು ಇಟ್ಟುಕೊಳ್ಳಿ.

೫. ಮಲಗುವಾಗ ಮೆತ್ತನೆಯ ಫೋಮ್ ರಬ್ಬರಿನ ಹಾಸಿಗೆಗಳು ಆರಾಮದಾಯಕವೇನೋ ಸರಿ. ಆದರೆ ಆರೋಗ್ಯದ ದೃಷ್ಟಿಯಿಂದ ಅಷ್ಟು ಒಳ್ಳೆಯದಲ್ಲ. ಹಾಸಿಗೆ ಬಿರುಸಾಗಿದ್ದಷ್ಟೂ ಒಳ್ಳೆಯದು. ಬೆನ್ನು ನೋವು ಬರುವ ಸಂಭವ ಕಡಿಮೆ.









ಸಂಕ್ಷೇಪದಲ್ಲಿ ಹೇಳುವುದಾದರೆ ಸ್ಥೂಲ ದೇಹದಿಂದಾಗಿಯೂ ಸರಿಯಾದ ವ್ಯಾಯಾಮವಿಲ್ಲದ್ದರಿಂದಲೂ ಬೆನ್ನುನೋವು ಬರುವ ಸಂಭವ ಹೆಚ್ಚು. ಅದನ್ನು ನಿವಾರಿಸಲು ಮಾತ್ರೆಗಳನ್ನು ತೆಗೆದುಕೊಳ್ಳಬಹುದಾದರೂ ಅದೊಂದೇ ಉಪಾಯವಲ್ಲ. ಬೆನ್ನು ನೋವು ಮತ್ತೆ ಕಾಣಿಸಿಕೊಳ್ಳಬಹುದು. ಮೇಲಾಗಿ ಮಾತ್ರೆಗಳಿಂದ ಕೆಟ್ಟ ಉಪ ಪರಿಣಾಮಗಳಿದ್ದೇ ಇವೆ. ಸರಿಯಾದ ಅಂಗವಿನ್ಯಾಸದಿಂದ ಬೆನ್ನುನೋವು ಬಾರದಹಾಗೆ ನೋಡಿಕೊಳ್ಳಬಹುದು. ಅಲ್ಲದೆ ನಿಯತವಾಗಿ ವ್ಯಾಯಾಮ ಮಾಡುವ ಮೂಲಕ ಹೊಟ್ಟೆ ಹಾಗೂ ಬೆನ್ನಿನ ಸ್ನಾಯುಗಳು ಬಲವಾಗಿ ಇರುವಂತೆ ನೋಡಿಕೊಂಡು ತನ್ಮೂಲಕ ಬೆನ್ನುನೋವನ್ನು ತಡೆಗಟ್ಟಬಹುದು. ಆಧುನಿಕ ಯುಗದ ಅಭಿಶಾಪವಾದ ಇದಕ್ಕೆ ವ್ಯಾಯಾಮವೇ ಮದ್ದು. ಬೆನ್ನನ್ನು ಸರಿಯಾಗಿ ಬಳಸುವುದೇ ತಾರಕ.

## ತಲೆನೋವು

ಜೀವನದಲ್ಲಿ ಒಂದಲ್ಲೊಂದು ಸಲ ತಲೆನೋವು ಬಾರದಿರುವವರೇ ಇಲ್ಲ. ನಿಜವಾಗಿಯೆಂದರೆ ತಲೆನೋವಿಗಾಗಿ ಖರ್ಚಾಗುವಷ್ಟು ದುಡ್ಡು ಬಹುಶಃ ಬೇರೆ ಯಾವ ಔಷಧಿಗೂ ಖರ್ಚಾಗುವುದಿಲ್ಲ. ಈ ಔಷಧಗಳು ತಲೆನೋವನ್ನು ಹೋಗಲಾಡಿಸುತ್ತವೆಯೇನೋ ನಿಜ. ಆದರೆ ಉಪ ಪರಿಣಾಮವಾಗಿ ಬೇರೆ ವಿಧದ ತೊಂದರೆಗಳನ್ನೂ ತಂದೊಡ್ಡುತ್ತವೆ.

ತಲೆನೋವಿನ ಮಾತ್ರೆಗಳಲ್ಲಿ ಜನಪ್ರಿಯತೆಯ ದೃಷ್ಟಿಯಿಂದ ಅಗ್ರಗಣ್ಯವಾದದ್ದು ಆಸ್ಪಿರಿನ್. ಡಾಕ್ಟರರು ವಿಧಿಸಲಿ, ಬಿಡಲಿ ತಲೆನೋವು ಬಂದ ಕೂಡಲೆ ಅದನ್ನು ತೆಗೆದುಕೊಳ್ಳುವವರೇ ಹೆಚ್ಚು. ಆದರೆ ಅದೂ ಉಪ ಪರಿಣಾಮಗಳಿಂದ ಮುಕ್ತವಾಗಿಲ್ಲ. ಅದರಿಂದಾಗಿ ಹೊಟ್ಟೆ ಉರಿಯತೊಡಗುತ್ತದೆ. ಜಠರಾಮ್ಲದ ಪ್ರಮಾಣ ಹೆಚ್ಚಾಗುತ್ತದೆ. ಜಠರದಲ್ಲಿ ವ್ರಣವಾಗುತ್ತವೆ. ಒಮ್ಮೊಮ್ಮೆ ಆಂತರಿಕ ರಕ್ತಸ್ರಾವವಾಗುವುದೂ ಉಂಟು.

ಕೆಲವರು ಆಸ್ಪಿರಿನ್ನಿಗೆ ಅಲರ್ಜಿಕರಾಗಿರುವುದೂ ಇದೆ. ಇಂಥವರು ಆಸ್ಪಿರಿನ್ ಸೇವಿಸಿದರೆ

ಮೈತುರಿಸತೊಡಗುತ್ತದೆ. ಮೈಮೇಲೆ ಕೆಂಪಾದ ಗಾದರಿಗಳು ಕಾಣಿಸಿಕೊಳ್ಳುತ್ತವೆ. ಮೈ ಊದಿಕೊಳ್ಳುತ್ತದೆ. ಗಂಟಲು ಕೆರೆಯತೊಡಗುತ್ತದೆ. ಅಪರೂಪಕ್ಕೊಂಬಂತೆ ಶ್ವಾಸನಾಳಗಳು ಊದಿಕೊಂಡು ಮಾರ್ಗ ಕಿರಿದಾಗುತ್ತದೆ. ತೀರಾ ಕ್ವಚಿತ್ತಾದ ಪ್ರಸಂಗಗಳಲ್ಲಿ ಅಲರ್ಜಿಯು ಪ್ರಾಣಾಂತಿಕವಾಗಲೂಬಹುದು. ಆಸ್ಪಿರಿನ್ನಿನಿಂದಾಗಿ ಶರೀರದಲ್ಲಿ ಸಿ ಜೀವಸತ್ವದ ಪ್ರಮಾಣ ಕಡಿಮೆಯಾಗಿ ಹಲವಾರು ಅವಾಂತರಗಳಿಗೆ ಕಾರಣವಾಗಲೂಬಹುದು.

ತಲೆನೋವಿಗೆ ಮುಖ್ಯವಾದ ಕಾರಣಗಳು ನಾಲ್ಕು:

೧. ನೆತ್ತಿ, ಕುತ್ತಿಗೆ ಹಾಗೂ ಮುಖದ ಸ್ನಾಯುಗಳು ಸೆಟೆದುಕೊಳ್ಳುವುದು

೨. ಮಾನಸಿಕ ಉದ್ವೇಗ ಹಾಗೂ ನಿದ್ರಾರಾಹಿತ್ಯ

೩. ನೆಗಡಿ ಮತ್ತು ಸೈನುಸೈಟಿಸ್

೪. ಚಾಕ್ಷುಷ ದೋಷಗಳು

ಶಾಂತಸ್ವಭಾವದವರಿಗಿಂತ ತೀಕ್ಷ್ಣ ಸ್ವಭಾವದವರಿಗೇ ತಲೆನೋವು ಬರುವ ಪ್ರಸಂಗ ಹೆಚ್ಚು. ಸಿಟ್ಟಿನ ಅಥವಾ ಮಾನಸಿಕ ಒತ್ತಡದ ಸ್ಥಿತಿಯಲ್ಲಿದ್ದಾಗ ಕತ್ತು, ಬೆನ್ನು ಹಾಗೂ ಮುಖದ ನರಗಳು ಬಿಗಿದುಕೊಳ್ಳುತ್ತವೆ. ಮುಖ ಗಂಟು ಹಾಕಿಕೊಂಡಿರುವವರ ಮುಂದಲೆಯಲ್ಲಿ ಆಗಾಗ ನೋವು ಕಾಣಿಸಿಕೊಳ್ಳುವುದು. ಹಲ್ಲು ಕಡಿಯುವ ಚಟವಿದ್ದವರಿಗೆ ಹಣೆಯ ಭಾಗದಲ್ಲಿ ನೋವು ಕಾಣಿಸಿಕೊಳ್ಳುವುದು ಅಪರೂಪವಲ್ಲ. ಇದೆಲ್ಲ ಮಾನಸಿಕ ಉದ್ವೇಗವೇ ಹೆಚ್ಚಿನ ಸಂದರ್ಭಗಳಲ್ಲಿ ತಲೆನೋವಿಗೆ ಕಾರಣವೆನ್ನುವುದನ್ನು ಸೂಚಿಸುವುದು. ಒಮ್ಮೊಮ್ಮೆ ಬೆನ್ನಿನ ಮೇಲ್ಭಾಗದಿಂದ ಆರಂಭಗೊಂಡ ನೋವು ತಲೆಗೂ ಪಸರಿಸುವುದುಂಟು.

ಮಾನಸಿಕ ಉದ್ವೇಗವನ್ನು ಕಡಿಮೆ ಮಾಡಿಕೊಳ್ಳಲು ನಿಯಮಿತವಾಗಿ ಶವಾಸನ ಹಾಕುವುದು ಒಳ್ಳೆಯ ಉಪಾಯ.

ಕುತ್ತಿಗೆ ಹಾಗೂ ಬೆನ್ನಿನ ನರಗಳು ಸೆಟೆದುಕೊಂಡಾಗ ಆ ಜಾಗದಲ್ಲಿ ಮಾಲೀಸು ಮಾಡಿದರೆ ನೋವು ಶಮನಗೊಳ್ಳುವುದು.

ದೃಷ್ಟಿದೋಷದಿಂದಲೂ ತಲೆನೋವು ಬರುವುದುಂಟು. ಕಣ್ಣುಗಳನ್ನು ಸರಿಯಾಗಿ ಉಪಯೋಗಿಸದಿದ್ದರೆ ಅಥವಾ ಬಹುವಾದ ಶ್ರಮಕ್ಕೊಳಗಾಗುವಹಾಗೆ ಅವುಗಳನ್ನು ಉಪಯೋಗಿಸಿದರೆ ತಲೆನೋವು ಬರುವುದು. ನೇತ್ರತಜ್ಞರು ಆ ಕುರಿತು ಸರಿಯಾದ ಸಲಹೆ ನೀಡಬಲ್ಲರು.

ತಲೆ ಬುರುಡೆಯಲ್ಲಿ ಕಣ್ಣು ಹಾಗೂ ಮೂಗಿನ ಹೊರಳೆಗಳ ಸುತ್ತ ಇರುವ ಖಾಲಿ ಮಾರ್ಗಕ್ಕೆ ಸೈನಸ್ ಎಂಬ ಹೆಸರು. ನೆಗಡಿಯಾದಾಗ ಸೈನಸ್ಸಿನ ಒಳ ಆಚ್ಛಾದನ ಊದಿಕೊಳ್ಳುವುದುಂಟು. ಇದೇ ಸೈನುಸೈಟಿಸ್. ಇದರಿಂದಲೂ ತಲೆನೋವು ಬರುವುದುಂಟು.

ಮೇಲಿಂದ ಮೇಲೆ ನೆಗಡಿಯಾಗುವುದರಿಂದ ಅಥವಾ ಸೈನಸ್ ಊದಿಕೊಳ್ಳುವುದರಿಂದ ತಲೆನೋವು ಬರುತ್ತಿದ್ದರೆ ತಂಪು ಪದಾರ್ಥಗಳನ್ನು ವರ್ಜಿಸಬೇಕು. ಅಲ್ಲದೆ ದಿನಾಲು ಐದರಿಂದ ಹತ್ತು ನಿಮಿಷಗಳವರೆಗೆ ಹಬೆಯನ್ನು ಎಳೆದುಕೊಳ್ಳಬೇಕು. ಅದರಿಂದಾಗಿಯೂ ಎಷ್ಟೋ ಸಮಾಧಾನ ದೊರೆಯುವುದು.

ಅಪರೂಪಕ್ಕೊಂಬಂತೆ ರಕ್ತದ ಒತ್ತಡ ಹೆಚ್ಚಾದಾಗ ಅಥವಾ ಮಿದುಳಿಗೆ ಸೋಂಕು ಉಂಟಾದಾಗ (ಉದಾ: ಮೆನೆಂಜೈಟಿಸ್) ತಲೆನೋವು ಬರುವುದುಂಟು. ಅಂತಹ

ಪ್ರಸಂಗದಲ್ಲಿ ವಿಳಂಬ ಸಲ್ಲದು. ಕೂಡಲೆ ತೋರಿಸಿದರೆ ತಜ್ಞರಿಂದ ರೋಗವನ್ನೂ ತಲೆನೋವನ್ನೂ ತಹಬಂದಿಗೆ ತರಲು ಸಾಧ್ಯ.

ಹೀಗೆ ತಲೆನೋವು ಅತಿ ಸಾಮಾನ್ಯವಾದ ವ್ಯಾಧಿಯಾದರೂ ಬೇರೆ ವ್ಯಾಧಿಗಳ ಅಥವಾ ದೈಹಿಕ ದೋಷದ ಸೂಚನೆಯಾಗಿರಲೂಬಹುದು.

## ನಿದ್ರಾರಾಹಿತ್ಯ

ಈಗಿನ ಕಾಲದಲ್ಲಿ ನಿದ್ರಾರಾಹಿತ್ಯದಿಂದ ಬಳಲದವರೇ ಇಲ್ಲ. ಇದಕ್ಕೆ ಉದ್ವೇಗಯುತವಾದ ಜೀವನವಿಧಾನ ಒಂದು ಕಾರಣವಾದರೆ ದೈಹಿಕ ಪರಿಶ್ರಮದ ಅಭಾವ ಮತ್ತೊಂದು ಕಾರಣ. ಪರಿಣಾಮವಾಗಿ ನಿದ್ದೆ ಮಾತ್ರೆಗಳನ್ನು ಸೇವಿಸುವವರ ಸಂಖ್ಯೆ ದಿನದಿನ ಹೆಚ್ಚುತ್ತಿದೆ. ಈ ಮಾತ್ರೆಗಳು ಚಟಕಾರಕವಾಗಿವೆಯೆಂಬುದನ್ನೂ ಕಾಲಾಂತರದಲ್ಲಿ ಅನೇಕ ಅವಾಂಛಿತ ಉಪಪರಿಣಾಮಗಳಿಗೆ ಎಡೆಗೊಡುವವೆಂಬುದನ್ನೂ ಅವರು ಲಕ್ಷಿಸುವುದೇ ಇಲ್ಲ.

ನಿದ್ದೆ ಎಲ್ಲರಿಗೂ ಅವಶ್ಯವಾದರೂ ಒಬ್ಬರಿಗೆ ಇಂತಿಷ್ಟೇ ನಿದ್ದೆ ಬೇಕೆಂದು ಹೇಳುವಹಾಗಿಲ್ಲ. ಕೆಲವರಿಗೆ ನಾಲ್ಕೈದು ಗಂಟೆಗಳಷ್ಟು ಕಾಲ ಮಾತ್ರ ನಿದ್ದೆ ಬೇಕಾದರೆ ಇನ್ನು ಕೆಲವರಿಗೆ ಒಂಭತ್ತು-ಹತ್ತು ಗಂಟೆಗಳಾದರೂ ಸಾಕಾಗುವುದಿಲ್ಲ. ಮಹಾತ್ಮಾ ಗಾಂಧಿ, ವಿನ್‌ಸ್ಟನ್ ಚರ್ಚಿಲ್, ನೆಪೋಲಿಯನ್ ಬೋನಾಪಾರ್ಟನಂಥವರಿಗೆ ಕೆಲವೇ ಗಂಟೆಗಳಷ್ಟು ನಿದ್ದೆ ಬೇಕಾಗುತ್ತಿದ್ದರೆ ಲಾರ್ಡ್ ನ್ಯೂಫೀಲ್ಡನಂಥವರು ನಿದ್ದೆಯನ್ನೇ ಮಾಡುತ್ತಿರಲಿಲ್ಲವಾದರೂ ಕೊನೆಯವರೆಗೂ ಚಿತ್ತೈಕಾಗ್ರತೆಯನ್ನು ಉಳಿಸಿಕೊಂಡಿದ್ದರು. ಆದರೆ ಸ್ಥೂಲವಾಗಿ ಹೇಳುವುದಾದರೆ ಒಬ್ಬರಿಗೆ ದಿನಕ್ಕೆ ಆರು ತಾಸುಗಳಷ್ಟು ನಿದ್ದೆ ಸಾಕು.

ಮಾನಸಿಕ ಉದ್ವೇಗಕ್ಕೂ ನಿದ್ರಾರಾಹಿತ್ಯಕ್ಕೂ ಬಿಡಲಾರದ ನಂಟು. ಚಿಂತೆಯೂ ನಿದ್ದೆಯನ್ನು ಗಾವುದದಷ್ಟು ದೂರ ಓಡಿಸುತ್ತದೆ. ಈ ಮೊದಲೆ ಹೇಳಿದಹಾಗೆ ಶರೀರಕ್ಕೆ ಶ್ರಮವಾಗದಿದ್ದರೆ, ವಿಪರೀತವಾದ ಹವಾಮಾನವಿದ್ದರೆ, ಬಿಗಿಯಾದ ಉಡುಪನ್ನು ಧರಿಸಿದ್ದರೆ, ಹಾಸಿಗೆ ಸುಖಕರವಾಗಿರದಿದ್ದರೆ, ಮಲಗುವ ಮೊದಲು ಚಹ-ಕಾಫಿಗಳಂತಹ ಉತ್ತೇಜಕ ಪೇಯಗಳನ್ನು ಸೇವಿಸಿದ್ದರೆ ಸರಿಯಾಗಿ ನಿದ್ದೆ ಬರುವುದಿಲ್ಲ. ಅಪಚನ, ಗ್ಯಾಸ್ ತೊಂದರೆಗಳೂ ನಿದ್ರಾರಾಹಿತ್ಯವನ್ನು ಉಂಟುಮಾಡುತ್ತವೆ. ಅಲ್ಲದೆ ವಯಸ್ಸಾದಂತೆ ನಿದ್ದೆ ಬರುವುದೂ ಕಡಿಮೆಯಾಗುತ್ತದೆ.

ಸರಿಯಾಗಿ ನಿದ್ದೆ ಬಾರದಿದ್ದರೆ ನಿದ್ದೆಬರುವಂತಾಗಲು ಕೆಲವು ಸರಳ ಉಪಾಯಗಳಿವೆ. ರಾತ್ರಿಯ ಊಟ ಹಗುರವಾಗಿರಲಿ. ಆಗ ನೀವು ಹೊಟ್ಟೆ ಭಾರವಾಗುವ ಹಾಗೆ ಊಟ ಮಾಡಬೇಡಿರಷ್ಟೇ ಅಲ್ಲ, ಪಚನಕ್ಕೆ ಜಡವಾದ ಅಥವಾ ನಿಮಗೆ ಒಗ್ಗದಂತಹ ಪದಾರ್ಥಗಳನ್ನು ಸೇವಿಸಬೇಡಿ. ಊಟದ ಮಧ್ಯದಲ್ಲಾಗಲಿ ನಂತರದಲ್ಲಾಗಲಿ ದ್ರವಪದಾರ್ಥಗಳನ್ನು ಆದಷ್ಟು ಮಟ್ಟಿಗೆ ಸೇವಿಸಬೇಡಿ.

ನಿದ್ರಾರಾಹಿತ್ಯಕ್ಕೆ ದೈಹಿಕ ಪರಿಶ್ರಮಕ್ಕಿಂತ ಹೆಚ್ಚು ಪರಿಣಾಮಕರವಾದ ಔಷಧ ಇನ್ನೊಂದಿಲ್ಲ. ನಿಜ ಹೇಳಬೇಕೆಂದರೆ ಕಠಿಣ ಪರಿಶ್ರಮ ಮಾಡುವವರಿಗೆ ಅವರೆಷ್ಟೇ ಪ್ರಯತ್ನಿಸಿದರೂ ಜಾಗರಣೆ ಮಾಡಲು ಸಾಧ್ಯವಾಗುವುದಿಲ್ಲ. ಹಾಗೆಂದು ನೀವು ಜೀವನ ವಿಧಾನವನ್ನೇ ಬದಲಿಸಿಕೊಳ್ಳಬೇಕೆಂದಿಲ್ಲ. ರಾತ್ರಿಯೂಟವಾದ ನಂತರ ಒಂದು ಗಂಟೆಯಷ್ಟಾದರೂ ಸಮಯ ಹವಾಸೇವನೆಗೆ ಹೋಗುವ ಅಭ್ಯಾಸ ಹಾಕಿಕೊಂಡರೆ ಸಾಕು.

ನಿದ್ರೆ ಬರುವುದೇ ಇಲ್ಲ ಎನ್ನುವ ಪ್ರಸಂಗವಿದ್ದಾಗ ಮಲಗುವ ಮೊದಲು ಬಿಸಿನೀರಿನಿಂದ

ಸ್ನಾನ ಮಾಡಿರಿ. ಅದರಿಂದ ನಿದ್ದೆ ಬರಲು ಅನುಕೂಲವಾಗುವುದು.

ಡಾಕ್ಟರರಿಂದ ರಕ್ತದೊತ್ತಡವನ್ನೂ ರಕ್ತದಲ್ಲಿನ ಸಕ್ಕರೆಯ ಪ್ರಮಾಣವನ್ನೂ ಪರೀಕ್ಷಿಸಿಕೊಳ್ಳಿ. ಅಧಿಕ ರಕ್ತದೊತ್ತಡ ಹಾಗೂ ಮಧುಮೇಹಗಳಿಂದಲೂ ನಿದ್ರಾರಾಹಿತ್ಯ ಉಂಟಾಗುವುದುಂಟು.

ಮಲಗುವಾಗ ಸಡಿಲವಾದ ಉಡುಪನ್ನು ಧರಿಸಿರಿ. ನಿದ್ದೆ ಸರಿಯಾಗಿ ಬಾರದಿದ್ದರೆ ಸ್ವಲ್ಪ ಕಠಿಣವಾದ ಪುಸ್ತಕವನ್ನು ಓದಲು ಪ್ರಾರಂಭಿಸಿರಿ. ಕಣ್ಣುಗಳು ಭಾರವೆನಿಸಿದಾಗ ಓದುವುದನ್ನು ಬಿಟ್ಟು ಶವಾಸನ ಹಾಕಿರಿ.

ಎಲ್ಲಕ್ಕಿಂತ ಮುಖ್ಯವಾಗಿ ನಿದ್ರಾರಾಹಿತ್ಯದ ಬಗ್ಗೆ ಅಷ್ಟಾಗಿ ಚಿಂತಿಸಬೇಡಿ. ಆ ಚಿಂತೆಯೇ ಇನ್ನಷ್ಟು ನಿದ್ರಾರಾಹಿತ್ಯಕ್ಕೆ ಕಾರಣವಾಗಬಹುದು.

## ಮಲಬದ್ಧತೆ

ಮಲಬದ್ಧತೆಯೆನ್ನುವುದು ಎಲ್ಲರಿಗೂ ಒಮ್ಮೆಯಾದರೂ ಒಮ್ಮೆ ಉಂಟಾಗುವಂಥಾದ್ದೆ. ಮೇಲಿಂದ ಮೇಲೆ ಉಂಟಾಗತೊಡಗಿದರೆ ಮಾತ್ರ ಚಿಂತೆಯ ವಿಷಯವಾಗುವುದು. ಅನೇಕ ಡಾಕ್ಟರರು ಮಲಬದ್ಧತೆಯೆ ಕೆಲವು ರೋಗಗಳಿಗೆ ದಾರಿಮಾಡಿಕೊಡುವುದು ಎಂದು ಭಾವಿಸಿದ್ದಾರೆ.

ಆರೋಗ್ಯವನ್ನು ಕಾಯ್ದುಕೊಳ್ಳಲು ನಿಯಮಿತವಾಗಿ ಮಲವಿಸರ್ಜನೆಯಾಗುವುದು ಅವಶ್ಯ. ಹಾಗಾಗದಿದ್ದಾಗ ಅನೇಕರು ವಿರೇಚಕಗಳ ಮೊರೆಹೋಗುವುದಿದೆ. ಇವು ಮಲವಿಸರ್ಜನೆಯನ್ನು ಸರಾಗಗೊಳಿಸುವವಾದರೂ ಚಟಕಾರಕಗಳು. ಕಾಲಕ್ರಮೇಣ ಅದಿಲ್ಲದೆ ಮಲವಿಸರ್ಜನೆಯಾಗುವುದೇ ಇಲ್ಲ, ಅಷ್ಟೇ ಅಲ್ಲ, ಸೇವಿಸಬೇಕಾದ ಮಾತ್ರೆಗಳ ಸಂಖ್ಯೆಯೂ ಬೆಳೆಯುತ್ತಾ ಹೋಗುವುದು. ಈ ಮಾತ್ರೆಗಳು ಉಪಪರಿಣಾಮಗಳಿಂದ ಮುಕ್ತವಾಗಿಲ್ಲ. ಅವುಗಳನ್ನು ಮೇಲಿಂದ ಮೇಲೆ ಸೇವಿಸುವುದರಿಂದ ಕರುಳು ಪೆಡಸಾಗುತ್ತಾ ಹೋಗುವುದು. ಪೆಡಸಾದ ಹಾಗೆ ಪಚನಗೊಂಡ ಪದಾರ್ಥಗಳ ಸಾಗಾಟ ಇನ್ನಷ್ಟು ಕಠಿಣವಾಗುತ್ತಾ ಹೋಗುವುದು.

ಮಲಬದ್ಧತೆಯಿಂದಾಗುವ ತೊಂದರೆಗಳು ಅಷ್ಟಿಷ್ಟಲ್ಲ. ಅದರಿಂದಾಗಿ ವಾಯುಪ್ರಕೋಪ ತಲೆದೋರುವುದು. ನಿದ್ರಾರಾಹಿತ್ಯ ಉಂಟಾಗುವುದು. ಸರಿಯಾಗಿ ಹಸಿವೆಯಾಗುವುದಿಲ್ಲ. ಮೇಲಿಂದ ಮೇಲೆ ತಲೆನೋವು ಬರುವುದು. ಭಗಂದರ, ಮೂಲವ್ಯಾಧಿಗಳಿಗೆ ಕಾರಣವಾಗುವುದು. ಮೈಯಲ್ಲಿ ಲವಲವಿಕೆ ಇಲ್ಲದಿರುವುದು. ಅಮೆರಿಕದಲ್ಲಿ ನಡೆದ ಸಮೀಕ್ಷೆಯೊಂದರಲ್ಲಿ ದೊಡ್ಡ ಕರುಳಿನ ಕ್ಯಾನ್ಸರಿನಿಂದ ಬಳಲುವವರ ಪೈಕಿ ಈ ಮೊದಲು ಮಲಬದ್ಧತೆಗೆ ಒಳಗಾದವರೇ ಬಹಳವಾಗಿದ್ದರು.

ಸಮಯಕ್ಕೆ ಸರಿಯಾಗಿ ಊಟಮಾಡಿದರೆ ಮಲಬದ್ಧತೆ ಉಂಟಾಗುವ ಸಂಭವ ಕಡಿಮೆ. ಹಾಗೆಯೇ ನಿಶ್ಚಿತ ಸಮಯಕ್ಕೆ ಬಹಿರ್ದೆಶೆಗೆ ಹೋಗುವುದನ್ನು ರೂಢಿಸಿಕೊಂಡವರಿಗೂ ಹೀಗಾಗುವುದು ಕಡಿಮೆ.

ಕೇಕ್, ಬಿಸ್ಕೀಟು, ಮಿಲ್ಕ್ ಬ್ರೆಡ್ ಮುಂತಾದ ಸಂಸ್ಕರಣೆಗೊಂಡ ಆಹಾರ ಪದಾರ್ಥದಲ್ಲಿ ನಾರಿನ ಅಂಶ ತೀರಾ ಕಡಿಮೆ. ಇದರಿಂದಾಗಿ ಸೇವಿಸಿದ ಆಹಾರ ಜಠರಮಾರ್ಗದಲ್ಲಿ ಸುಲಭವಾಗಿ ಸಾಗುವುದಿಲ್ಲ.

ವ್ಯಾಯಾಮದಿಂದಾಗಿ ಕರುಳಿಗೂ ಚಾಲನೆ ದೊರೆಯುವುದು. ಅದರಿಂದಾಗಿ ಆಹಾರ ಪದಾರ್ಥಗಳ ಸಾಗಾಟವೂ ಸುಲಭವಾಗುವುದು. ವ್ಯಾಯಾಮವಿಲ್ಲದಿದ್ದರೆ ಸಹಜವಾಗಿಯೆ ಮಲಬದ್ಧತೆ ಉಂಟಾಗುವುದು. ಕುಳಿತಲ್ಲಿಯೇ ಕುಳಿತು ಕೆಲಸಮಾಡುವವರಿಗೆ ಮೇಲಿಂದ

ಮೇಲೆ ಮಲಬದ್ಧತೆಯುಂಟಾಗುವುದು ಇದೇ ಕಾರಣದಿಂದ.

ಕೆಲವರಿಗೆ ನೀರು ಕುಡಿಯುವ ಅಭ್ಯಾಸವೇ ಇರುವುದಿಲ್ಲ, ಇಂತಹ ಪ್ರಸಂಗದಲ್ಲಿ ಮಲ ಗಟ್ಟಿಯಾಗಿ, ತತ್ಪರಿಣಾಮವಾಗಿ ಮಲಬದ್ಧತೆ ಉಂಟಾಗುವುದು. ಮಲಬದ್ಧತೆ ಉಂಟಾದಾಗ ಪ್ರತಿದಿನ ಮುಂಜಾನೆ ಒಂದು ಗ್ಲಾಸ್ ಪಾನಕವನ್ನು ಸೇವಿಸಿರಿ. ಡಯಾಬಿಟೀಸ್ ಇದ್ದವರು ಸಕ್ಕರೆ ಹಾಕದ ಪಾನಕವನ್ನು ಕುಡಿಯಬಹುದು.

ಸಾಕಷ್ಟು ತರಕಾರಿಗಳನ್ನು- ಅದರಲ್ಲೂ ವಿಶೇಷತಃ ತೊಪ್ಪಲು ಪಲ್ಲೆಗಳನ್ನು- ಸೇವಿಸಿರಿ. ಮಲಬದ್ಧತೆ ತಂತಾನೆ ಹೊರಟು ಹೋಗುವುದು.

ಮಲವಿಸರ್ಜನೆಗೆ ನಿಯತವಾದ ಒಂದು ವೇಳೆಯನ್ನು ಹಾಕಿಕೊಳ್ಳಿರಿ. ಕ್ರಮೇಣ ಆ ವೇಳೆಗೆ ಮಲವಿಸರ್ಜನೆಯಾಗತೊಡಗುವುದು.

ಕುಳಿತಲ್ಲಿಯೇ ಕುಳಿತು ಕೆಲಸ ಮಾಡುವುದರಿಂದ ಮಲಬದ್ಧತೆ ಉಂಟಾಗಿದ್ದರೆ ಪ್ರತಿದಿನ ಒಂದು ಗಂಟೆಯಷ್ಟಾದರೂ ವಾಯುವಿಹಾರಕ್ಕೆ ಹೋಗುವುದನ್ನು ರೂಢಿಸಿಕೊಳ್ಳಿರಿ. ಇದರಿಂದ ಶರೀರಕ್ಕೆ ವ್ಯಾಯಾಮವೂ ಆಗುವುದು. ಅಲ್ಲದೆ ನಿಯತವಾದ ಮಲವಿಸರ್ಜನೆಗೂ ಅನುವಾಗುವುದು.

ಉಡ್ಡಯಣ, ಯೋಗಮುದ್ರೆ, ತ್ರಿಕೋಣಾಸನ, ಪಶ್ಚಿಮೋತ್ತಾಸನ ಹಾಗೂ ಮತ್ಸ್ಯೇಂದ್ರಾಸನಗಳು ಮಲಬದ್ಧತೆಯನ್ನು ನಿವಾರಿಸಲು ಬಹು ಮುಖ್ಯವಾದ ಆಸನಗಳು. ಈ ಯೋಗಾಸನಗಳಲ್ಲಿ ಯಾವುದಾದರೂ ಒಂದನ್ನು ಆಯ್ದುಕೊಳ್ಳಬಹುದು. ಆದರೆ ಪ್ರತಿದಿನ ತಪ್ಪದೆ ಆ ಆಸನವನ್ನು ಹಾಕಿದರೆ ಮಾತ್ರ ಪ್ರಯೋಜನಕರ. ಮಲಬದ್ಧತೆ ಉಂಟಾದಾಗ ಮಾತ್ರ ಹಾಕಿದರೆ ಉಪಯೋಗವಿಲ್ಲ.

ಮಲಬದ್ಧತೆ ತೀವ್ರವಾಗಿದ್ದರೆ ಎನಿಮಾ ತೆಗೆದುಕೊಳ್ಳಿರಿ. ಆದರೆ ಅದು ಚಟವಾಗದಂತೆ ಎಚ್ಚರ ವಹಿಸಿ.

ವಿರೇಚಕಗಳು ಚಟಕಾರಕವಾಗಿರುವುದೇ ಹೆಚ್ಚು, ಕಾಲಕ್ರಮೇಣ ಅವು ಜಠರವನ್ನು ಬಲಹೀನಗೊಳಿಸುವವು. ಜೀವಸತ್ವಗಳನ್ನೂ ಪೋಷಕಾಂಶಗಳನ್ನೂ ಶರೀರವು ಹೀರಿಕೊಳ್ಳದಹಾಗೆ ತಡೆಯುವ ಗುಣ ಕೆಲವು ವಿರೇಚಕಗಳಿಗಿದೆ. ಹೀಗಾಗಿ ಇಂತಹ ವಿರೇಚಕಗಳನ್ನು ತೆಗೆದುಕೊಳ್ಳುತ್ತಿದ್ದರೆ ಪೌಷ್ಟಿಕ ಆಹಾರವೂ ಪ್ರಯೋಜನಕ್ಕೆ ಬಾರದು. ಆದ್ದರಿಂದ ಡಾಕ್ಟರರು ವಿಧಿಸುವವರೆಗೆ ನೀವಾಗಿಯೆ ವಿರೇಚಕಗಳನ್ನು ತೆಗೆದುಕೊಳ್ಳಬೇಡಿ. ಮಲಬದ್ಧತೆ ನಿವಾರಣೆಯಾದೊಡನೆ ವಿರೇಚಕಗಳನ್ನು ತೆಗೆದುಕೊಳ್ಳುವುದನ್ನು ನಿಲ್ಲಿಸಿ.

ಕ್ರಮಬದ್ಧವಾದ ಜೀವನವು, ಮಾನಸಿಕ ಸ್ವಾಸ್ಥ್ಯಕ್ಕಲ್ಲದೆ ದೈಹಿಕ ಸ್ವಾಸ್ಥ್ಯಕ್ಕೂ ಒಳ್ಳೆಯದು. ಕ್ರಮಬದ್ಧವಾದ ಜೀವನ ನಡೆಸುವವರಿಗೆ, ಆರೋಗ್ಯಕರವಾದ ಜೀವನ ವಿಧಾನವನ್ನು ರೂಢಿಸಿಕೊಂಡಿರುವವರಿಗೆ ಮಲಬದ್ಧತೆ ಉಂಟಾಗುವುದು ತೀರಾ ಅಪರೂಪ ಎನ್ನುವುದನ್ನು ಮರೆಯದಿರಿ.

Printed and Published by S.K. KATOTE on behalf of
Laka Shikshana Trust at Samyukta Karnataka Press,
Koppikar Road, Hubli-580 020. (Phone: 364303)
No. 2, Residency Road, Bangalore-560 025 (Phone: 2213265)
**Managing Editor: K. SHAMARAO**
**Registered with the Registrar of Newspaper for India under No. 3633/57**




# ಲೋಕ ಶಿಕ್ಷಣ ಟ್ರಸ್ಟ್
# ಗ್ರಂಥಮಾಲೆಯ ಪ್ರಕಟಣೆಗಳು
## ಹುಬ್ಬಳ್ಳಿ-ಬೆಂಗಳೂರು

| | ಪುಸ್ತಕದ ಹೆಸರು | ಲೇಖಕರ ಹೆಸರು | ಬೆಲೆ |
|---|---|---|---|
| ೧. | ನನಗೆ ನಾನೇ ಮಾದರಿ | ಶ್ರೀ ಬಿ.ಡಿ. ಜತ್ತಿ | ರೂ. ೪೦-೦೦ |
| ೨. | ಶ್ರೀ ರಾಮದಾಸರು ಹೇಳಿದ ಕಥೆಗಳು | ಶ್ರೀ ಬಿ.ಡಿ. ಜತ್ತಿ | ,, ೧೫-೦೦ |
| ೩. | ಕೃಷ್ಣಾವತಾರ ಭಾಗ-೧ | ಮೂಲ: ಶ್ರೀ ಕೆ.ಎಂ. ಮುನ್ಷಿ<br>ಅನುವಾದ: ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮ | ,, ೨೦-೦೦ |
| ೪. | ಕೃಷ್ಣಾವತಾರ ಭಾಗ-೨ | -"- | ,, ೨೫-೦೦ |
| ೫. | ಕೃಷ್ಣಾವತಾರ ಭಾಗ-೩ | -"- | ,, ೨೦-೦೦ |
| ೬. | ಕೃಷ್ಣಾವತಾರ ಭಾಗ-೪ | -"- | ,, ೨೦-೦೦ |
| ೭. | ಕೃಷ್ಣಾವತಾರ ಭಾಗ-೫ | -"- | ,, ೨೫-೦೦ |
| ೮. | ಕೃಷ್ಣಾವತಾರ ಭಾಗ-೬ | -"- | ,, ೨೦-೦೦ |
| ೯. | ಕೃಷ್ಣಾವತಾರ ಭಾಗ-೭ | -"- | ,, ೨೦-೦೦ |
| ೧೦. | ಕೃಷ್ಣಾವತಾರ ಭಾಗ-೮ | -"- | ,, ೨೫-೦೦ |
| ೧೧. | ಕೃಷ್ಣಾವತಾರ ಭಾಗ-೯, ೧೦ | -"- | ,, ೨೦-೦೦ |
| ೧೨. | ಕರ್ನಾಟಕದಲ್ಲಿ ಕ್ವಿಟ್ ಇಂಡಿಯಾ ಚಳವಳಿ | ಡಾ. ಸೂರ್ಯನಾಥ ಕಾಮತ | ,, ೪೫-೦೦ |
| ೧೩. | ವಂದೇಮಾತರಂದಿಂದ ಜನಗಣಮನದವರೆಗೆ | ಶ್ರೀ ವಿ.ಎಚ್. ದೇಸಾಯಿ | ,, ೫೦-೦೦ |
| ೧೪. | ಗೀತಾ ನಿತ್ಯಪಾಠ | ಶ್ರೀ ರಂಗನಾಥ ದಿವಾಕರ | ,, ೩-೦೦ |
| ೧೫. | ಶ್ರೀ ಕೃಷ್ಣಾವತಾರದ ಕೊನೆಯ ಗಳಿಗೆಗಳು | ಪ್ರೊ. ಕೆ.ಎಸ್. ನಾರಾಯಣಾಚಾರ್ಯ | ,, ೨೦-೦೦ |
| ೧೬. | ಗಾಂಧೀಜಿ ನಾನು ಕಂಡಂತೆ | ಶ್ರೀ ರಂಗನಾಥ ದಿವಾಕರ | ,, ೧೦-೦೦ |
| ೧೭. | ನೆನಪಿನಂಗಳದಲ್ಲಿ | ಶ್ರೀ ಜಿ.ಎಂ. ಪಾಟೀಲ | ,, ೨೦-೦೦ |

ವಿ.ಸೂ. ಪುಸ್ತಕ ಮಾರಾಟಗಾರರಿಗೆ ಕನಿಷ್ಠ ೧೦ ಪ್ರತಿಗಳನ್ನು ತರಿಸಿದರೆ ಶೇ. ೨೫ರಷ್ಟು ಕಮೀಷನ್ ಕೊಡಲಾಗುವದು. ಪುಸ್ತಕಗಳು ಬೇಕಾದಲ್ಲಿ ತಕ್ಷಣ ಕೆಳಕಂಡ ವಿಳಾಸಕ್ಕೆ ಎಲ್ಲ ವಿವರಗಳೊಂದಿಗೆ ಡಿ.ಡಿ. ಅಥವಾ ಮನಿಯಾರ್ಡರ್ ಮೂಲಕ ಬರೆದು ತಿಳಿಸುವುದು. ಅಂಚೆ ವೆಚ್ಚ ಪ್ರತ್ಯೇಕ. ವಿ.ಪಿ.ಪಿ. ಸೌಲಭ್ಯ ಇರುವುದಿಲ್ಲ.

ಪ್ರಸಾರಾಂಗ ವ್ಯವಸ್ಥಾಪಕರು

ಸಂಯುಕ್ತ ಕರ್ನಾಟಕ, ಕೊಪ್ಪೀಕರ ರಸ್ತೆ, ಹುಬ್ಬಳ್ಳಿ-೨೦.

ಸಂಯುಕ್ತ ಕರ್ನಾಟಕ, ನಂ. ೨, ರೆಸಿಡೆನ್ಸಿ ರಸ್ತೆ, ಬೆಂಗಳೂರು-೨೫.

